# Are you holding or looking for ISO 9001/ ISO 14001 Certification ?

# BEWARE

**There is an international system for ensuring acceptability of ISO 9001/14001 certificates worldwide operated by the International Accreditation Forum.**

**Be sure you choose a certification body (CB) which can provide an accredited certificate recognized within the international system of equivalence.**

## BECAUSE

- There are CBs accredited by bodies ***not*** members of IAF
- There are CBs accredited by bodies ***not*** members of IAF Multi-Lateral arrangement for mutual recognition
- There are CBs accredited by members of IAF arrangement but ***not*** accredited for technical areas of your operations

## Save yourself from all headaches
## Rely on NABCB accredited certificates




*For any information, contact*

**NATIONAL ACCREDITATION BOARD FOR CERTIFICATION BODIES (NABCB)**
**Quality Council of India**
2nd Floor, Institution of Engineers Building, 2, Bahadur Shah Zafar Marg, New Delhi-110002, India
Tel: +91-11-2337-8056/57,9321,9260, Fax: +91-11-23379621, Email: nabcb@qcin.org

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಶ್ರೀಹರಿ, ರಾಂಚಂದ್ರ ಕೊಪ್ಪಲು, ವಿವೇಕಾನಂದ, ಕಮಲಂ ಅರಸು

ಮುಖಚಿತ್ರ : ಟಿ. ಎಲ್. ರಾಮಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಫ್ರಾನ್ಸ್‌ನ ಅಧ್ಯಕ್ಷ ಸರ್ಕೋಜಿ ಜಾರಿಗೆ ತರಲು ಹಾತೊರೆಯುತ್ತಿರುವ ಜನವಿರೋಧಿ ಆರ್ಥಿಕ ಸುಧಾರಣೆಗಳ ವಿರುದ್ಧ ಆ ದೇಶದ ಕಾರ್ಮಿಕ ವರ್ಗವೇ ಅಲ್ಲದೆ ಸಮಾಜದ ಎಲ್ಲ ವಿಭಾಗಗಳ ಸುಮಾರು ೩೦ ಲಕ್ಷ ಜನರು ಮುಷ್ಕರದಲ್ಲಿ ತೊಡಗಿದ್ದಾರೆ. ಒಂದು ತಿಂಗಳ ಅವಧಿಯಲ್ಲಿ ನಾಲ್ಕನೇ ಬಾರಿಗೆ ಫ್ರೆಂಚರು ಸರ್ಕಾರದ ವಿರುದ್ಧ ದೇಶದಾದ್ಯಂತ ಹೋರಾಟಕ್ಕಿಳಿದಿರುವುದು ಅಲ್ಲಿನ ಆರ್ಥಿಕ ಪರಿಸ್ಥಿತಿ ದಿನೇದಿನೇ ಹದಗೆಡುತ್ತಿರುವುದರ ಸೂಚಕವಾಗಿದೆ. ದೇಶದ ನಾನಾ ಕಡೆಗಳಲ್ಲಿ ಒಂದೇ ಸಮಯಕ್ಕೆ ಸರಿಸುಮಾರು ೨೪೦ ಪ್ರತಿಭಟನಾ ಕಾರ್ಯಕ್ರಮಗಳು ಜರುಗಿವೆಯೆಂದರೆ ಅಲ್ಲಿನ ಬಿಕ್ಕಟ್ಟಿನ ವ್ಯಾಪಕತೆಯನ್ನು ಊಹಿಸಿಕೊಳ್ಳಬಹುದಾಗಿದೆ. ಹಿಂದೊಮ್ಮೆ ೧೯೯೫ರಲ್ಲಿ ೩ ವಾರಗಳ ಕಾಲ ಸತತವಾಗಿ ಜರುಗಿದ ಮುಷ್ಕರದ ಪರಿಣಾಮವಾಗಿ ಇಡೀ ದೇಶವೇ ನಿಷ್ಕ್ರಿಯಗೊಂಡದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳೂ ಭಾಗವಹಿಸುತ್ತಿರುವುದು ಈ ಹೋರಾಟಗಳಿಗೆ ಹೊಸ ತಿರುವು ನೀಡಿದಂತಾಗಿದೆ. ಇವಾವುದಕ್ಕೂ ಜಗ್ಗದ ಸರ್ಕೋಜಿ ಅವರ ಕನ್ಸರ್‌ವಟಿವ್ ಸಮ್ಮಿಶ್ರ ಸರ್ಕಾರ ನೌಕರರ ನಿವೃತ್ತಿ ವಯಸ್ಸನ್ನು ೬೦ರಿಂದ ೬೨ಕ್ಕೆ ಮತ್ತು ಪಿಂಚಣಿಗೆ ಅರ್ಹರಾಗುವವರ ವಯಸ್ಸನ್ನು ೬೫ರಿಂದ ೬೭ಕ್ಕೆ ಏರಿಸಲು ಪಟ್ಟುಹಿಡಿದು ಕೂತಿದೆ. ಪ್ರತಿದಿನ ದುಡಿವ ವರ್ಗದ ಹೊಸ ವಿಭಾಗಗಳ ಜನರು ಬೀದಿಗಿಳಿದು ಮುಷ್ಕರದಲ್ಲಿ ಭಾಗವಹಿಸುತ್ತಿದ್ದಾರೆ. ಸರ್ಕಾರ ಅನುಸರಿಸುತ್ತಿರುವ ಬಂಡವಾಳಶಾಹಿ ನೀತಿಗಳಿಂದಾಗಿ ಉದ್ಭವಿಸಿರುವ ಈ ಬಿಕ್ಕಟ್ಟಿನಿಂದ ಫ್ರಾನ್ಸ್ ಪಾರಾಗುವ ಯಾವುದೇ ಸೂಚನೆಗಳೂ ಕಂಡುಬರುತ್ತಿಲ್ಲ. ಮಾತ್ರವಲ್ಲ, ಸುಧಾರಣೆಯ ಹೆಸರಿನಲ್ಲಿ ಜನವಿರೋಧಿ ಆರ್ಥಿಕ ನೀತಿಗಳಿಗೆ ಆಗಾಗ್ಗೆ ಮೊರೆಹೋಗುತ್ತಿರುವ ಯೂರೋಪಿಯನ್ ಒಕ್ಕೂಟದ ಸದಸ್ಯ ರಾಷ್ಟ್ರಗಳಾದ ಬ್ರಿಟನ್, ಪೋರ್ಚುಗಲ್, ಸ್ಪೇನ್, ಇಟಲಿ, ಜರ್ಮನಿ, ಗ್ರೀಸ್ ಮುಂತಾದ ರಾಷ್ಟ್ರಗಳು ಇದೇ ಬಗೆಯ ತೀವ್ರ ಬಿಕ್ಕಟ್ಟಿಗೆ ಸಿಲುಕಿ ತತ್ತರಿಸುತ್ತಿವೆ.

* * *

ಅಕ್ಟೋಬರ್ ೧೨, ೨೦೧೦ರಂದು ಜರುಗಿದ ಸಭೆಯಲ್ಲಿ ಭಾರತವು ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ತಾತ್ಕಾಲಿಕ ಸದಸ್ಯ ರಾಷ್ಟ್ರವಾಗಿ ಆಯ್ಕೆಯಾಗಿದೆ. ಸದ್ಯಕ್ಕಂತೂ ಕಾಯಂ ಸದಸ್ಯತ್ವ ದಕ್ಕುವ ಸಾಧ್ಯತೆಗಳಿಲ್ಲ ಎಂಬುದು ಇದರಿಂದ ಗೊತ್ತಾಗುತ್ತದೆ. ಭಾರತ ಭದ್ರತಾ ಮಂಡಳಿಯ ಸದಸ್ಯತ್ವ ಪಡೆದಿರುವುದು ಇದೇ ಮೊದಲ ಬಾರಿಯೇನಲ್ಲ. ಭದ್ರತಾ ಮಂಡಳಿಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ನೀಡಿರುವ ಪ್ರಾತಿನಿಧ್ಯ ಕೇವಲ ಔಪಚಾರಿಕವಷ್ಟೆ. ಕಾಯಂ ಸದಸ್ಯ ರಾಷ್ಟ್ರಗಳು ಎಲ್ಲಿಯವರೆಗೆ ಚರ್ಚೆಗೆ ಬರುವ ನಿರ್ಣಯ ಅಥವಾ ಶಾಸನಗಳನ್ನು ವಿರೋಧಿಸುವ ವೀಟೋ ಹಕ್ಕನ್ನು ಹೊಂದಿರುತ್ತವೆಯೋ ಅಲ್ಲಿಯವರೆಗೆ ಬಹುಮತದ ತೀರ್ಮಾನಗಳಿಗೆ, ಅಭಿಪ್ರಾಯಗಳಿಗೆ ಕಿಂಚಿತ್ತೂ ಬೆಲೆ ಇರುವುದಿಲ್ಲ ಎನ್ನುವುದು ತಿಳಿದಿರುವ ವಿಷಯ. ವಿಶ್ವಸಂಸ್ಥೆಯು ತನ್ನ ಹಿಂದಿನ ತೀಕ್ಷ್ಣತೆ, ಪ್ರಭಾವಗಳನ್ನು ಕಳೆದುಕೊಂಡು ಒಂದರ್ಥದಲ್ಲಿ ಪ್ರಬಲ ರಾಷ್ಟ್ರವಾದ ಸಾಮ್ರಾಜ್ಯಶಾಹಿ ಅಮೆರಿಕಾದ ಕೈಗೊಂಬೆಯಾಗಿದೆ. ಸಮಗ್ರವಾದ ಸುಧಾರಣೆಗಳನ್ನು ತಂದು ಈ ಸಂಸ್ಥೆಗೆ ಹೊಸ ಸ್ವರೂಪ ನೀಡುವುದು ಇಂದಿನ ಜರೂರು ಅಗತ್ಯ. ಭಾರತ ಅಲಿಪ್ತ ಚಳುವಳಿಯಲ್ಲಿ ಅಗ್ರಸ್ಥಾನದಲ್ಲಿದ್ದಾಗ ಇತರ ಅಭಿವೃದ್ಧಿಶೀಲ ದೇಶಗಳು ಅದರತ್ತ ನೋಡುತ್ತಿದ್ದವು. ಆದರೆ ಇಂದು ಭಾರತ ಅದರ ಸ್ಥಾನವನ್ನು ಕಳೆದುಕೊಂಡಿದೆ. ಭಾರತ ತಾನು ಅನುಸರಿಸುತ್ತಿರುವ ವಿದೇಶಾಂಗ ನೀತಿಯಿಂದಾಗಿ ಕ್ರಮೇಣ ಅಮೆರಿಕಾದ ಬಾಲಬಡುಕ ರಾಷ್ಟ್ರವಾಗುತ್ತಿದೆ. ಈಗ ಒದಗಿರುವ ಸ್ಥಾನವನ್ನು ಉಳಿಸಿಕೊಂಡು ಭಾರತ ವಿಶ್ವಸಂಸ್ಥೆಯ ಸಮಗ್ರ ಸುಧಾರಣೆಗೆ ಶ್ರಮಿಸಬೇಕಿದೆ.

ಅಮೆರಿಕಾ, ರಷ್ಯಾ, ಚೀನಾ, ಫ್ರಾನ್ಸ್ ಮತ್ತು ಬ್ರಿಟನ್ ಭದ್ರತಾ ಮಂಡಳಿಯ ಕಾಯಂ ಸದಸ್ಯತ್ವ ಹೊಂದಿರುವ ರಾಷ್ಟ್ರಗಳು. ಈ ರಾಷ್ಟ್ರಗಳಿಗೆ ಭದ್ರತಾ ಮಂಡಳಿಯಲ್ಲಿ ಚರ್ಚೆಗೆ ಬರುವ ನಿರ್ಣಯ ಅಥವಾ ಶಾಸನವನ್ನು ವಿರೋಧಿಸಿ ವೀಟೋ ಹಕ್ಕು ಚಲಾಯಿಸುವ ಹಕ್ಕಿದೆ. ಈ ೫ ರಾಷ್ಟ್ರಗಳೇ ಅಲ್ಲದೆ ಸರದಿಯ ಪ್ರಕಾರ ೧೦ ರಾಷ್ಟ್ರಗಳಿಗೆ ಭದ್ರತಾ ಮಂಡಳಿಯ ತಾತ್ಕಾಲಿಕ ಸದಸ್ಯರಾಗಿ ಆಯ್ಕೆಯಾಗಲು ಅವಕಾಶವಿದೆ. ಆದರೆ ಈ ರಾಷ್ಟ್ರಗಳಿಗೆ ಮೇಲೆ ಹೇಳಿದ ವೀಟೊ ಮಾಡುವ ಹಕ್ಕಿಲ್ಲ

ಸುಮಾರು ೬೫ ವರ್ಷಗಳ ಹಿಂದೆ, ಎಂದರೆ ೧೯೪೫ರಲ್ಲಿ ಅಸ್ತಿತ್ವಕ್ಕೆ ಬಂದ ವಿಶ್ವಸಂಸ್ಥೆ ಜಾಗತಿಕ ಸಮಸ್ಯೆಗಳು ತಲೆದೋರಿದಾಗ, ಇಲ್ಲವೇ ಹಿಂದುಳಿದ, ಅಭಿವೃದ್ಧಿಶೀಲ ರಾಷ್ಟ್ರಗಳ ಪ್ರಗತಿಗಾಗಿ ಮಧ್ಯಪ್ರವೇಶ ಮಾಡಲು, ನಿರ್ದಾಕ್ಷಿಣ್ಯವಾದ ನಿಲುವು ತೆಗೆದುಕೊಳ್ಳಲು ವಿಫಲವಾಗಿರುವುದೇ ಹೆಚ್ಚು. ಅಮೆರಿಕಾ, ಜರ್ಮನಿ, ಬ್ರಿಟನ್‌ಗಳಂತಹ ಪಾಶ್ಚಾತ್ಯ

(೬ನೇ ಪುಟಕ್ಕೆ)




ಸಂಪುಟ-೧೨ ಸಂಚಿಕೆ - ೪ ನವೆಂಬರ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com


## ಕರ್ನಾಟಕದ ರಾಜಕೀಯ ಅಧಃಪತನ

**ಸಂಪಾದಕೀಯ**

ರಾಜ್ಯದ ರಾಜಕೀಯ ವಿದ್ಯಮಾನಗಳನ್ನು ಅವಲೋಕಿಸಿದಾಗ ಅದು ಎಂಥಾ ಅಧೋಗತಿಗೆ ಇಳಿದಿದೆ ಎನ್ನುವುದು ಗೋಚರವಾಗುತ್ತದೆ. ಕೆಟ್ಟ, ನೀಚ, ಅನೀತಿಯುತ, ಕಳಂಕಿತ, ಭ್ರಷ್ಟ ರಾಜಕಾರಣ ಎಂಥವರನ್ನೂ ಬೇಸರಗೊಳಿಸುತ್ತದೆ. ಶಾಸನಸಭಾ ಸದಸ್ಯರು ಎಂದರೆ ಮಾರಾಟಕ್ಕಿರುವ ವಸ್ತುಗಳು, ನೀತಿ, ನ್ಯಾಯ, ನಿಷ್ಠೆಯಿಲ್ಲದ ನೀಚರು ಎನ್ನುವ ಮಟ್ಟಕ್ಕೆ ಇಳಿದಿದ್ದಾರೆ. ಕರ್ನಾಟಕದ ಇತಿಹಾಸದಲ್ಲಿ ಇಂಥ ಹೊಲಸು ರಾಜಕೀಯ ನಡೆದಿದ್ದಿಲ್ಲ. ರಾಜ್ಯಪಾಲ, ಶಾಸನಸಭೆಯ ಅಧ್ಯಕ್ಷ, ಮುಖ್ಯಮಂತ್ರಿ ಈ ಸ್ಥಾನಗಳಿಗೆ ಕಳಂಕವುಂಟಾಗಿದೆ. ಒಟ್ಟಿನಲ್ಲಿ ನಡೆದ ಘಟನೆಗಳು ಪ್ರಜಾಪ್ರಭುತ್ವ ವ್ಯವಸ್ಥೆಗೇ ಕುತ್ತು ತಂದಿದೆ, ಜನರು ತಲೆತಗ್ಗಿಸುವಂತೆ ಮಾಡಿದೆ. ನಾಚಿಕೆಗೇಡಿನ ಇಂಥ ವಿದ್ಯಮಾನಗಳಿಗೆ ಯಾರು ಹೊಣೆ ಎಂದರೆ ತತ್ವನಿಷ್ಠೆ, ಶಿಸ್ತುಬದ್ಧ ಎಂದು ಕರೆದುಕೊಳ್ಳುವ ಭಾರತೀಯ ಜನತಾಪಕ್ಷ, ಸ್ವಾತಂತ್ರ್ಯ ಹೋರಾಟದ ಪರಂಪರೆಯ, ನೂರು ವರ್ಷಗಳ ಇತಿಹಾಸದ ಕಾಂಗ್ರೆಸ್ ಪಕ್ಷ, ಚಿಲ್ಲರೆ ರಾಜಕಾರಣದಲ್ಲೇ ಮುಳುಗಿ, ಅಧಿಕಾರದಾಹದಿಂದ ಕೂಡಿರುವ ಜಾತ್ಯತೀತ ಜನತಾದಳ – ಈ ಮೂರು ಪಕ್ಷಗಳ ಬಣ್ಣ ಬಯಲಾಗಿದೆ. ಕರ್ನಾಟಕದ ಜನತೆ ಇವರಿಗೆ ತಕ್ಕ ಪಾಠ ಕಲಿಸಬೇಕಾಗಿದೆ.

ಅಕ್ರಮ, ಸಕ್ರಮಗಳ ಜಂಜಾಟದಲ್ಲಿ ಯಡಿಯೂರಪ್ಪ ನೇತೃತ್ವದ ಭಾಜಪ ಸರಕಾರ ಸದ್ಯಕ್ಕೇನೋ ಉಳಿದುಕೊಂಡಿದೆ. ಅನತಿ ಕಾಲದಲ್ಲೇ ಅದು ತಾನೇ ತೋಡಿಕೊಂಡಿರುವ ಹೊಂಡದಲ್ಲಿ ಕುಸಿದುಬೀಳುವುದು ಖಚಿತ. ಕರ್ನಾಟಕದಲ್ಲಿ ಕೆಳದರ್ಜೆಯ ಸಂದರ್ಭಸಾಧಕ ರಾಜಕಾರಣ ಪ್ರಾರಂಭವಾದ್ದೇ ಭಾಜಪ ಮತ್ತು ಜೆಡಿಎಸ್‌ನಿಂದ. ಜಾತ್ಯತೀತತೆಯ ಸೋಗನ್ನು ಕಳಚಿ ಜೆಡಿಎಸ್-ಭಾಜಪ ಕೈ ಜೋಡಿಸಿ ಅಧಿಕಾರ ಹಂಚಿಕೊಂಡು ಸರಕಾರ ರಚಿಸಿದಾಗ. ಆಗ ನಡೆದ ವಿದ್ಯಮಾನಗಳು, ನಡೆಸಿದ ಕೀಳು ರಾಜಕಾರಣ, ಅಧಿಕಾರ ಲಾಲಸೆ – ಇವು ಇಂದಿನ ಅಧಃಪತನಕ್ಕೆ ನಾಂದಿಯಾಗಿದ್ದವು. ರಾಜ್ಯದಲ್ಲಿ ಭಾಜಪ ಬಲಿಯುವುದಕ್ಕೆ, ಅಧಿಕಾರಕ್ಕೇರುವುದಕ್ಕೆ ಅನುವುಮಾಡಿಕೊಟ್ಟಿದ್ದು ಜೆಡಿಎಸ್ ಮತ್ತು ಕಾಂಗ್ರೆಸ್ಸು. ಮೊದಲಿನದು ಸಂದರ್ಭಸಾಧಕ, ಎರಡನೆಯದು ಅಶಿಸ್ತಿನ ಆಗರ. ಹೇಗಾದರೂ ಮಾಡಿ ಅಧಿಕಾರ ಉಳಿಸಿಕೊಳ್ಳಲು ಭಾಜಪದ ಯಡಿಯೂರಪ್ಪ ತಳೆದ ಅವತಾರವೆಲ್ಲ ತಿಳಿದಿರುವ ವಿಷಯ. ಮತ್ತೆ ಅನುಕಂಪದ ಅಲೆಯ ಮೇಲೆ ಚುನಾವಣೆಯಲ್ಲಿ ಅಧಿಕ ಸ್ಥಾನಗಳನ್ನು ಪಡೆದುಕೊಂಡು ಅಧಿಕಾರ ವಹಿಸಿಕೊಂಡ ಮೇಲೆ ಭಾಜಪ ಮೊದಲು ಅನುಸರಿಸಿದ್ದೇ ವಾಮಮಾರ್ಗ. ಮುಖ್ಯಮಂತ್ರಿ ಸ್ಥಾನವನ್ನು ಭದ್ರಪಡಿಸಿಕೊಳ್ಳಲು ನಡೆಸಿದ್ದು ಕುದುರೆ ವ್ಯಾಪಾರ. ಮಂತ್ರಿಗಿರಿ ಆಮಿಷ ಒಡ್ಡಿ ಮೊದಲು ಬುಟ್ಟಿಗೆ ಹಾಕಿಕೊಂಡಿದ್ದು ಸ್ವತಂತ್ರ ಸದಸ್ಯರನ್ನು . ಆನಂತರ ಕೈಹಾಕಿದ್ದು ವಿಪಕ್ಷಗಳ ಪಾಳಯಕ್ಕೆ. ಎಲ್ಲ ಆದಮೇಲೆ ಮುಲಾಜಿಲ್ಲದೆ ಅವರ ಕೈಬಿಟ್ಟರು. ಅದೇ ಮುಳುವಾಯಿತು. ಭಾಜಪದಲ್ಲಿ ಬಂಡಾಯದ ಬಿರುಗಾಳಿ ಬೀಸಿತು. ಕಾನೂನುಬಾಹಿರ, ನ್ಯಾಯಬಾಹಿರ ಚಟುವಟಿಕೆಗಳು ಅಸಹ್ಯಕರವಾಗಿ ನಡೆದುವು. ಶಾಸನಸಭೆಯಲ್ಲಿ ನಡೆದ ಗಲಭೆ, ದೊಂಬಿ, ಪೊಲೀಸರ ಪ್ರವೇಶ, ಸಭಾಪತಿಗಳ ಪೂರ್ವನಿಯೋಜಿತ ನಡವಳಿಕೆ, ರಾಜ್ಯಪಾಲರ ಆತುರದ ನಿರ್ಧಾರಗಳು ಮತ್ತು ಅವನ್ನು ಬದಲಿಸಿದ ರೀತಿ – ಎಲ್ಲವೂ ಈಗ ನ್ಯಾಯಾಲಯದ ಮುಂದೆ. ಎರಡು ಬಾರಿ ವಿಶ್ವಾಸಮತ ದಾಖಲಿಸಿದ ಮುಖ್ಯಮಂತ್ರಿ ಸದ್ಯಕ್ಕೆ ಪಾರಾಗಿದ್ದಾರೆ. ಎಲ್ಲ ಅಸಹ್ಯಕರ ಬೆಳವಣಿಗೆಗಳಿಗೂ ರಾಜ್ಯದ ಮೂರೂ ಪ್ರಮುಖ ಪಕ್ಷಗಳೇ ಹೊಣೆ. ಇವರ ನಡವಳಿಕೆಯಿಂದ ಜನ ಬೇಸತ್ತಿದ್ದಾರೆ. ಈಗ ನ್ಯಾಯಾಲಯದ ತೀರ್ಪಿನ ಮೇಲೆ ಮುಂದಿನ ಬೆಳವಣಿಗೆಗಳು ಅವಲಂಬಿಸಿವೆ. ಆದರೆ ಹುಟ್ಟುಗುಣ ಸುಟ್ಟರೂ ಹೋಗದು ಎನ್ನುವ ಹಾಗೆ ಭಾಜಪ ಮತ್ತೆ ಗಾಳ ಹಾಕುವ ಮಾರ್ಗವನ್ನೇ ಅನುಸರಿಸಲು ಹೊರಟಿದೆ.

ಅದೇನಾದರೂ ಆಗಲಿ. ಸರಕಾರ ಉಳಿಯುವುದು, ಉರುಳುವುದು ಬೇರೆ ವಿಷಯ. ಅಕ್ರಮ ಗಣಿಗಾರಿಕೆ, ಭ್ರಷ್ಟಾಚಾರ, ಭೂ ಕಬಳಿಕೆ ಮುಂತಾದ ಹಗರಣಗಳ ಸರಮಾಲೆಯನ್ನೇ ಹೊತ್ತಿರುವ ಭಾಜಪ ಸರಕಾರವನ್ನು ಕಿತ್ತೊಗೆಯುವುದು ಅಗತ್ಯ. ಇದಕ್ಕೆ ವಿಪಕ್ಷಗಳ ಮೇಲೆ ಅವಲಂಬಿಸಬೇಕಿಲ್ಲ. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಕಾಪಾಡುವುದರಲ್ಲಿ ಆಸಕ್ತವಾಗಿರುವ ಎಲ್ಲ ಪ್ರಗತಿಪರ ಶಕ್ತಿಗಳೂ ಒಂದುಗೂಡಿ ಜನಾಂದೋಳನವನ್ನು ಸಂಘಟಿಸಬೇಕಿದೆ. ಇದು ಸುದೀರ್ಘವಾದ ಹೋರಾಟ. ಅದಕ್ಕಾಗಿ ಸಜ್ಜಾಗಬೇಕಿದೆ. ಈ ಭ್ರಷ್ಟ ವ್ಯವಸ್ಥೆಯನ್ನೇ ಬದಲಿಸಬೇಕಾದ ಹೊಣೆ ಜನತೆಯ ಮೇಲಿದೆ.

## ಅಯೋಧ್ಯೆ : ಅತಾರ್ಕಿಕ ತೀರ್ಪು – ಮುಗಿಯದ ವಿವಾದ

ಅಯೋಧ್ಯೆಯ ಬಾಬ್ರಿ ಮಸೀದಿ ವಿವಾದಿತ ಸ್ಥಳದ ಒಡೆತನ ಕುರಿತು ಉಚ್ಚ ನ್ಯಾಯಾಲಯದ ಬಹುನಿರೀಕ್ಷಿತ ತೀರ್ಪು ಹೊರಬಿದ್ದಿದೆ. ಆರು ದಶಕಗಳಿಂದ ಉತ್ತರ ಪ್ರದೇಶದ ಅಲಹಾಬಾದ್ ಉಚ್ಚ ನ್ಯಾಯಾಲಯದಲ್ಲಿ ಕೊಳೆಯುತ್ತಿದ್ದ ಮೊಕದ್ದಮೆ ಕೊನೆಗೂ ಅಂತ್ಯಗೊಂಡಿದೆ. ತ್ರಿಸದಸ್ಯ ನ್ಯಾಯಪೀಠದ ನ್ಯಾಯಮೂರ್ತಿಗಳು ಸಾವಿರಾರು ಪುಟಗಳ ದಾಖಲೆಗಳು, ಸಾಕ್ಷ್ಯಾಧಾರಗಳು, ಪುರಾತನ ಗ್ರಂಥಗಳು ಮೊದಲಾದುವುಗಳನ್ನು ಪರಿಶೀಲನೆ ಮಾಡಿ ಮೂವರೂ ಪ್ರತ್ಯೇಕ ತೀರ್ಪುಗಳನ್ನು ನೀಡಿದ್ದಾರೆ ಇದರ ಬಗ್ಗೆ ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಸಾಕಷ್ಟು ಚರ್ಚೆಗಳೂ ನಡೆದಿವೆ, ನಡೆಯುತ್ತಿವೆ. ತೀರ್ಪು ವಿವಾದಿತ ಕಕ್ಷಿದಾರರು ಯಾರಿಗೂ ತೃಪ್ತಿ ತಂದಿಲ್ಲ, ಮತ್ತೆ ಅದು ನ್ಯಾಯಾಲಯದ, ಅಂದರೆ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲು ಏರಲಿದೆ.

ಸೆಪ್ಟೆಂಬರ್ ತಿಂಗಳ ಕೊನೆಯ ದಿನ ಹೊರಬಿದ್ದ ಈ ತೀರ್ಪು ನ್ಯಾಯ ನಿರ್ಣಯದ ಇತಿಹಾಸದಲ್ಲಿ ಹೊಸ ದಾಖಲೆಯಾಗಿರುವುದು, ವಿವಾದದ ಅಂತ್ಯಕ್ಕೆ ಆಧಾರ ಕಲ್ಪಿಸಲಿದೆ ಎಂದು ನಿರೀಕ್ಷಿಸಲಾಗಿತ್ತು. ಕನಿಷ್ಠವೆಂದರೆ ಸಂಬಂಧಪಟ್ಟ ಕಕ್ಷಿದಾರರಿಗೆ ಸಂಧಾನದ ವಿವಾದವನ್ನು ಬಗೆಹರಿಸಿಕೊಳ್ಳಲು ಅನುವಾಗಲಿದೆ ಎಂದು ಭಾವಿಸಲಾಗಿತ್ತು. ಆದರೆ ಅದು ಹುಸಿಯಾಯಿತು. ತೀರ್ಪು ಗಲಭೆಗಳಿಗೆ ಎಡೆಕೊಡಬಹುದು ಎಂದು ಸರಕಾರ ದೇಶಾದ್ಯಂತ ಬಿಗಿಭದ್ರತಾ

ವ್ಯವಸ್ಥೆಯನ್ನು ಏರ್ಪಡಿಸಿತ್ತು. ಯಾವುದೇ ಅಹಿತಕರ ಘಟನೆಗಳು ಜರುಗದೆ ಜನ ತೀರ್ಪು ಸ್ವೀಕರಿಸಿ, ಸಮಾಧಾನಚಿತ್ತದಿಂದ ಪ್ರತಿಕ್ರಿಯಿಸಿರುವುದು ಗಮನಾರ್ಹ. ಇದಕ್ಕಾಗಿ ವಿವಾದದಲ್ಲಿ ತೊಡಗಿದ್ದ ಎಲ್ಲ ಜನವಿಭಾಗಗಳೂ ಅಭಿನಂದನಾರ್ಹರು. ಭಾವೋದ್ರೇಕಕ್ಕೆ ಒಳಗಾಗದೆ, ಜನ ಇದು ೧೯೯೨ ಅಲ್ಲ, ೨೦೧೦ ಎಂಬುದನ್ನು ಪ್ರದರ್ಶಿಸಿದ್ದಾರೆ. ಧರ್ಮಕ್ಕಿಂತ ದೇಶದ ಮುನ್ನಡೆ ಮುಖ್ಯ ಎನ್ನುವುದನ್ನು ಸಾದರಪಡಿಸಿದ್ದಾರೆ.

ನ್ಯಾಯಾಲಯದ ತೀರ್ಪು ಅತಾರ್ಕಿಕವಾಗಿದೆ. ವಿವಾದಿತ ಭೂಮಿಯನ್ನು ಮೂರು ಭಾಗಗಳಾಗಿ ಹಂಚಿರುವುದು ನಿರಾಧಾರವಾದ್ದಾಗಿದೆ. ನ್ಯಾಯಪೀಠದ ಮುಂದೆ ಇದ್ದ ವಿವಾದಕ್ಕೂ ನೀಡಿರುವ ತೀರ್ಪಿಗೂ ಅರ್ಥಾರ್ಥ ಸಂಬಂಧವಿಲ್ಲ. ವಿಷಯದ ಪರಿಧಿಯನ್ನು ದಾಟಿ ಅಸಂಬದ್ಧವಾದ ರೀತಿಯಲ್ಲಿ ನ್ಯಾಯಾಲಯ ನಡೆದುಕೊಂಡಿದೆ. ತೀರ್ಪು ಪಂಚಾಯಿತಿ ಕಟ್ಟೆಯ ತೀರ್ಮಾನದಂತಿದೆ. ಇದು ಸಾಮಾನ್ಯವಾಗಿ ನ್ಯಾಯವಾದಿಗಳ ಅಭಿಪ್ರಾಯ. ನ್ಯಾಯಮೂರ್ತಿಗಳು ನ್ಯಾಯನಿರ್ಣಯದ ಆಚರಣೆಗಳನ್ನು, ಕಟ್ಟುಪಾಡುಗಳನ್ನು ಮೀರಿ ತಮ್ಮ ತೀರ್ಮಾನಗಳನ್ನು ಮಂಡಿಸಿದ್ದಾರೆ. ಮೂವರು ನ್ಯಾಯಾಧೀಶರೂ ಪ್ರತ್ಯೇಕವಾಗಿ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಕಂಡುಬರುವ ಒಂದು ಸಾಮಾನ್ಯ ಅಂಶವೆಂದರೆ ಅವರು ಸಾಕ್ಷ್ಯಾಧಾರಗಳಿಗಿಂತಲೂ ಹೆಚ್ಚಾಗಿ ಧಾರ್ಮಿಕ ನಂಬಿಕೆಗಳು ಮತ್ತು ಮತಶ್ರದ್ಧೆಗಳಿಗೆ ಒತ್ತುಕೊಟ್ಟು ಪ್ರಾಮುಖ್ಯ ನೀಡಿ, ಅವನ್ನೇ ಆಧರಿಸಿರುವುದು. ಇದು ನಿಜಕ್ಕೂ ಅಪಾಯಕಾರಿಯಾದ ಕೆಟ್ಟ ಸಂಪ್ರದಾಯವನ್ನು ಹುಟ್ಟಿಹಾಕಿದೆ. ಇದನ್ನು ಸರಿಪಡಿಸುವುದು ಸರ್ವೋಚ್ಚ ನ್ಯಾಯಾಲಯದ ಹೊಣೆಯಾಗಿದೆ.

ರಾಮಾಯಣ, ಮಹಾಭಾರತಗಳು ಮಹಾಕಾವ್ಯಗಳು, ಹಿಂದೂ ಧರ್ಮೀಯರಿಗೆ ಪವಿತ್ರ ಗ್ರಂಥಗಳು. ವೇದಶಾಸ್ತ್ರಗಳು, ವೇದಪುರಾಣಗಳು ಧರ್ಮಶಾಸ್ತ್ರಗಳು ನಂಬಿಕೆಗಳು. ಅವನ್ನು ಇತಿಹಾಸದ ಮಟ್ಟಕ್ಕೇರಿಸಿರುವುದು, ತೀರ್ಪಿಗೆ ಆಧಾರವಾಗಿ ತೆಗೆದುಕೊಂಡಿರುವುದು ಸರಿಯಲ್ಲ. ಪ್ರಮುಖ ಇತಿಹಾಸಕಾರರು ಇದನ್ನು ಸ್ಪಷ್ಟವಾಗಿ ಸಾರಿದ್ದಾರೆ. ತೀರ್ಪಿನಲ್ಲಿರುವ ಈ ಸಮೀಕರಣದ ದೋಷವನ್ನು ಎತ್ತಿ ತೋರಿಸಿದ್ದಾರೆ. ಇನ್ನೊಂದು ಅಂಶವೆಂದರೆ, ಬಾಬ್ರಿ ಮಸೀದಿಯು ಇಸ್ಲಾಮ್ ಧರ್ಮದ ಆಚರಣೆಗಳಿಗೆ ಬದ್ಧವಾಗಿ ನಿರ್ಮಾಣವಾಗಿಲ್ಲ ಎಂದು ಒಬ್ಬ ನ್ಯಾಯಾಧೀಶರು ಹೇಳಿದ್ದಾರೆ. ಇದು ಖಂಡಿತ ನ್ಯಾಯಾಲಯಕ್ಕೆ ಸಂಬಂಧವಿಲ್ಲದ ವಿಚಾರ. ಅಲಹಾಬಾದ್ ನ್ಯಾಯಾಲಯದ ತೀರ್ಪನ್ನು ಅಂಗೀಕರಿಸಿದ್ದೇ ಆದರೆ, ಮುಂದೆ ಯಾವುದೇ ದೇವಾಲಯ, ಮಸೀದಿ ಅಥವಾ ಇಗರ್ಜಿಗಳ ಅಸ್ತಿತ್ವವನ್ನು ಪ್ರಶ್ನಿಸಬಹುದು, ಒಡೆತನದ ವಿವಾದ ಎಬ್ಬಿಸಬಹುದು. ವಿವಾದವೇನೇ ಇದ್ದರೂ ಬಾಬ್ರಿ ಮಸೀದಿ ಹದಿನಾರನೇ ಶತಮಾನದಿಂದ ಅಸ್ತಿತ್ವದಲ್ಲಿದ್ದುದು ಐತಿಹಾಸಿಕ ಸತ್ಯ. ಅದರ ಹಿಂದೆ ಏನಿತ್ತು, ಏನಿರಲಿಲ್ಲ ಎಂಬುದಕ್ಕೆ ನಂಬಿಕೆ ಬಿಟ್ಟರೆ ಬೇರಾವುದೇ ಸಾಕ್ಷ್ಯಾಧಾರಗಳಿಲ್ಲ. ಹಾಗಾಗಿ ಅಲಹಾಬಾದ್ ನ್ಯಾಯಾಲಯದ ತೀರ್ಪು ಅಸಂಬದ್ಧ, ಅಮಾನ್ಯ. ವಿವಾದದ ಮಟ್ಟಿಗೆ ಅದು ಮುಗಿಯದ ಕತೆ. ಬಾಬರಿ ಮಸೀದಿಯ ಧ್ವಂಸ ಒಂದು ಅಪರಾಧ ಕೃತ್ಯ ಎಂಬ ಬಗ್ಗೆ ಮೂವರು ನ್ಯಾಯಾಧೀಶರೂ ಮೌನ ತಾಳಿರುವುದು ಶೋಚನೀಯ.

## ಅದ್ದೂರಿಯ ಕಾಮನ್‌ವೆಲ್ತ್ ಕ್ರೀಡಾಕೂಟ

**ಪ್ರ**ಥಮ ಬಾರಿಗೆ ಭಾರತದಲ್ಲಿ ನಡೆದ ೧೯ನೇ ಕಾಮನ್‌ವೆಲ್ತ್ ಕ್ರೀಡಾಕೂಟ ಅಕ್ಟೋಬರ್ ೧೪ರಂದು ವರ್ಣರಂಜಿತ ತೆರೆ ಕಂಡಿತು. ಜವಹರಲಾಲ್ ನೆಹರೂ ಕ್ರೀಡಾಂಗಣದಲ್ಲಿ ಎರಡೂವರೆ ಗಂಟೆಗಳ ಕಾಲ ನಡೆದ ಅದ್ದೂರಿಯ ಮುಕ್ತಾಯ ಸಮಾರಂಭದಲ್ಲಿ ೬೦,೦೦೦ ವೀಕ್ಷಕರಿದ್ದು, ಅಂದು ಜರುಗಿದ ಕಾರ್ಯಕಲಾಪಗಳು ಭಾರತವೂ ಸೇರಿದಂತೆ ಎಲ್ಲ ಕಾಮನ್‌ವೆಲ್ತ್ ರಾಷ್ಟ್ರಗಳ ಮೆಚ್ಚುಗೆಗೆ ಪಾತ್ರವಾಗಿವೆ. ಅಂದು ಜರುಗಿದ ಮನರಂಜನೆ ಕಾರ್ಯಕ್ರಮಗಳು ಅಭೂತಪೂರ್ವವಾಗಿದ್ದುವು ಎಂದರೆ ಉತ್ಪ್ರೇಕ್ಷೆಯಾಗಲಾರದು. ವಿವಿಧ ರಾಜ್ಯಗಳ ಕಲಾವಿದರು ಪ್ರದರ್ಶಿಸಿದ ಯುದ್ಧ ತಂತ್ರಗಳನ್ನೊಳಗೊಂಡ ಕಲರಿಯಪಟ್ಟು, ನಾಗಾ ಜನರ ವರಸೆಗಳು, ಥಂಗ್-ತಾ, ಗಟ್ಕಾ, ಸಿಲಂಬಂ, ಅಖಾಡ, ಧಿನ್ ಪಟ್ಟ ತಲ್ವಾರ್ ರಾಸುಗಳು ಪ್ರೇಕ್ಷಕರಿಗೆ ಮರೆಯಲಾಗದ ಅನುಭವ ತಂದುಕೊಟ್ಟವು. ಸಾರೆ ಜಹಾನ್‌ಸೆ ಅಚ್ಛಾ, ವಂದೇ ಮಾತರಂಗಳಂತಹ ದೇಶಭಕ್ತಿ ಗೀತೆಗಳನ್ನು ಶಾಲಾ ಮಕ್ಕಳು ಹಾಡುತ್ತ ಪದ ಚಲನೆ ಮಾಡುತ್ತಲೇ ತ್ರಿವರ್ಣ ಧ್ವಜ ಮತ್ತು ಅಶೋಕ ಚಕ್ರದ ಚಿತ್ತಾರವನ್ನು ಮೂಡಿಸಿದ ಬಗೆ, ಭೂಸೇನೆ, ವಾಯು ಹಾಗೂ ನೌಕಾ ಪಡೆಗಳು ನೀಡಿದ ವಿವಿಧ ಪ್ರದರ್ಶನಗಳು, ಜಪಾನಿ ಕಲೆಯ ಮೆರಗು, ಲೇಸರ್ ಶೋ ಮೊದಲಾದುವು ಅಂದಿನ ಸಂಜೆ ಹಬ್ಬದ ವಾತಾವರಣವನ್ನು ನಿರ್ಮಿಸಿದ್ದವು. ಆರಂಭದಲ್ಲೂ ಬೆಳಕಿನ ಹೊಂಗಿರಣ, ಸಮಾರೋಪದಲ್ಲೂ ಸಾಂಸ್ಕೃತಿಕ ಸಂಭ್ರಮ. ೧೨ ದಿನಗಳ ಹಿಂದೆ ಉದ್ಘಾಟನಾ ಸಮಾರಂಭದ ಮುನ್ನ ಸಿದ್ಧತಾ ಕಾರ್ಯಕ್ರಮಗಳಲ್ಲಿ ಸಂಭವಿಸಿದ ಹಲವಾರು ಆಭಾಸಗಳನ್ನು, ಹಗರಣಗಳನ್ನು ಹಿಂದಿಕ್ಕಿ ದಿಟ್ಟ ಹೆಜ್ಜೆ ಇಟ್ಟು ಮುನ್ನಡೆದ ಸಂಘಟನಾ ಸಮಿತಿ ತನಗಿದ್ದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದೆ.

ಸುಮಾರು ೭,೦೦೦ ಕ್ರೀಡಾಪಟುಗಳು ಭಾಗವಹಿಸಿದ್ದ ಈ ೧೯ನೇ ಕಾಮನ್‌ವೆಲ್ತ್ ಕ್ರೀಡಾಕೂಟ ಭಾರತದ ಕ್ರೀಡಾ ಇತಿಹಾಸದಲ್ಲೇ ಒಂದು ಹೊಸ ಅಧ್ಯಾಯಕ್ಕೆ ನಾಂದಿ ಹಾಡಿದೆ. ಮುಂದಿನ ದಿನಗಳಲ್ಲಿ ಜರುಗಲಿರುವ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸ್ಪರ್ಧೆಗಳಲ್ಲಿ ನಮ್ಮ ಯುವ ಕ್ರೀಡಾಪಟುಗಳಿಗೆ ಮತ್ತಷ್ಟು ಆತ್ಮವಿಶ್ವಾಸದಿಂದ ಭಾಗವಹಿಸುವ ದಿಶೆಯಲ್ಲಿ ೧೯ನೇ ಕಾಮನ್‌ವೆಲ್ತ್ ಕ್ರೀಡಾ ಚಿಮ್ಮು ಹಲಗೆ ಒದಗಿಸಿದೆ.

ಭಾರತದ ಮಟ್ಟಿಗೆ ಹೇಳುವುದಾದರೆ ಈ ಬಾರಿಯ ಕಾಮನ್‌ವೆಲ್ತ್ ಕ್ರೀಡಾಕೂಟ ಅತ್ಯಂತ ಮಹತ್ವಪೂರ್ಣವಾದುದು. ನಮ್ಮ ಕ್ರೀಡಾಪಟುಗಳು ಇದುವರೆಗೆ ಜರುಗಿರುವ ಕಾಮನ್‌ವೆಲ್ತ್ ಕ್ರೀಡಾಕೂಟಗಳಲ್ಲೇ ಮೊಟ್ಟಮೊದಲ ಬಾರಿಗೆ ೩೮

*(೮ನೇ ಪುಟಕ್ಕೆ)*

ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)

ರಾಷ್ಟ್ರಗಳು ವಿಶ್ವಸಂಸ್ಥೆಯು ತನ್ನೆಲ್ಲ ಸದಸ್ಯ ರಾಷ್ಟ್ರಗಳ ನೈಜ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸಲು ಅವಕಾಶ ನೀಡುತ್ತಿಲ್ಲ. ಜಗತ್ತಿನ ಹಲವಾರು ಕಡೆಗಳಲ್ಲಿ ಘರ್ಷಣೆಗಳು, ಸಮಸ್ಯೆಗಳು ಉದ್ಭವಿಸಿದಾಗ ಅವುಗಳ ಪರಿಹಾರಕ್ಕಾಗಿ ಸಹಕರಿಸುವುದರ ಬದಲು ಈ ರಾಷ್ಟ್ರಗಳು ಅಡ್ಡಗಾಲು ಇಟ್ಟದ್ದೇ ಹೆಚ್ಚು. ಎಂದೇ ವಿಶ್ವಸಂಸ್ಥೆಯನ್ನು ಸಾಮ್ರಾಜ್ಯಶಾಹಿಗಳ ಕಪಿಮುಷ್ಟಿಯಿಂದ ಮುಕ್ತಗೊಳಿಸ ಬೇಕಿದೆ. ಬೇರುಮಟ್ಟದ ಸಂಘಟನಾ ಸುಧಾರಣೆಗಳನ್ನು ಜಾರಿಗೆ ತಂದು ಅದರ ಕಾರ್ಯವೈಖರಿಯನ್ನೇ ಬದಲಿಸ ಬೇಕಿದೆ. ಈ ದಿಶೆಯಲ್ಲಿ ಭಾರತ, ಚೀನಾ, ಬ್ರೆಜಿಲ್, ದಕ್ಷಿಣ ಆಫ್ರಿಕಾದಂತಹ ಅಭಿವೃದ್ಧಿಶೀಲ ರಾಷ್ಟ್ರಗಳು ಮತ್ತು ಹಿಂದುಳಿದ ರಾಷ್ಟ್ರಗಳ ಜವಾಬ್ದಾರಿ ಹೆಚ್ಚಿನದು.

* * *

ಹಗರಣಗಳ ಪರ್ವವೆಂದೇ ಇಂದಿನ ಕಾಲಘಟ್ಟವನ್ನು ವಿಶ್ಲೇಷಿಸಬಹುದು. ಸದ್ಯದ ರಾಜಕಾರಣದ ಅನೈತಿಕತೆಯ ತಿಕ್ಕಾಟದಲ್ಲಿ ಈ ಹಗರಣಗಳು ಅಷ್ಟಾಗಿ ಬಹಿರಂಗ ಗೊಂಡಿಲ್ಲ. ಆದರೆ ಈ ಹಗರಣಗಳನ್ನು ಮರೆಮಾಚಲೆಂದೇ ರಾಜಕೀಯ ತಿಕ್ಕಾಟ ಆರಂಭವಾಯಿತೇನೋ ಎಂಬ ಅನುಮಾನ ಮೂಡುತ್ತಿದೆ. ಗಣಿ ಹಗರಣ, ಭೂಹಗರಣ, ನೇಮಕಾತಿ ಹಗರಣ... ಹೀಗೆ ಕಳೆದ ತಿಂಗಳಿಡೀ ಹಗರಣಗಳ ಪ್ರಸ್ತಾಪಕ್ಕೆ ರಾಜ್ಯದ ರಾಜಕಾರಣ ವೇದಿಕೆ ಯಾಗಿತ್ತು. ಮುಖ್ಯಮಂತ್ರಿ ಯಡಿಯೂರಪ್ಪನವರ, ಅವರ ಪುತ್ರರ ಪರವಾಗಿ ಡಿನೋಟಿಫೈ ಮಾಡಿದ ಹಗರಣ ಹೊರ ಬರುತ್ತಲೇ ಮುಖ್ಯಮಂತ್ರಿ ಯಡಿಯೂರಪ್ಪ ಮಾಜಿ ಮುಖ್ಯಮಂತ್ರಿ ಕುಮಾರಸ್ವಾಮಿಯವರ ಕರ್ಮಕಾಂಡವನ್ನು ಬಯಲಿಗಿಟ್ಟರು. ಈ ಸಂದರ್ಭದ ತಿಕ್ಕಾಟದಲ್ಲಿ ನಾಜೂಕಯ್ಯನಂತೆ ವರ್ತಿಸುತ್ತಿದ್ದ ಕಾಂಗ್ರೆಸ್ ನಾಯಕರಿಗೆ ಕಳೆದ ಹತ್ತು ವರ್ಷಗಳಲ್ಲಿನ, ಅಂದರೆ ಎಸ್. ಎಂ. ಕೃಷ್ಣ, ಧರಂಸಿಂಗ್ ಮುಖ್ಯಮಂತ್ರಿಗಳಾಗಿದ್ದ ಕಾಲದ ಡಿನೋಟಿಫಿಕೇಶನ್ ವಿಷಯ ಬಯಲಿಗೆ ಬಂತು. ಅಲ್ಲಿ ಆಳುವ, ವಿರೋಧಪಕ್ಷದ ಎಲ್ಲರೂ ಬೆತ್ತಲಾಗಿ ರಾಜ್ಯದ ಜನತೆಯ ಮುಂದೆ ನಿಲ್ಲುವಂತಾಯಿತು. ಮಾನ ಮುಚ್ಚಿಕೊಳ್ಳಲು ಏನೂ ಇರಲಿಲ್ಲ. ಹಾಗಾಗಿ ದಿಢೀರನೇ ಭಿನ್ನಮತದ ಕೊಳಕು ರಾಜಕಾರಣ ಇವರ ಎಲ್ಲ ಹಗರಣಗಳಿಗೂ ಕೊಳಕು ಬಟ್ಟೆಯಾಗಿ ಸುತ್ತಿಕೊಂಡಿದೆ. ಎಷ್ಟೇ ಮರೆಮಾಚಿದರೂ ಸುತ್ತಿಕೊಂಡ ಬಟ್ಟೆ ನೈತಿಕ ನೇಯ್ಗೆಯಿಂದ ಕೂಡಿಲ್ಲ, ಕಾರಣ ಇವರ ಹಗರಣಗಳು ಮರೆಮಾಚುವಂಥವಲ್ಲ.

ರಾಜಕಾರಣಿಗಳ ಭೂ ಹಗರಣಗಳು ಎಲ್ಲರಿಗೂ ಗೊತ್ತಿದ್ದದ್ದೇ. ಆದರೆ ಧರ್ಮದ ಹೆಸರಿನಲ್ಲಿ ರಾರಾಜಿಸು ತ್ತಿರುವ ನಮ್ಮ ಧರ್ಮಗುರುಗಳ ಭೂ ಹಗರಣಗಳನ್ನು ಯಾರೂ ಕೇಳುತ್ತಿಲ್ಲ. ಇತ್ತೀಚೆಗೆ ರವಿಶಂಕರ ಗುರೂಜಿ ಭೂ ಹಗರಣದಲ್ಲಿ ಭಾಗಿಯಾಗಿದ್ದಾರೆಂಬ ಆರೋಪ ಗಳು ಬಂದವು. ಈ ಅಂತರರಾಷ್ಟ್ರೀಯ ಖ್ಯಾತಿಯ ಹೈಟೆಕ್ ಗುರೂಜಿಯ ವಿರುದ್ಧ ಪ್ರತಿಭಟನೆಗಳೂ ನಡೆದವು. ಮುಂದೇನಾಯಿತೋ ಯಾರಿಗೂ ತಿಳಿಯದೆ ವಿಷಯ ನೇಪಥ್ಯಕ್ಕೆ ಸರಿಯಿತು.

ಇತ್ತೀಚೆಗೆ ಧಾರವಾಡ ನಗರದ ಪಕ್ಕದಲ್ಲಿ ಒಂದು ಸ್ವಾರಸ್ಯಕರ ಘಟನೆ ನಡೆದಿದೆ. ಯಾರೋ ಶಿವಾಚಾರ್ಯ ಎಂಬ ಸ್ವಾಮಿಗಳು ಹುಬ್ಬಳ್ಳಿಯಿಂದ ಬೆಳಗಾವಿಗೆ ಹೋಗುವ ರಾಷ್ಟ್ರೀಯ ಹೆದ್ದಾರಿಯ ಬೈಪಾಸ್‌ನಲ್ಲಿ ಹೊರಟಿದ್ದರಂತೆ. ಧಾರವಾಡದ ಪಕ್ಕ ದಾಂಡೇಲಿಗೆ ಹೋಗುವ ಅಡ್ಡರಸ್ತೆಯ ಹತ್ತಿರ ಅವರ ಕಾರು ಹೊರಟಾಗ ಅಲ್ಲೊಂದು ಪವಾಡ ನಡೆಯಿತಂತೆ. ಸ್ವಾಮೀಜಿಯರ ಕಾರಿಗೆ ಒಂದು ಹಸು ಅಡ್ಡಬಂದಿತಂತೆ. ಎಷ್ಟೇ ಹೊಡೆದರೂ ಹಸು ಹೋಗಲಿಲ್ಲವಂತೆ. ಹೀಗೆ ಎರಡು ಬಾರಿ ನಡೆದಾಗ ಸ್ವಾಮೀಜಿಯವರಿಗೆ ಅದೊಂದು ಏನೋ ಪವಾಡ ಇರಬೇಕು ಎಂದೆನಿಸಿ ಅಲ್ಲೆಲ್ಲೋ ಬಸವಣ್ಣ ವಾಸ ಮಾಡಿದ್ದಾನೆ ಎಂಬ "ಸತ್ಯ" ಕಂಡುಕೊಂಡಿದ್ದಾರೆ. ಹೆದ್ದಾರಿಯ ಪಕ್ಕದಲ್ಲಿಯೇ ಒಂದು ಬೆಟ್ಟ ಕಂಡಿದೆ. ಅದರ ಮೇಲೊಂದು ಹಾಳುಬಿದ್ದ ಗುಡಿ. ತಕ್ಷಣ ಸ್ವಾಮೀಜಿ ಯವರಿಗೆ ಜ್ಞಾನೋದಯವಾಗಿ ಆ ಬೆಟ್ಟದ ಮೇಲೆ ಹೋಗಿ ಅಲ್ಲೊಂದು ಗವಿಯನ್ನು ನಿರ್ಮಿಸಿ, ಅನ್ನ ನೀರು ತ್ಯಜಿಸಿ ಆ ಸ್ಥಳದಲ್ಲಿಯೇ ಉಪವಾಸ ಕುಳಿತಿದ್ದಾರೆ. ಇಷ್ಟಾದರೆ ಸಾಕು ಭಕ್ತರ ಹಿಂಡು ಧಾವಿಸಿ ಬರುವುದು ಖಂಡಿತ ಅಥವಾ ಧಾವಿಸುವಂತೆ ವ್ಯವಸ್ಥೆ ಮಾಡಲಾಗುತ್ತದೆ. ಕಳೆದ ತಿಂಗಳು ೨೮ರಂದು ಸ್ವಾಮೀಜಿಯವರು ಅನುಷ್ಠಾನದಿಂದ ಹೊರಬರುವ ದಿನ. ಅಂದು ದೊಡ್ಡ ಜಾತ್ರೆ, ಲಕ್ಷಾಂತರ ಜನ. ಸ್ವಾಮೀಜಿಯವರ ದರ್ಶನಕ್ಕೆ ನೂಕುನುಗ್ಗಲು, ಶಾಸಕ, ಸಮಾಜಸೇವಕರಾದಿಯಾಗಿ ಎಲ್ಲರೂ ಹಾಜರು. ಒಟ್ಟಾರೆ, ಸರಕಾರದ ವಶದಲ್ಲಿದ್ದ ಆ ಬೆಟ್ಟ ಸ್ವಾಮೀಜಿಯವರ ಪಾಲಿಗೆ ಸೇರಿದಂತಾಯಿತು. ಇದೇ ರೀತಿ ಅಲ್ಲಿಂದ ಸ್ವಲ್ಪ ದೂರದಲ್ಲಿ ಈಗಾಗಲೇ ಮಹಾರಾಷ್ಟ್ರದಿಂದ ಬಂದ ಸ್ವಾಮೀಜಿಯೊಬ್ಬರು ಅರಣ್ಯ ಭೂಮಿಗೆ ಬೇಲಿ ಹಾಕಿದ್ದಾರೆ. ಅದಕ್ಕೂ ರಾಜಕಾರಣಿಗಳ ಬೆಂಬಲವಿದೆ. ಹೀಗೆ ಕೋಟ್ಯಂತರ ಬೆಲೆಬಾಳುವ ಸರಕಾರಿ ಸ್ವಾಮ್ಯದ ಕಂದಾಯ ಭೂಮಿ, ಅರಣ್ಯಭೂಮಿಯನ್ನು ಕಬಳಿಸುವ ಈ ದೇಶದ ದೇವಮಾನವರಿಗೆ ಸಂವಿಧಾನ, ಕಾನೂನು ಅನ್ವಯವಾಗುವುದಿಲ್ಲ. ಪಕ್ಷಾತೀತವಾಗಿ ಇಂಥ ಜಗದ್ಗುರು ಗಳಿಗೆ, ದೇವಮಾನವರಿಗೆ ಭೂಮಿಯನ್ನು ನಮ್ಮ ರಾಜಕಾರಣಿಗಳು ಕೊಡುತ್ತಿರುವಾಗ ತಾವು ಋಣಮುಕ್ತ ರಾಗಲು ಜಗದ್ಗುರುಗಳು ರಾಜಕಾರಣಿಗಳನ್ನು ಕಾಪಾಡ ದಿದ್ದರೆ ಹೇಗೆ! ಧರ್ಮ, ದೇವರುಗಳ ಹೆಸರಿನಲ್ಲಿ ಲೂಟಿ ಮಾಡಿದ ಜಮೀನಿನ ಕುರಿತಾಗಿ ತನಿಖೆ ನಡೆಯಬೇಕು. ರಾಜಕಾರಣಿಗಳು ಇಂತಹ ತನಿಖೆಗಳಿಗೆ ಒತ್ತಾಯಿಸು ವುದಿಲ್ಲ. ಅಲ್ಲಿಗೆ, ಅರಮನೆ ಗುರುಮನೆಯನ್ನು ರಕ್ಷಿಸುತ್ತದೆ, ಗುರುಮನೆ ಅರಮನೆಯನ್ನು ರಕ್ಷಿಸುತ್ತದೆ. ಧರ್ಮವನ್ನು ರಕ್ಷಿಸು, ಧರ್ಮ ನಿನ್ನನ್ನು ರಕ್ಷಿಸುತ್ತದೆ ಎಂದರೆ ಇದೇ ನೋಡಿ.

* * *

ನಮ್ಮ ವಿಶ್ವವಿದ್ಯಾಲಯಗಳು ಇತ್ತೀಚೆಗೆ ವಿಪರೀತ ಸುದ್ದಿ ಮಾಡುತ್ತಿವೆ. ಸುದ್ದಿ ಮಾಡಬೇಕು. ಅಧ್ಯಯನ, ಸಂಶೋಧನೆ, ವಿಚಾರ ಸಂಕಿರಣ, ಚಿಂತನಮಂಥನ ನಡೆಸಿ ಹೊಸಹೊಸ ವಿಷಯಗಳನ್ನು ಹೊರಹಾಕಿ ಈ ವಿಶ್ವವಿದ್ಯಾಲಯಗಳು ಸುದ್ದಿ ಮಾಡಬೇಕು. ಆದರೆ ನಮ್ಮ ವಿಶ್ವವಿದ್ಯಾಲಯಗಳು ಬೇರೆ ರೀತಿಯಲ್ಲಿ ಕ್ರಿಯಾಶೀಲ ವಾಗಿವೆ. ರಾಜಕಾರಣಿಗಳನ್ನು ಮೀರಿಸುವ ಹಾಗೆ, ಅವರೊಂದಿಗೆ ಪೈಪೋಟಿಗೆ ಬಿದ್ದ ಹಾಗೆ ಹಗರಣಗಳನ್ನು ನಮ್ಮ ವಿಶ್ವವಿದ್ಯಾಲಯಗಳ ಮುಖ್ಯಸ್ಥರು, ಪ್ರಾಧ್ಯಾಪಕರು ನಡೆಸಿದ್ದಾರೆ. ಕರ್ನಾಟಕದ ಯಾವ ವಿಶ್ವವಿದ್ಯಾಲಯವೂ ಇಂಥ ಸುದ್ದಿಗಳಿಂದ ಹೊರತಾಗಿಲ್ಲ. ಇತ್ತೀಚೆಗೆ ಮೈಸೂರಿನ ವಿಶ್ವವಿದ್ಯಾಲಯದಲ್ಲೂ ನೇಮಕಾತಿ ಹಗರಣದಿಂದ ಸುದ್ದಿಯಾಗುತ್ತಲೇ ಅದು ರಾಜಕೀಯ ವಲಯದ ತಿಕ್ಕಾಟವಾಗಿ ಪರಿವರ್ತನೆಯಾಯಿತು. ಇದೀಗ ಕರ್ನಾಟಕ ವಿಶ್ವವಿದ್ಯಾಲಯದಿಂದ ಅಲ್ಲೊಬ್ಬ ಪ್ರಾಧ್ಯಾಪಕ ವಿದ್ಯಾರ್ಥಿನಿ ಯೊಬ್ಬರಿಗೆ ಲೈಂಗಿಕ ಕಿರುಕುಳ ಕೊಟ್ಟ ಸುದ್ದಿ ಬಂದಿದೆ. ತನಿಖಾ ಸಮಿತಿಯೊಂದು ಅವರ ಲೈಂಗಿಕ ಕ್ರಿಯಾಶೀಲತೆ ಸತ್ಯ ಎಂದು ವರದಿಕೊಟ್ಟನಂತರ ಸನ್ಮಾನ್ಯ ಪ್ರಾಧ್ಯಾಪಕರು ಅಮಾನತುಗೊಂಡಿದ್ದಾರೆ. ಸಹಜವಾಗಿಯೇ ಅವರು ಇದು ಸುಳ್ಳು ಎಂದು ಹೇಳಿದ್ದಾರೆ. ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರು, ಬುದ್ಧಿಜೀವಿಗಳ ಮೇಲೆ ಬರುವ ಲೈಂಗಿಕ ಹಗರಣದ ಆರೋಪ ಇದೇ ಮೊದಲನೆಯದೇನಲ್ಲ. ಲೈಂಗಿಕ ಹಗರಣ ಮಾತ್ರವಲ್ಲ ಪರೀಕ್ಷಾ ವಿಷಯ, ಪ್ರಶ್ನೆ ಪತ್ರಿಕೆ, ಅಭಿವೃದ್ಧಿ ಸಂಶೋಧನೆ ಇಂಥ ಹಲವಾರು ವಿಷಯಗಳಲ್ಲಿ ಹಗರಣಗಳು ಬಹಿರಂಗಗೊಂಡಿವೆ. ಸಂಶೋಧನಾ ವಿದ್ಯಾರ್ಥಿಗಳ ಸ್ಕಾಲರ್‌ಷಿಪ್‌ಅನ್ನೂ ನುಂಗಿದ ಘಟನೆಗಳು ನಡೆದಿವೆ. ಇಂಥ ಘಟನೆಗಳಿಂದ ಸುದ್ದಿಯಾಗುತ್ತಿರುವ ನಮ್ಮ ಅಕಾಡೆಮಿಕ್ ಸಂಸ್ಥೆಗಳು, ಬುದ್ಧಿಜೀವಿ ವಲಯಗಳು ನಮ್ಮ ಮುಂದಿರುವಾಗ ನಾವು ನಮ್ಮ ಶೈಕ್ಷಣಿಕ, ಸಾಹಿತ್ಯಿಕ ಅಭಿವೃದ್ಧಿಯನ್ನು ನಿರೀಕ್ಷಿಸುವುದಾದರೂ ಹೇಗೆ? ಇತ್ತೀಚೆಗೆ ಯು.ಜಿ.ಸಿ. ವೇತನ ಶ್ರೇಣಿಯಿಂದ ಮಾಸಿಕ ಸರಾಸರಿ ೭೦ ಸಾವಿರದಿಂದ ಲಕ್ಷ ರೂಪಾಯಿ ವೇತನ ಪಡೆಯುತ್ತಿರುವ ಈ ಬುದ್ಧಿಜೀವಿಗಳು ತಾವು ಪಡೆದ ವೇತನಕ್ಕೆ ಪ್ರತಿಯಾಗಿ ಈ ಸಮಾಜಕ್ಕೆ ಒಳ್ಳೆಯ ಸುದ್ದಿ ಕೊಡಲಿ ಎಂದು ಆಶಿಸೋಣ.

* * *

ಕರ್ನಾಟಕ ಸರಕಾರಕ್ಕಂತೂ ಪುಸ್ತಕ ನೀತಿ ಇಲ್ಲ, ಪುಸ್ತಕ ಪ್ರೀತಿಯೂ ಇಲ್ಲ. ಕನ್ನಡಿಗರ ಪುಸ್ತಕ ಪ್ರೀತಿಯೂ ಅಷ್ಟಕ್ಕಷ್ಟೆ. ಈ ಪುಸ್ತಕ ಪ್ರೀತಿಯನ್ನು ಬೆಳೆಸುವುದು ಹೇಗೆ? ಇದು ಕಾಡುತ್ತಿರುವ ಪ್ರಶ್ನೆ. ಹೀಗೊಂದು ಪ್ರಕರಣ ಸಾಂಸ್ಕೃತಿಕ ನಗರಿ ಎಂದು ಕರೆಯುವ ಮೈಸೂರಿನಲ್ಲಿ ದಸರಾ ಸಮಯದಲ್ಲಿ ಜರಗಿತೆಂದು ಪತ್ರಿಕೆಗಳಲ್ಲಿ ವರದಿಯಾಗಿದೆ : ಗೊಂಬೆ ಹಬ್ಬ ನವರಾತ್ರಿ ಸಮಯದಲ್ಲಿ ನಮ್ಮ ಸಂಸ್ಕೃತಿಯಲ್ಲಿ ಬೆಳೆದುಬಂದಿರುವ ಪರಂಪರೆ. ಅನುಕೂಲಸ್ಥರ ಮನೆಯಲ್ಲಿ, ಅಂದವಾಗಿ ಬೊಂಬೆ ಗಳನ್ನು ಅಲಂಕರಿಸಿ ಇಡುತ್ತಾರೆ. ಸಾಮಾನ್ಯರು ಕೂಡ ಮನೆಗಳಲ್ಲಿ ಗೊಂಬೆ ಕೂಡಿಸುತ್ತಾರೆ. ಈ ಸಲ ಮೈಸೂರು ನಗರದ ಪ್ರತಿ ವಾರ್ಡಿನಲ್ಲಿಯೂ ಚೆನ್ನಾಗಿ ಗೊಂಬೆ ಕೂಡಿಸಿರುವ ಕುಟುಂಬಗಳವರಿಗೆ ಪ್ರಶಸ್ತಿ ವಿತರಿಸಲು ಅಧಿಕಾರಿಗಳು ನಿರ್ಧರಿಸಿದರು. ಸದುದ್ದೇಶದಿಂದ ಅವರು ಬಹುಮಾನಿತರಿಗೆ ಪುಸ್ತಕಗಳನ್ನು ನೀಡಲು ನಿರ್ಧರಿಸಿದರು. ಇಂಥ ಒಳ್ಳೆ ಬುದ್ಧಿ ಬರುವುದೇ ಅಪರೂಪ. ಆದರೆ ನಡೆದದ್ದೇ ಬೇರೆ. ಪ್ರಶಸ್ತಿ ವಿತರಣೆ ದಿನ ಪುಸ್ತಕಗಳನ್ನು ನೀಡಿದ್ದನ್ನು ಕಂಡು ಬಹುಮಾನಿತರು ಪ್ರತಿಭಟನೆ ನಡೆಸಿದರು. ಪ್ರಶಸ್ತಿ ಪಡೆದುಕೊಂಡಿದ್ದ ಕೆಲವರು ತಮಗೆ ನೀಡಿದ್ದ ಪುಸ್ತಕಗಳನ್ನು ಹರಿದುಹಾಕಿದರು. ಸಮಾರಂಭವನ್ನು ಅರ್ಧದಲ್ಲೇ ನಿಲ್ಲಿಸಬೇಕಾಯಿತು! ಹೇಗಿದೆ ನೋಡಿ ನಮ್ಮ ಜನರ ಪುಸ್ತಕ ಪ್ರೀತಿ! ●




### ಅಕ್ಟೋಬರ್ ಸಂಚಿಕೆ

ಅಕ್ಟೋಬರ್ ತಿಂಗಳಿನ ಹೊಸತುವಿನ ಮುಖಪುಟದಲ್ಲಿ ಶ್ರೀ ರಾಜೀವ್ ತಾರಾನಾಥರ ಚಿತ್ರ ಹಾಕಿದ್ದು ಬಹಳ ಸಂತೋಷವಾಯಿತು.

ಸಂಗೀತ ಲೋಕದ ಸಾವಿರಾರು ಶಿಷ್ಯರ ಬಾಳಿಗೆ ಬೆಳಕಾಗಿ ಅಂಧರ ಬಾಳಿಗೆ ಜೀವಕೊಟ್ಟ ದಿ॥ ಪಂಚಾಕ್ಷರ ಗವಾಯಿಗಳು ಮತ್ತು ಪುಟ್ಟರಾಜ ಗವಾಯಿಗಳ ಚಿತ್ರಗಳು ನಿಮ್ಮ ಮುಂಬರುವ ಸಂಚಿಕೆಗಳಲ್ಲಿ ಬರಲೆಂದು ಆಶಿಸುವೆ.

ಧಾರವಾಡ **ರಾಜಶೇಖರ ಜಂಗಮಶೆಟ್ಟಿ**

ಕಿ. ರಂ. ಬೇರೆಯವರ ಅಭಿಪ್ರಾಯಗಳಿಗೆ ಗೌರವ ತೋರುತ್ತಿರಲಿಲ್ಲವೆಂಬ ಅಭಿಪ್ರಾಯ ಬರುವಂತೆ ಶ್ರೀ. ಅನಂತ ಕಲ್ಲೋಳ ಅವರು ಜಿ. ಆರ್. ಪ್ರಸ್ತಾಪಿಸಿದ್ದ ''ಅಂಜುವೆದೆ ನಮ್ಮದಲ್ಲ'' ಪ್ರಸಂಗವನ್ನು ಅರ್ಥೈಸಿಕೊಂಡಿದ್ದಾರೆ. ಕಿ.ರಂ. ಆಗಲಿ, ಜಿ. ಆರ್. ಆಗಲಿ ಹಾಗೆ ಭಾವಿಸಿದ್ದರೆಂದು ಅನಿಸುವುದಿಲ್ಲ. ಅವರು ಬೇಡವೆಂದರೂ ಕಿರುಹೊತ್ತಿಗೆಯನ್ನು ಬಲವಂತವಾಗಿ ಕಿ. ರಂ. ಅವರ ಕೈಗೆ ಆರೆಸ್ಸೆಸ್ ನವರು ತುರುಕಿದಾಗ ಅದನ್ನವರು ಉಂಡೆಮಾಡಿ ಬಿಸುಟರು. ಅವರೇ ಅವನ್ನು ಕಿತ್ತುಕೊಂಡು ಬಿಸಾಡಲಿಲ್ಲ ವೆಂಬುದನ್ನು ಗಮನಿಸಬೇಕು. ಹಾಗೆ ನೋಡಿದರೆ, ಕಿ.ರಂ. ಯಾವಾಗಲೂ ಇತರರ ಅಭಿಪ್ರಾಯಗಳನ್ನು ಸುಮ್ಮನೆ ಮೂದಲಿಸುತ್ತಿರಲಿಲ್ಲ; ವಿಚಾರಮಾಡಿ ಅದನ್ನು ವಿನಯ ದಿಂದ ಮತ್ತು ಸ್ಪಷ್ಟವಾಗಿ ನಿರಾಕರಿಸುತ್ತಿದ್ದರು, ಅಷ್ಟೆ.

ಬೆಂಗಳೂರು **ಎನ್. ವಿ.**

ಇತ್ತೀಚಿನ 'ಹೊಸತು' ಮುಖಪುಟಗಳು, ಇತರೆ ಪತ್ರಿಕೆಗಳು ಅಸೂಯೆಪಡುವಷ್ಟು ಚೆನ್ನಾಗಿ ಮೂಡಿ ಬರುತ್ತಿವೆ, ಅಕ್ಟೋಬರ್ ೨೦೦೦ರ ಸಂಚಿಕೆಯೂ ಇದಕ್ಕೆ ಹೊರತಲ್ಲ. ಹಲವು ಪತ್ರಿಕೆಗಳೂ, ಹೆಣ್ಣುಮಕ್ಕಳ ಆಕರ್ಷಕ (ಅವರು ಭಾವಿಸುವಂತೆ)ವೆಂದುಕೊಂಡ ಮುಖಪುಟವನ್ನು ಹೊರತರುತ್ತಿರುವಾಗ 'ಹೊಸತು' ಕಲಾವಿದರೊಬ್ಬರ ಚಿತ್ರವನ್ನು ಹಾಕಿರುವುದು ನಿಜಕ್ಕೂ ಶ್ಲಾಘನೀಯ.

ಆಗಾಗ್ಗೆ ಮುಖಪುಟದಲ್ಲಿ ಖ್ಯಾತ ಕಲಾವಿದರು ಬರುತ್ತಿರಲಿ, ಪತ್ರಿಕೆಯ ಘನತೆ ಹೆಚ್ಚುತ್ತದೆ.

ಮುಖ ಗಂಟಿಕ್ಕಿಕೊಂಡ ಪಂಡಿತ್ ರಾಜೀವ್ ತಾರಾನಾಥರು... ತಮ್ಮಲ್ಲಿ ಎಷ್ಟು ಭಾವನೆಗಳ/ರಾಗಗಳ ಗಂಟಿಟ್ಟುಕೊಂಡಿದ್ದಾರೆ ? ಅವರ ಕುರಿತು ಪ್ರಕಟವಾಗಿರುವ ಲೇಖನ ವಿಜಯವಾಮನ ಅವರ ಲೇಖನಿಯಿಂದ ಉತ್ತಮವಾಗಿ ಮೂಡಿಬಂದಿದೆ.

ಇನ್ನು ಕೆ. ಎಸ್. ಪಾರ್ಥಸಾರಥಿಯವರ 'ಒಳ ಹರಿವು... ಹೊರ ಹರಿವು' ಲೇಖನ ಕುತೂಹಲ ಹುಟ್ಟಿಸಿತು.

ಎಷ್ಟೇ ಗಿಮಿಕ್ ಮಾಡಿದರೂ ನಮ್ಮ ರಾಜ್ಯ ಸರ್ಕಾರವು ಬಂಡವಾಳವನ್ನು ಆಕರ್ಷಿಸಲು ವಿಫಲವಾಗಿದೆ ಎಂಬುದು ವಿದೇಶೀ ಹೂಡಿಕೆಯ ಕೋಷ್ಟಕಗಳಿಂದ ತಿಳಿಯುತ್ತದೆ. ಶೇಕಡ ೬ರಷ್ಟು ಬಂಡವಾಳವನ್ನು ಆಕರ್ಷಿಸಲು ಕಾರಣ ನಮ್ಮ ಸರ್ಕಾರದ ಕಳಪೆ ಪ್ರದರ್ಶನ. ವಿದ್ಯುತ್ ಉತ್ಪಾದನೆ ಕೆಳಗಿಳಿಯುತ್ತಿರುವಾಗಲೂ ''ನಿಮಗೆ ೨೪ ಗಂಟೆ ವಿದ್ಯುತ್ ಕೊಡ್ತೇವೆ, ಬನ್ನಿ'' ಎಂದು ಎಷ್ಟು ಗಂಟಲು ಹರಿದುಕೊಂಡರೂ ಇಲ್ಲಿಗೆ ಬಂದು ಹಣ ಹೂಡಲು ವಿದೇಶಿಯರು ಉತ್ಸಾಹ ತೋರುತ್ತಿಲ್ಲ! ಇದಕ್ಕಿಂತ ಅವಮಾನ ಇನ್ನೇನಿದೆ ?

ಮೈಸೂರು **ಕೊ. ಸು. ನರಸಿಂಹಮೂರ್ತಿ**

ವಿಶ್ವ ಹಿಂದೂ ಪರಿಷತ್ತಿನ ಸಂಸ್ಥಾಪಕ ವರಿಷ್ಠ ನಾಯಕ ಹಾಗೂ ಎಲ್ಲ ಹಿಂದೂಗಳೂ ಒಂದು ಎಂದು ಪ್ರತಿಪಾದಿಸು ತ್ತಿರುವ ಉಡುಪಿ ಅಷ್ಟಮಠಗಳಲ್ಲೊಂದಾದ ಪೇಜಾವರ ಮಠದ ಶ್ರೀಗಳವರಲ್ಲಿ ನನ್ನ ಒಂದೆರಡು ಪ್ರಶ್ನೆಗಳು.

ಶ್ರೀಗಳು ದೀಕ್ಷೆ ಮತ್ತು ಪೇಜಾವರ ಮಠದ ಅಧಿಕಾರ ವಹಿಸಿಕೊಂಡ ಸಮಯದಿಂದಲೇ ನನಗೆ ಪರಿಚಯ ಉಳ್ಳವ ರಾಗಿದ್ದಾರೆ. ಎಷ್ಟೋ ಬಾರಿ ನಮ್ಮ ಹಿರಿಯರ ಮನೆಯಲ್ಲಿ




ಪಾದಪೂಜೆ ಮಾಡಿಸಿಕೊಂಡಿದ್ದಾರೆ. ಆಗ ಅವರು ಬಾಲ ಯತಿಗಳಾಗಿದ್ದರು. ಅಂದರೆ ಕಾನೂನು ಪ್ರಕಾರ ಅಪ್ರಾಪ್ತ ವಯಸ್ಕರಾಗಿದ್ದರು. ಅವರು ಬಿಂದ್ರನ್‌ವಾಲೆ ಮುಂದಿಟ್ಟ ಖಲಿಸ್ತಾನ್ ಬೇಡಿಕೆಯನ್ನು ಪ್ರೋತ್ಸಾಹಿಸುವ ಹಾಗೂ ಭಾರತದ ಸಂವಿಧಾನಕ್ಕಿಂತಲೂ ಧರ್ಮವು ಶ್ರೇಷ್ಠ ಮತ್ತು ಮತಧರ್ಮಗಳ ಮೇಲೆ ಸಂವಿಧಾನವು ನಿಯಂತ್ರಣ ಹೊಂದಲಾಗದು ಎಂಬ ಅವನ ಪರಿಕಲ್ಪನೆಯನ್ನು ಶ್ರೀಗಳು ಪ್ರೋತ್ಸಾಹಿಸಿ ಸಮರ್ಥಿಸಿ ಅಮೃತ್‌ಸರದಲ್ಲಿ ಬಹಿರಂಗ ಸಭೆಯಲ್ಲಿ ಭಾಷಣ ಮಾಡಿದ್ದನ್ನು ಪತ್ರಿಕೆಗಳಲ್ಲಿ ಓದಿದ ಬಳಿಕ ನಾವು ಅವರನ್ನು ದೂರ ಇಟ್ಟೆವು.

ಭಾರತದ ಯಾವುದೇ ಮತಧರ್ಮ ನಿರಪೇಕ್ಷೆ, ಜಾತಿಭೇದ ರಹಿತ, ಚಾತುವರ್ಣದ ಕಟ್ಟುಪಾಡು ಇಲ್ಲದೆ ಹಾಗೂ ಅಸ್ಪೃಷ್ಯತೆ, ದಲಿತ ಶೋಷಣೆ, ಮರ್ದನ ಇತ್ಯಾದಿ ಗಳಿಗೆ ಅವಕಾಶ ಇಲ್ಲದೆ ಮಾನವರಾಗಿ ಬಾಳುವ ಅವಕಾಶ ಇದೆ ಎಂಬುದನ್ನು ಶ್ರೀಗಳೂ ಒಪ್ಪಲಿ ಬಿಡಲಿ, ಈ ದೇಶದ ಸರ್ವಧರ್ಮಿಯರೂ, ಎಲ್ಲ ಜಾತಿಗಳವರೂ ಮೇಲುಕೀಳು ಎಂಬ ಭಾವನೆ ಇಲ್ಲದೆ ಸರ್ವಸಮಾನತೆಯಲ್ಲಿ ಬಾಳುವುದನ್ನು ನಾವು ಬೆಂಬಲಿಸುತ್ತೇವೆ. ಅದಕ್ಕೆ ಶ್ರೀಗಳಂಥವರ ಪಾದಯಾತ್ರೆ ಬೇಕಾಗಿಲ್ಲ. ಕೀಳುಜಾತಿ ಮತ್ತು ದಲಿತರು ಎಂದು ಶತಮಾನಗಳ ತುಳಿತಕ್ಕೆ ಒಳಗಾದವರಲ್ಲಿ ಒಬ್ಬನ ಸನ್ಯಾಸ ಸ್ವೀಕಾರವೋ ಮೇಲ್ಜಾತಿ ಯವರ ಜೊತೆಗೆ ಸಹಭೋಜನವೋ ಪರಿಹಾರವಲ್ಲ.

ಕುವೆಂಪು ಅವರ ಒಂದು ಕವನವನ್ನು ಶ್ರೀಗಳ ಅವಗಾಹನೆಗೆ ತರಬಯಸುತ್ತೇನೆ :

ವಿಜಯನಗರ ಸಾಮ್ರಾಜ್ಯವಾದರೇನು ?
ಮೊಗಲರಾಳ್ವಿಕೆಯಾದರೇನು ?
ಬ್ರಿಟಿಷರ ಆಡಳಿತವೇನು ?
ನಮ್ಮವರ ಕಬ್ಬಿಣದ ಸಲಾಖೆಯ ತಿವಿತ
ಹೂಗೊಂಚಲೇನು ?

ಶ್ರೀ ಕೃಷ್ಣನು ಬೋಧಿಸಿರುವ, ಶ್ರೀಗಳು ಸಮರ್ಥಿಸುವ ಚಾತುರ್ವರ್ಣ ಶ್ರೇಣಿ ಪದ್ಧತಿಯಿಂದ ದಲಿತ ಸಮುದಾಯವು ದಮನ, ತುಳಿತ ಮತ್ತು ತಿವಿತಗಳಿಂದ ಘಾಸಿಗೊಂಡಿ ರುವುದು ನಿಜವಲ್ಲವೇನು ? ನಿಜವೆಂದಾದರೆ ನಿರ್ಮೂಲನೆ ಮಾಡಲು ಶ್ರೀಗಳು ಇನ್ನಾದರೂ ಸನ್ನದ್ಧರಾಗುವರೇ ? ಮಠದಲ್ಲಿ ಮಾಡಲಾಗುವ ಶ್ರೀ ಕೃಷ್ಣನ ಬೋಧನೆಯ ಪ್ರವಚನ, 'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ' ಎಂಬ ದುರ್ಗುಣಗಳ ಬೋಧನೆಗಳನ್ನು ಕೈಬಿಟ್ಟು 'ಸಹನಾವವತು, ಸಹನೌ ಭುನಕ್ತು, ಸಹವೀರ್ಯಂ ಕರವಾವಹೈ, ತೇಜಸ್ವಿ ನಾವಧೀತಮಸ್ತು ಮಾ ಓಂ ಶಾಂತಿಃ ಶಾಂತಿಃ ಶಾಂತಿಃ...' ಎಂದರೆ ಎಲ್ಲರೂ ಜೊತೆಗೂಡಿ ನಡೆಯೋಣ, ಜೊತೆಗೂಡಿ ದುಡಿಯೋಣ, ಜೊತೆಗೂಡಿ ಉಂಡು, ಜೊತೆಗೂಡಿ ಬಾಳೋಣ, ವಿದ್ವೇಷ ಸಲ್ಲದು, ಎಲ್ಲರೂ ತೇಜಸ್ವಿಗಳಾಗೋಣ, ವಿಶ್ವದೆಲ್ಲೆಡೆ ಶಾಂತಿ ನೆಲೆ ಗೊಳ್ಳಲಿ ಎಂದು ಸರ್ವರಿಗೂ ಸಮಾನತೆಯನ್ನು ಬೋಧಿಸುವ ಸರ್ವಶ್ರೇಷ್ಠ ಬೋಧನೆಗಳನ್ನುಳ್ಳ ಮಂತ್ರಗಳನ್ನು ಬೋಧಿಸಿ ಆಚರಿಸಲು ಶ್ರೀಗಳು ಒಪ್ಪುವರೇ ?

ನಾನು ತಿಳಿದಂತೆ ಒಬ್ಬ ಸಜ್ಜನನಿಗೆ ನಾಲ್ಕು ಧರ್ಮಗಳು ನಮ್ಮ ಶಾಸ್ತ್ರಗಳಲ್ಲಿ ಉಲ್ಲೇಖವಾಗಿವೆ. ಅವುಗಳೆಂದರೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ.

೧ನೆಯದು ಧರ್ಮ – ಇಲ್ಲಿ ಧರ್ಮವೆಂದರೆ ಸನಾತನ ಧರ್ಮ. ನಮ್ಮ ಸಂವಿಧಾನದ ಮತಧರ್ಮನಿರಪೇಕ್ಷಣೀಯ ಬದುಕು.

೨ನೆಯದು ಅರ್ಥ – ಅಂದರೆ ಶೋಷಣೆಗೆ ಎಡೆಕೊಡದೆ ದುಡಿದು ಅರ್ಥವನ್ನು ಸಂಪಾದಿಸಿ ಅದರ ಸದ್ವಿನಿಯೋಗ ಮಾಡುವ ಆರ್ಥಿಕತೆ.

೩ನೆಯದು ಸಂತಾನ – ಅಂದರೆ ಸಮಾಜಗಳ ಅಭಿವೃದ್ಧಿಯ ಮಾರ್ಗವನ್ನು ಅನುಸರಿಸುವುದು.

೪ನೆಯದು ಪುನರ್ಜನ್ಮ – ಅಂದರೆ ಸಂಸಾರ, ಎಲ್ಲವು ಗಳಿಂದಲೂ ಬಿಡುಗಡೆಗೊಂಡು ಚಿರ ಶಾಂತಿ ಸಾಧಿಸುವುದು.

ಶ್ರೀಗಳಾಗಲಿ, ಈಗೀಗ ಅವತರಿಸುತ್ತಿರುವ ನಾನಾ ಸನ್ಯಾಸಿಗಳಾಗಲಿ ಧರ್ಮ ಎಂದರೆ ಸನಾತನ ಧರ್ಮವನ್ನು ಪಾಲಿಸುವುದರ ಜೊತೆಗೆ ಮೋಕ್ಷವನ್ನು ಸಾಧಿಸುವ ಕುರಿತು ಯೋಚಿಸುವುದು ಮತ್ತು ಬೋಧಿಸುವುದು ಮಾತ್ರವಾಗಿದೆ.

ಕಂಕನಾಡಿ, ಮಂಗಳೂರು **ಬಿ. ವಿ. ಕಕ್ಕಿಲ್ಲಾಯ**

**ಐತಿಹಾಸಿಕ ಕೆಂಪುಕೋಟೆ**

**ಹೊಟ್ಟೆಯಲ್ಲೊಂದು ಕಲಾಸಿಪಾಳ್ಯ !**

ಕರ್ನಾಟಕ ರಾಜಧಾನಿಯ ಬೆಂಗಳೂರಿನ ಕಲಾಸಿಪಾಳ್ಯದ

ಕೊಳಕು ನೋಡಿದ್ದೀರಲ್ಲವೆ? ಭಾರತದ ಮುಕುಟವೆನ್ನಿಸಿದ ಯಮುನಾ ನದಿಯ ದಂಡೆಯ ಮೇಲಿರುವ ದೆಹಲಿಯ ಕೆಂಪುಕೋಟೆಯನ್ನು ನೋಡಿದ ಕೂಡಲೇ ಅದೇ ಕಲಾಸಿಪಾಳ್ಯ ದಲ್ಲಿರುವ ಒಂದು ಭಾವನೆ ಬಂದು ಮನಸ್ಸಿಗೆ ಛೀ ಅನ್ನಿಸುತ್ತದೆ.

ಬಹು ದೂರದಿಂದ ಏನೇನೋ ಕಲ್ಪನೆಯ ಕನಸುಗಳೊಂದಿಗೆ ದೆಹಲಿ ನೋಡಲು ಹೋದವರು, ಅಲ್ಲಿನ ಪ್ರೇಕ್ಷಣೀಯ ಸ್ಥಳಗಳೊಂದಿಗೆ ಕೆಂಪುಕೋಟೆಯನ್ನು ನೋಡದೇ ಬರುವದಿಲ್ಲ. ಕೆಂಪುಕೋಟೆ ಎಂದ ಕೂಡಲೇ ಸಾಮಾನ್ಯವಾಗಿ ಸ್ವಾತಂತ್ರ್ಯೋತ್ಸವದ ದಿನ, ಇಲ್ಲಿ ನಿಂತು ಈ ದೇಶದ ಪ್ರಧಾನಿಯವರು ಧ್ವಜಾರೋಹಣ ಮಾಡುವುದು. ನಮ್ಮ ಚಿತ್ತಭಿತ್ತಿಯ ಮೇಲೆ ತಕ್ಷಣ ಮೂಡಿಬರುತ್ತವೆ. ಅದರೊಂದಿಗೆ ಹಿಂದಿನ ಚರಿತ್ರೆ ಬಿಚ್ಚಿಕೊಳ್ಳುತ್ತದೆ. ಅಲ್ಲಿದ್ದ ಮಯೂರ ಸಿಂಹಾಸನ, ಕೋಹಿನೂರ ವಜ್ರ ಎಲ್ಲವೂ ನಮ್ಮ ಕಣ್ಣೆದುರಿಗೆ ಸುಳಿದುಹೋಗುತ್ತವೆ. ಮುಸ್ಲಿಂ ಅರಸರ ಕೊಡುಗೆಯಾಗಿ ಕೆಂಪುಕೋಟೆಯು ದೆಹಲಿ ನಗರಕ್ಕೆ ಕಿರೀಟಪ್ರಾಯವಾಗಿದೆ. ಈ ದೇಶದ ಚರಿತ್ರೆಯನ್ನು ಬರೆದು ನಿರ್ಮಿಸಿದ ಅಕ್ಬರ್, ಹುಮಾಯುನ್‌ರಂತಹ ಅನೇಕ ರಾಜರುಗಳು ಇಲ್ಲಿಂದಲೇ ಆಳ್ವಿಕೆಯನ್ನು ಮಾಡಿದ್ದಾರೆ. ಇದಕ್ಕಾಗಿ ಹಲವಾರು ಯುದ್ಧಗಳು ನಡೆದಿವೆ. ಈ ಕೋಟೆ ಕೆಂಪಗಿದ್ದು ಹೆಸರಿಗೆ ತಕ್ಕಂತೆ ರಕ್ತಸಿಕ್ತ ಗಾಯಗಳನ್ನು ಮಾಡಿಕೊಂಡರೂ ಅದನ್ನು ತೋರಗೊಡದೆ ಗತಕಾಲದ ಇತಿಹಾಸಕ್ಕೆ ಸಾಕ್ಷಿಯಾಗಿ, ಮುಕ್ಕಾಗದೆ ಅಚ್ಚಳಿಯದಂತೆ ನಿಂತಿದೆ. ಈ ಕೋಟೆಯ ಉಳಿವಿಗಾಗಿ ಅನೇಕರು ತ್ಯಾಗ, ಬಲಿದಾನ ಮಾಡಿದ್ದಾರೆ. ಹೀಗೆ ಬಹಳಷ್ಟು ಕಲ್ಪನೆಗಳನ್ನಿಟ್ಟುಕೊಂಡು ಭಾವುಕರಾಗಿ ಒಳಗೆ ಹೋದರೆ ಸಾಕು ನಾವು ಬಂದದ್ದೆಲ್ಲಿಗೆ, ಎಂಬ ಸಂಶಯ ಬರುತ್ತದೆ.

ಒಳಗೆ ಪ್ರವೇಶಿಸುತ್ತಿದ್ದಂತೆ ರಕ್ಷಣೆಯ ನೆಪದಲ್ಲಿ ಅಲ್ಲಿರುವ ಆರಕ್ಷಕರಿಂದ ಕಿರಿಕಿರಿ. ಇನ್ನಷ್ಟು ಒಳಹೋದರೆ ಅಲ್ಲಿನ ಇಕ್ಕೆಲಗಳಲ್ಲಿ ಜನರ ಗಿಜಿಗಿಜಿ, ಕೆಂಪುಕೋಟೆಯನ್ನು ನೋಡಲು ಅಲ್ಲ! ಅಲ್ಲಿನ ವಿವಿಧ ಬಗೆಯ ವಸ್ತುಗಳ ವ್ಯಾಪಾರ ವಹಿವಾಟದಲ್ಲಿ ಜನ ಮುಗಿಬಿದ್ದು, ಗಲಿಬಿಲಿ, ಚೌಕಾಸಿ ಮಾಡುವುದು ಭರದಿಂದ ನಡೆದಿರುತ್ತದೆ. ಈ ಮಾರುಕಟ್ಟೆಯನ್ನು ಛತ್ತಾ ಚೌಕ್ ಎಂದು ಕರೆಯುತ್ತಾರೆ. ಅಲ್ಲಿ ಒಳಹೋಗಲು ದಾರಿ ಇಲ್ಲದಂತೆ ಜನ ನಿಂತಿರುತ್ತಾರೆ. ಹೋದವರು ಮುಂದೇನು ಎನ್ನುವಂತೆ ದಿಗಿಲುಬೀಳುತ್ತಾರೆ, ಅದರಲ್ಲೂ ದಕ್ಷಿಣದವರಿಗೆ ಇದು ಪ್ರಾಚೀನ ಸ್ಮಾರಕವೋ, ಅಥವಾ ರಸ್ತೆ ಬದಿಯ ಜನತಾ ಬಜಾರೋ ಎಂಬ ಸಂಶಯ ಬರುತ್ತದೆ. ಈ ವ್ಯಾಪಾರಿ ಮಳಿಗೆಗಳಿಂದ ಆದಾಯ ಬರುತ್ತಿರಬಹುದು. ಆದರೆ ಈ ರೀತಿ ಐತಿಹಾಸಿಕ ಸ್ಮಾರಕಗಳಲ್ಲಿ ವ್ಯಾಪಾರಿ ಮಳಿಗೆಗಳಿಗೆ ಅವಕಾಶ ನೀಡಿ ವಹಿವಾಟು ನಡೆಸುವುದು ಸರಿಯೇ? ಹಾಗೆ ಅವಕಾಶವನ್ನು ಕೊಡುವುದಾದರೆ ಬೇರೆ ಎಲ್ಲೋ ಹೊರಗಡೆ ನಡೆಸಲಿ. ಅದು ಬಿಟ್ಟು ಇಂದಿನ ಗುಡಿ-ಗುಂಡಾರಗಳಂತೆ ವ್ಯಾಪಾರಿ ತಾಣಗಳನ್ನಾಗಿ ಮಾಡಿರುವುದು ಸರಿಯಲ್ಲ. ಸ್ಮಾರಕಗಳು ಈ ನಾಡಿನ ಇತಿಹಾಸದ ಜೀವಂತಿಕೆಯ ಚೇತನಗಳು ಎಂಬುದನ್ನು ಮರೆಯಬಾರದು. ಇದನ್ನು ದಾಟಿ ಒಳಗೆ ಹೋದರೆ ನೋಡುವಂಥವುಗಳಿವೆ, ನಿಜ. ಆದರೆ ಆರಂಭದಲ್ಲಿ 'ಪ್ರಥಮ ಚುಂಬನಂ ದಂತ ಭಗ್ನಂ' ಎನ್ನುವಂತಾದರೆ ಹೇಗೆ? ಇದೇ ರೀತಿ ಇಂದಲ್ಲ ನಾಳೆ ಜಗತ್ಪಸಿದ್ಧ ತಾಜಮಹಲಿನಲ್ಲಿ ಈ ರೀತಿ ಬಜಾರನ್ನು ಸೃಷ್ಟಿಸಿದರೆ ಅದರ ಮೌಲ್ಯ ಏನು ಉಳಿದೀತು? ಇದರ ಬಗ್ಗೆ ಸರಕಾರವಾಗಲಿ, ವಿಚಾರವಂತರಾಗಲಿ ಏಕೆ ವಿಚಾರ ಮಾಡಿಲ್ಲ?

ಈ ಕೆಂಪುಕೋಟೆಯನ್ನು, ಅದರ ವೈಭವವನ್ನು ನೋಡಲು ಎರಡು ಕಣ್ಣುಗಳು ಸಾಲದು, ನಾವು ನಿಜಕ್ಕೂ ಭಾವುಕರಾಗಿ, ಆ ಶತಮಾನದ ವೈಭವದ ಭಾಗವಾಗಿ ಬಿಡುತ್ತೇವೆ. ಆದರೆ ಇಂದಿನ ಸ್ಥಿತಿಯನ್ನು ನೋಡಿದಾಗ ಆ ಭಾವುಕತೆಯ ತುಂಬಿದ ಬಲೂನಿಗೆ ಸೂಜಿ ಚುಚ್ಚಿದಂತಾಗುತ್ತದೆ. ಕಂಬನಿಯು ನಮಗರಿಲ್ಲದಂತೆ ಬೀಳುತ್ತವೆ. ''ಅಯ್ಯೋ... ಕೆಂಪುಕೋಟೆಯೇ, ಅಂದು ನೀನು ಈ ದೇಶವನ್ನು ಟೊಂಕ ಕಟ್ಟಿ ನಿಂತು ರಕ್ಷಿಸಿದೆ, ಆದರೆ ಇಂದು ನಮ್ಮವರಿಗೆ ನಿನ್ನ ರಕ್ಷಣೆಯನ್ನು ಮಾಡುವದಾಗುತ್ತಿಲ್ಲವಲ್ಲಾ!'' ಇದೊಂದು ವಿಪರ್ಯಾಸವಲ್ಲವೇ?

ರಾಜೂರ, ಗದಗ ಜಿಲ್ಲೆ **ಡಾ|| ಮಲ್ಲಿಕಾರ್ಜುನ ಕುಂಬಾರ**

**'ಹೊಸತು' ಪತ್ರಿಕೆಯನ್ನು ತಪ್ಪದೆ ಓದುತ್ತಿದ್ದು ಅದಕ್ಕೆ ಬೆಂಬಲ ನೀಡುತ್ತಿದ್ದ ಶ್ರೀಮತಿ ಯು. ಎಸ್. ಸಾಕಮ್ಮನವರ ನೆನಪಿನಲ್ಲಿ ಅವರ ಮಕ್ಕಳು ಶ್ರೀ ಯು. ಎಸ್. ಶ್ರೀನಿವಾಸನ್ ಮತ್ತು ಶ್ರೀಮತಿ ಯು. ಎಸ್. ಪಾರ್ವತಿ ಪ್ರತಿವರ್ಷವೂ 'ಹೊಸತು' ವಿನಲ್ಲಿ ಪ್ರಕಟವಾಗುವ ಮಹಿಳಾ ಅಧ್ಯಯನ ಕುರಿತ ಎರಡು ಬರಹಗಳಿಗೆ ಬಹುಮಾನ ನೀಡಬೇಕೆಂದು ಎರಡು ಸಾವಿರ ರೂಪಾಯಿಗಳನ್ನು ನೀಡಿದ್ದಾರೆ. ಕಳೆದ ಮೂರು ವರ್ಷಗಳಿಂದ ಬಹುಮಾನಗಳನ್ನು ನೀಡುತ್ತಾ ಬರಲಾಗಿದೆ. ಆಗಸ್ಟ್ ೨೦೦೯ - ಜುಲೈ ೨೦೧೦ರ ಸಾಲಿನ ಬಹುಮಾನಗಳನ್ನು ಡಾ|| ಜಯಪ್ರಕಾಶ ಮಾವಿನಕುಳಿ (ಸೆಪ್ಟೆಂಬರ್ ೨೦೦೯ : ಮಹಿಳಾ ಮೀಸಲಾತಿ ಮಸೂದೆ) ಮತ್ತು ಶ್ರೀ ಫಕೀರ್ ಮುಹಮ್ಮದ್ ಕಟ್ಪಾಡಿ (ಜನವರಿ ೨೦೧೦ : ಸೂಫಿ ಮಹಿಳೆಯರು) ಅವರಿಗೆ ನೀಡಲಾಗುತ್ತದೆ. ಬಹುಮಾನಿತ ಬರಹಗಳನ್ನು ಆಯ್ದುಕೊಟ್ಟ ತೀರ್ಪುಗಾರರಿಗೆ 'ಹೊಸತು' ಋಣಿಯಾಗಿದೆ.**

***ಸಂಪಾದಕ***

---

*ಸಂಪಾದಕೀಯ (೩ನೇ ಪುಟದಿಂದ)*

ಚಿನ್ನ, ೨೭ ಬೆಳ್ಳಿ ಹಾಗೂ ೩೬ ಕಂಚಿನ, ಎಂದರೆ ಒಟ್ಟು ೧೦೧ ಪದಕಗಳನ್ನು ಗೆದ್ದು, ರಾಷ್ಟ್ರದ ಘನತೆಯನ್ನು ಎತ್ತಿ ಹಿಡಿದಿದ್ದಾರೆ. ಕ್ರೀಡಾಕೂಟಗಳಲ್ಲಿ ಯಾವತ್ತಿಗೂ ಮುಂಚೂಣಿಯಲ್ಲಿರುವ ಇಂಗ್ಲೆಂಡ್, ಕೆನಡಾ ದೇಶಗಳನ್ನೂ ಹಿಂದಿಕ್ಕಿದ ಭಾರತ ಆಸ್ಟ್ರೇಲಿಯಾ ನಂತರದ ಎರಡನೇ ಸ್ಥಾನಕ್ಕೇರಿರುವುದು, ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾರತದ ಘನತೆಯನ್ನು ಮುಗಿಲೆತ್ತರಕ್ಕೆ ಕೊಂಡೊಯ್ದಿದಿರುವುದು ಒಂದು ಸ್ಫೂರ್ತಿದಾಯಕ ಬೆಳವಣಿಗೆಯಾಗಿದೆ. ಅಭಿಮಾನಿಗಳ ನಿರೀಕ್ಷೆಗಳಿಗೆ ಸ್ಪಂದಿಸಿದ ನಮ್ಮ ಕ್ರೀಡಾಪಟುಗಳು ನಿರೀಕ್ಷೆಗೂ ಮೀರಿದ ಪದಕಗಳನ್ನು ಗೆದ್ದಿದ್ದಾರೆ. ಶೂಟಿಂಗ್, ವೇಯ್ಟ್‌ಲಿಫ್ಟಿಂಗ್, ಕುಸ್ತಿ, ಬಾಕ್ಸಿಂಗ್‌ನಲ್ಲಿ ಹತ್ತಾರು ಚಿನ್ನದ ಪದಕಗಳನ್ನು ತಮ್ಮದಾಗಿಸಿಕೊಂಡ ಈ ಕ್ರೀಡಾಪಟುಗಳು ಟೇಬಲ್ ಟೆನಿಸ್, ಟೆನಿಸ್, ಅಥ್ಲೆಟಿಕ್ಸ್ ಸೇರಿದಂತೆ ಇತರ ಕ್ರೀಡೆಗಳಲ್ಲೂ ಹಿಂದೆ ಬಿದ್ದಿಲ್ಲ.

ನಮ್ಮ ರಾಷ್ಟ್ರದ ಎಲ್ಲ ಕ್ಷೇತ್ರಗಳನ್ನೂ ಕ್ಯಾನ್ಸರ್ ರೋಗದಂತೆ ಕಿತ್ತು ತಿನ್ನುತ್ತಿರುವ ಭ್ರಷ್ಟಾಚಾರ ಕಾಮನ್‌ವೆಲ್ತ್ ಕ್ರೀಡೆಗಳಿಗಾಗಿ ಸಿದ್ಧತೆಯ ಹಂತದಲ್ಲಿ ನಡೆಯುತ್ತಿದ್ದ ನಿರ್ಮಾಣಕಾರ್ಯಗಳಲ್ಲಿಯೂ ತಲೆದೋರಿರುವುದು ನಾಚಿಕೆಗೇಡಿನ ವಿಷಯ. ತೀವ್ರ ಸ್ವರೂಪದ ಇಂತಹ ದೂರುಗಳು ಬಂದಿರುವ ಹಿನ್ನೆಲೆಯಲ್ಲಿ ಸುರೇಶ್ ಕಲ್ಮಾಡಿಯೂ ಸೇರಿದಂತೆ ಎಲ್ಲ ಪದಾಧಿಕಾರಿಗಳ ಬಗ್ಗೆ, ಎಲ್ಲ ವ್ಯವಹಾರಗಳ ಬಗ್ಗೆ ಸರ್ಕಾರ ಕೂಡಲೆ ತನಿಖೆ ನಡೆಸಿ ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸಬೇಕು ಎಂಬುದರಲ್ಲಿ ಎರಡು ಮಾತಿಲ್ಲ.

ಆದರೆ ಇಂತಹ ಬೃಹತ್ ಪ್ರಮಾಣದ ಕ್ರೀಡಾಕೂಟದ ಯಶಸ್ಸಿಗೆ ಸಿದ್ಧತಾ ಕಾರ್ಯಗಳಲ್ಲಿ ತೊಡಗಿಕೊಂಡು ಅಹರ್ನಿಶಿ ದುಡಿಯುತ್ತಿದ್ದ ಸಂಘಟನಾ ಸಮಿತಿಯ ಬದ್ಧತೆ ಮತ್ತು ಕಾರ್ಯವೈಖರಿಯನ್ನು ಬದಿಗಿಟ್ಟು, ಮೇಲ್ನೋಟಕ್ಕೆ ಕಾಣಿಸಿದ ಎಡವಟ್ಟುಗಳು, ಲೋಪದೋಷಗಳಂತಹ ನೇತ್ಯಾತ್ಮಕ ಅಂಶಗಳನ್ನೇ ದೊಡ್ಡದು ಮಾಡಿ, ಇಲ್ಲಸಲ್ಲದ ಅಗ್ಗದ ಪ್ರಚಾರ ನೀಡಿ ಕಾಮನ್‌ವೆಲ್ತ್ ಕ್ರೀಡಾಕೂಟಕ್ಕೆ ಕಪ್ಪುಮಸಿ ಬಳಿಯಲು ನಮ್ಮ ಮಾಧ್ಯಮಗಳು ಮುಂದಾದುದು ನಿಜಕ್ಕೂ ಖಂಡನೀಯ. ಅದೊಂದು ದೇಶದ್ರೋಹಿ ಕೃತ್ಯವೆಂದರೂ ತಪ್ಪಾಗಲಾರದು. ಅಷ್ಟೆಲ್ಲಾ ಭಯೋತ್ಪಾದನೆಯ ಬೆದರಿಕೆಯಿದ್ದರೂ ಕಟ್ಟುನಿಟ್ಟಾದ ಭದ್ರತೆ ಒದಗಿಸಿದುದು ಸಾಮಾನ್ಯ ಸಂಗತಿಯಲ್ಲ. ಇದಕ್ಕೆ ಕಾರಣರಾದವರೆಲ್ಲರೂ ಅಭಿನಂದನಾರ್ಹರು.

ಏನೇ ಅಡೆತಡೆಗಳಿದ್ದರೂ ಈ ಬಾರಿಯ ಕ್ರೀಡಾಕೂಟ ದೆಹಲಿಯಲ್ಲೇ ಜರುಗಲಿದೆ, ಜರುಗಬೇಕು ಎಂದು ಸಂಪೂರ್ಣ ವಿಶ್ವಾಸ ವ್ಯಕ್ತಪಡಿಸಿದ್ದ ಕಾಮನ್‌ವೆಲ್ತ್ ಕ್ರೀಡಾಕೂಟ ಒಕ್ಕೂಟದ ಅಧ್ಯಕ್ಷ ಮೈಕೇಲ್ ಫೆನೆಲ್ ಹಗಲು ರಾತ್ರಿ ನಿಷ್ಠೆಯಿಂದ ದುಡಿದ ೨೨,೦೦೦ ಸ್ವಯಂಸೇವಕರು ಮತ್ತು ೪,೦೦೦ ನೌಕರರು ಸಂಘಟನಾ ಸಮಿತಿಯೊಂದಿಗೆ ಸಹಕರಿಸಿ ಈ ಅದ್ಭುತ ಯಶಸ್ಸಿಗೆ ಕಾರಣರಾಗಿದ್ದಾರೆ, ಅವರೆಲ್ಲರೂ ಅಭಿನಂದನಾರ್ಹರು ಎಂದು ಮನಸಾರೆ ನೆನೆದಿರುವುದು ಸೂಕ್ತವಾಗಿದೆ.

ಈ ಬಾರಿ ನಮ್ಮ ರಾಜ್ಯವನ್ನು ಪ್ರತಿನಿಧಿಸಿದ್ದ ೧೦ ಕ್ರೀಡಾಪಟುಗಳು ಹಲವಾರು ಪದಕಗಳನ್ನು ಗೆದ್ದಿರುವುದು ಹೆಮ್ಮೆಯ ವಿಷಯ. ಮುಖ್ಯಮಂತ್ರಿ ಯಡಿಯೂರಪ್ಪನವರು ಈ ಕ್ರೀಡಾ ಸಾಧಕರಿಗೆ ಕೊನೆಗೂ ಅಭಿನಂದನೆ ಸಲ್ಲಿಸಿ ನಗದು ಬಹುಮಾನಗಳನ್ನು ಪ್ರಕಟಿಸಿದ್ದಾರೆ. ಇತರೆ ರಾಜ್ಯಗಳ ಮಂತ್ರಿಗಳು ಇಲ್ಲವೇ ಸರ್ಕಾರದ ಪ್ರತಿನಿಧಿಗಳು ದೆಹಲಿಗೇ ಖುದ್ದಾಗಿ ಹೋಗಿ ತಮ್ಮ ತಮ್ಮ ರಾಜ್ಯದ ವಿಜಯಿ ಸಾಧಕರಿಗೆ ಅಭಿನಂದನೆ ಸಲ್ಲಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬಹುಶಃ ಕೇವಲ ರೆಸಾರ್ಟ್ ರಾಜಕಾರಣದಲ್ಲಿಯೋ ಅಥವಾ 'ಆಪರೇಶನ್ ಕಮಲ'ದಂತಹ ಘನಂದಾರಿ ಕಾರ್ಯದಲ್ಲೋ ಮುಳುಗಿ ಹೋಗಿದ್ದ ನಮ್ಮ ಸರ್ಕಾರಕ್ಕಾಗಲೀ ಮಂತ್ರಿಗಳಿಗಾಗಲೀ ದೆಹಲಿಗೆ ಹೋಗಲು ಸಮಯ ಎಲ್ಲಿದೆ! ಸಾರ್ವಜನಿಕರ ತೆರಿಗೆ ಹಣ ವ್ಯಯಿಸಿ 'ಅಕ್ಕ' ಸಮ್ಮೇಳನದಲ್ಲಿ ಭಾಗವಹಿಸಲೋ ಇಲ್ಲವೇ ನಯಾಗರಾ ಮುಂತಾದೆಡೆ ಅಡ್ಡಾಡಿಕೊಂಡು ಬರಲೋ ಅಮೆರಿಕಾಗೆ ಹೋಗಲು ಸಾಲಾಗಿ ನಿಲ್ಲುವ, ಲಾಬಿ ಮಾಡುವ ನಮ್ಮ ಶಾಸಕರಿಗೆ, ಮಂತ್ರಿಗಳಿಗೆ ದಿಲ್ಲಿ ಬಹಳ ದೂರ ಎನಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ.

**ಮೆಕ್ಸಿಕೊ ಕೊಲ್ಲಿಯ ದುರಂತ**

೧೯೮೪ರ ಭೋಪಾಲ್ ಅನಿಲ ದುರ್ಘಟನೆ, ತತ್ಪರಿಣಾಮವಾಗಿ ಆ ನಗರದ ಜನ ಅನುಭವಿಸಿದ ಅಪಾರ ಸಾವು-ನೋವುಗಳು, ಭಾರತ ಸರ್ಕಾರ ಮತ್ತು ಮಧ್ಯಪ್ರದೇಶದ ರಾಜ್ಯ ಸರ್ಕಾರ ಅನಿಲ ದುರಂತಕ್ಕೆ ಕಾರಣಕರ್ತನಾಗಿದ್ದ ವಾರೆನ್ ಆ್ಯಂಡರ್‌ಸನ್‌ಗೆ ಕೊಟ್ಟ ರಕ್ಷಣೆ, ದುರ್ಘಟನೆಯ ಇಪ್ಪತ್ತೈದು ವರ್ಷಗಳ ನಂತರ ಭೋಪಾಲ್‌ನ ಕೆಳ ನ್ಯಾಯಾಲಯ ಇತ್ತೀಚೆಗೆ ಕೊಟ್ಟ ತೀರ್ಪು ಇವೆಲ್ಲವೂ ನಮ್ಮನ್ನು ಮತ್ತೆ ಮತ್ತೆ ಕಾಡುವಂತಹವು. ಏಕೆಂದರೆ, ಅಮೆರಿಕಾದ ದಕ್ಷಿಣ ಭಾಗದ ಮೆಕ್ಸಿಕೊ ಕೊಲ್ಲಿಯಲ್ಲಿ ತೈಲ ತೆಗೆಯುವ ಬಿ.ಪಿ. ಎಂಬ ಬ್ರಿಟಿಷ್ ಕಂಪನಿಯ ಅಜಾಗರೂಕತೆಯಿಂದಾಗಿ ಅಟ್ಲಾಂಟಿಕ್ ಸಾಗರದ ಐದು ಸಾವಿರ ಅಡಿ ತಳದಲ್ಲಿ ಒಡೆದುಹೋದ ಪೈಪ್‌ನಿಂದ ಧಾರಾಕಾರವಾಗಿ ಸೋರಿದ ತೈಲ ಈ ಪ್ರದೇಶದ ನೀರನ್ನು ಕಲುಷಿತಗೊಳಿಸಿ, ಜಲಜೀವಿಗಳಿಗೆ ಮತ್ತು ಈ ಕಡಲ ತೀರದಲ್ಲಿರುವ ಅಮೆರಿಕಾದ ಲೂಸಿಯಾನ ರಾಜ್ಯದ ಜನರಿಗೆ ಹಾನಿ ಉಂಟುಮಾಡಿರುವುದಕ್ಕಿಂತ ಹೆಚ್ಚಾಗಿ ಅಮೆರಿಕಾದ ಸರ್ಕಾರ ಈ ದುರ್ಘಟನೆಯನ್ನು ಎಷ್ಟರಮಟ್ಟಿಗೆ ಗಂಭೀರವಾಗಿ ಪರಿಗಣಿಸಿ, ಕ್ರಮ ಕೈಗೊಂಡಿತು ಎಂಬುದನ್ನು ನಾವು ತೀವ್ರವಾಗಿ ಪರಿಗಣಿಸಬೇಕಿದೆ. ಈ ದುರ್ಘಟನೆಯಲ್ಲಿ ಸತ್ತವರ ಸಂಖ್ಯೆ ಹನ್ನೊಂದು. (ನೆನಪಿಸಬೇಕೆಂದರೆ ಭೋಪಾಲ್ ಅನಿಲ ದುರಂತದಲ್ಲಿ ಮಡಿದವರ ಸಂಖ್ಯೆ ಅಧಿಕೃತವಾಗಿ ೧೬,೦೦೦, ಅನಧಿಕೃತವಾಗಿ ೨೫,೦೦೦ ಮತ್ತು ಈ ದುರಂತದ ಪರಿಣಾಮವಾಗಿ ನೋವು ಅನುಭವಿಸುತ್ತಿರುವವರ ಸಂಖ್ಯೆ ಸುಮಾರು ಆರು ಲಕ್ಷ) ಮೆಕ್ಸಿಕೊ ಕೊಲ್ಲಿಯ ದುರ್ಘಟನೆಯಿಂದ ಮಿಲಿಯಾಂತರ ಗ್ಯಾಲನ್ ತೈಲ ಸಮುದ್ರಕ್ಕೆ ಸೇರಿದೆ. ಅಮೆರಿಕಾದಲ್ಲಿ ಯಾವುದೇ ಘಟನೆ ದೊಡ್ಡ ವಿಷಯವಾಗಬೇಕೆಂದರೆ, ಅಂತಹ ಘಟನೆಯು ದೇಶದ ಜನರ ಮೇಲೆ ನೇರ ಪರಿಣಾಮ ಬೀರುವ ಸಂಗತಿಯಾಗಬೇಕು. ಮೆಕ್ಸಿಕೊ ಕೊಲ್ಲಿಯ ತೈಲ ದುರ್ಘಟನೆ ಅಮೆರಿಕಾದಲ್ಲಿ ದಿನನಿತ್ಯದ ಭಾರಿ ಸುದ್ದಿಯಾದದ್ದು ಈ ಕಾರಣದಿಂದ.

**ತಾರತಮ್ಯ ನೀತಿ**



ಅಮೆರಿಕಾದ ಪ್ರಜೆ ಮತ್ತು ಯೂನಿಯನ್ ಕಾರ್ಬೈಡ್ ಕಂಪನಿಯ ಅಧ್ಯಕ್ಷನಾಗಿದ್ದ ವಾರೆನ್ ಆ್ಯಂಡರ್‌ಸನ್ ಭೋಪಾಲ್ ಪ್ರಕರಣದಲ್ಲಿ ಒಬ್ಬ ಆರೋಪಿ. ಭಾರತದ ನ್ಯಾಯಾಲಯಗಳ ಬಗ್ಗೆ ಈತನಿಗೆ ಯಾವ ಗೌರವವೂ ಇದ್ದಂತೆ ಕಾಣಲಿಲ್ಲ. ಆದರೆ ನಮ್ಮ ದೇಶದ ನ್ಯಾಯಾಲಯಗಳು ಈತನಿಗೆ ಕೊಟ್ಟ ಗೌರವ ಅಪಾರ. ಅಮೆರಿಕಾದ ಈ ಪ್ರಜೆಯನ್ನು ಭೋಪಾಲ್ ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕೆಂದು ಅಪ್ಪಿ-ತಪ್ಪಿ ಮನ್‌ಮೋಹನ್ ಸಿಂಗ್ ಸರ್ಕಾರ ಏನಾದರೂ ಕೇಳಿಬಿಟ್ಟರೆ, ಅಮೆರಿಕಾ ಸರ್ಕಾರ ಈ ಹಿಂದೆ ನಿರಾಕರಿಸಿದಂತೆ, ಈಗಲೂ ನಿರಾಕರಿಸುತ್ತದೆ. ಆದರೆ ಬಿ.ಪಿ. ಕಂಪನಿಯ ಪ್ರಶ್ನೆ ಉದ್ಭವಿಸಿದಾಗ, ಅಮೆರಿಕಾದ ಪ್ರಜಾಪ್ರತಿನಿಧಿಗಳು ಈ ಕಂಪನಿಯ ಕಾರ್ಯ ನಿರ್ದೇಶಕನನ್ನು ವಾಷಿಂಗ್‌ಟನ್‌ಗೆ ಕರೆಸಿಕೊಂಡು ಅವನ ಮೇಲೆ ನಡೆಸಿದ ವಾಗ್ದಾಳಿಯನ್ನು ನೆನೆಸಿಕೊಂಡರೆ ಇವರ ಸಾಮ್ರಾಜ್ಯಶಾಹಿ ಮನೋಭಾವ ಮತ್ತು ಭಾರತ ಸರ್ಕಾರದ ಬಾಲಬಡುಕತನ ಎರಡೂ ಏಕಕಾಲಕ್ಕೆ ಅನುಭವವಾಗುತ್ತವೆ. ಹೇಸಿಗೆ ತರುವ ಸಂಗತಿ. ಬಿ.ಪಿ. ಕಂಪನಿಯ ಹೇವರ್ಡ್ ಅಮೆರಿಕಾದ ಸೆನೆಟರ್‌ಗಳಿಗೆ ಉತ್ತರಿಸುತ್ತಾ ತನಗೂ ಮೆಕ್ಸಿಕೊ ಕೊಲ್ಲಿಯ ವ್ಯವಹಾರಕ್ಕೂ ಯಾವುದೇ ಸಂಬಂಧವಿಲ್ಲವೆಂದು ಹೇಳಿದಾಗ ಅವನ ಮೇಲೆ ಸೆನೆಟರ್‌ಗಳು ಹರಿಹಾಯ್ದು ಹಡಗಿನ ನಾಯಕನಾಗಿ ಈ ದುರ್ಘಟನೆಯ ಸಂಪೂರ್ಣ ಜವಾಬ್ದಾರಿ ಹೊರಬೇಕೆಂದೂ, ಹಾರಿಕೆಯ ಉತ್ತರ ಕೊಡಕೂಡದೆಂದೂ ತರಾಟೆಗೆ ತೆಗೆದುಕೊಂಡದ್ದನ್ನು ನೋಡಿದಾಗ, ಅಯ್ಯೋ! ಈ ಸೆನೆಟರ್‌ಗಳಿರುವಷ್ಟು

# ಅಮೆರಿಕಾ

ಮುರಳಿಧರ್

# ಬರಾಕ್ ಒಬಾಮ, ಸಮಾಜವಾದ

ವ್ಯವಹಾರಜ್ಞಾನ ಭೋಪಾಲ್ ಪ್ರಕರಣ ತೀರ್ಮಾನಿಸುವ ಸಂದರ್ಭದಲ್ಲಿ ನಮ್ಮ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಿಗೆ ಇರದೇ ಹೋಯಿತೆ, ಎಂದೆನಿಸದಿರದು. ಯಾವುದೇ ಮುಂಜಾಗ್ರತಾ ಕ್ರಮ ತೆಗೆದುಕೊಳ್ಳದ ಬಿ.ಪಿ. ಕಂಪನಿ ಈ ದುರ್ಘಟನೆಗೆ ನೇರ ಹೊಣೆಗಾರನೆಂದು ಸಂಸದೀಯ ಸಮಿತಿಯ ಅಧ್ಯಕ್ಷ ವ್ಯಾಕ್ಸ್‌ಮನ್ ಆಪಾದಿಸಿದ್ದನ್ನು ಗಮನಿಸಿದರೆ ಭೋಪಾಲ್‌ನ ದುರ್ಘಟನೆಗೂ ಇಂತಹುದೇ ಕಾರಣವಿತ್ತೇ ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಬಿ.ಪಿ. ಕಂಪನಿ ಈಗಾಗಲೇ ಇಪ್ಪತ್ತು ಬಿಲಿಯನ್ ಡಾಲರ್ ಮೊತ್ತದ ಪರಿಹಾರ ಹಣವನ್ನು ಮೀಸಲಾಗಿಟ್ಟಿದೆ. ಮೆಕ್ಸಿಕೊ ಕೊಲ್ಲಿಯ ತೈಲ ದುರಂತದಲ್ಲಿ ಮಡಿದವರಿಗೆ ಮತ್ತು ಸಂತ್ರಸ್ತರಿಗೆ ಪರಿಹಾರ ಹಣ ವಿತರಿಸುವ ಕಾರ್ಯ ಈಗಾಗಲೆ ಆರಂಭವಾಗಿದೆ. ಒಟ್ಟು ನಾಲ್ಕು ತಿಂಗಳ ಅವಧಿಯಲ್ಲಿ ಇವಿಷ್ಟೂ ನಡೆದಿವೆ. ಆದರೆ ಭೋಪಾಲ್ ಪ್ರಕರಣ ಇಪ್ಪತ್ತೈದು ವರ್ಷಗಳ ದೀರ್ಘಕಾಲ ಜರುಗಿ ಕೇವಲ ೪೭೦ ಮಿಲಿಯನ್ ಡಾಲರ್ (ಅಂದರೆ ೭೧೩ ಕೋಟಿ ರೂಪಾಯಿ) ಪರಿಹಾರ ಹಣ ಕಂಪನಿಯಿಂದ ಪಡೆದದ್ದು ಮತ್ತೊಂದು ದುರಂತವೇ ಸರಿ. ಅಂದು ಯೂನಿಯನ್ ಕಾರ್ಬೈಡ್ ಕಂಪನಿ ಕೊಡಬೇಕಾದ ಪರಿಹಾರ ಹಣವನ್ನು ಇಂದು ಮನ್‌ಮೋಹನ್ ಸಿಂಗ್ ಸರ್ಕಾರ ಭರಿಸಲು ಹೊರಟಿದೆ. ಈ ಕಂಪನಿಯನ್ನು ಭಾರತ ಸರ್ಕಾರ ಹೇಗೆ ರಕ್ಷಿಸಿಕೊಂಡು ಬರುತ್ತಿದೆ ಎನ್ನುವುದಕ್ಕೆ ಇದು ಮತ್ತೊಂದು ನಿದರ್ಶನ.

**ತೈಲಕ್ಕಾಗಿ ಯುದ್ಧ – ಯುದ್ಧಕ್ಕಾಗಿ ತೈಲ**

ಮೆಕ್ಸಿಕೊ ಕೊಲ್ಲಿಯಲ್ಲಿ ಸಂಭವಿಸಿದ ತೈಲ ದುರಂತ ಅಮೆರಿಕಾದಲ್ಲಿ ಮೊದಲನೆಯ ದೇನಲ್ಲ. ಈ ಹಿಂದೆ ೧೯೮೯ರಲ್ಲಿ ಅಲಾಸ್ಕಾದಲ್ಲಿ ಎಕ್ಸನ್-ವಾಲ್ದೇಜ್ ಕಂಪನಿಯ ನಿರ್ಲಕ್ಷ್ಯದಿಂದ ಸುಮಾರು ಹನ್ನೊಂದು ಮಿಲಿಯನ್ ಗ್ಯಾಲನ್ ತೈಲ ಸೋರಿ ಅಪಾರ ಪರಿಸರ ಹಾನಿಯುಂಟಾಗಿತ್ತು. ಹಾಗಾಗಿ ಮೆಕ್ಸಿಕೊ ಕೊಲ್ಲಿಯ ದುರಂತ ಕೊನೆಯದೂ ಅಲ್ಲ. ಯೂನಿಯನ್ ಕಾರ್ಬೈಡ್, ಇಕ್ಸನ್-ಮೊಬಿಲ್, ಬಿ.ಪಿ. ಇತ್ಯಾದಿ ಅಂತರರಾಷ್ಟ್ರೀಯ ಕಂಪನಿಗಳು ಎಲ್ಲಿಯವರೆಗೆ ಸುರಕ್ಷತೆಗಿಂತ ಲಾಭ ಮುಖ್ಯ ಎಂಬ ನೀತಿಯನ್ನು ಅನುಸರಿಸುತ್ತವೋ, ಎಲ್ಲಿಯವರೆಗೆ, ಈ ಕಾರ್ಪೊರೇಟ್ ಕಂಪನಿಗಳ ತೈಲದಾಹ ತಣಿಯುವುದಿಲ್ಲವೋ ಅಲ್ಲಿಯವರೆಗೆ ಈ ಬಗೆಯ ದುರಂತಗಳು ಒಂದಲ್ಲ ಒಂದೆಡೆ ಘಟಿಸುತ್ತಿರುತ್ತವೆ. ಅಮೆರಿಕಾದ ತೈಲದಾಹ ಎಲ್ಲ ರಾಷ್ಟ್ರಗಳನ್ನೂ ಮೀರಿಸಿದಂತಹುದು. 'ತೈಲಕ್ಕಾಗಿ ಯುದ್ಧ – ಯುದ್ಧಕ್ಕಾಗಿ ತೈಲ' ಎಂಬುದು ಅಮೆರಿಕಾದ ತೈಲ ನೀತಿ, ಯುದ್ಧ ನೀತಿ ಮತ್ತು ಆರ್ಥಿಕ ನೀತಿ. ಎಂದೇ ಈ ದೇಶದ ತೈಲದಾಹ ತಣಿಯುವುದೇ ಇಲ್ಲ. ಸ್ಟಾಕ್‌ಹೋಂ ಅಂತರರಾಷ್ಟ್ರೀಯ ಶಾಂತಿ ಸಂಶೋಧನಾ ಸಂಸ್ಥೆಯ ವರದಿಯ ಪ್ರಕಾರ ೨೦೦೯ರಲ್ಲಿ ಪ್ರಪಂಚದ ಮಿಲಿಟರಿ ವೆಚ್ಚ ೧೫೩೧ ಬಿಲಿಯನ್ ಡಾಲರುಗಳಾದರೆ ಅದರಲ್ಲಿ ಅಮೆರಿಕಾದ ಪಾಲು ೬೬೧ ಬಿಲಿಯನ್ ಡಾಲರ್, ಚೀನಾದ ಪಾಲು ೧೦೦ ಬಿಲಿಯನ್ ಡಾಲರ್. ಈ ಪಟ್ಟಿಯಲ್ಲಿ ಒಂಬತ್ತನೇ ಸ್ಥಾನದಲ್ಲಿರುವ ಭಾರತದ ಪಾಲು ೩೬ ಬಿಲಿಯನ್ ಡಾಲರ್. ಅಂದರೆ, ಅಮೆರಿಕಾ ಮತ್ತು ಯುದ್ಧ, ಇವೆರಡೂ ಎಷ್ಟು ಪರಸ್ಪರವಾದುವು ಮತ್ತು ಪೂರಕವಾದುವು ಎಂಬುದು ಅರಿವಾಗುತ್ತದೆ. ಅಮೆರಿಕಾದ ಪ್ರಸಿದ್ಧ ಪ್ರಬಂಧಕಾರ, ಲೇಖಕ ವಿಲಿಯಮ್ ಬ್ಲಮ್‌ನ ಪ್ರಕಾರ ಅಮೆರಿಕಾದ ರಕ್ಷಣಾ ಮಂತ್ರಾಲಯ ಇತರ ರಾಷ್ಟ್ರಗಳಲ್ಲಿ ನಡೆಸುತ್ತಿರುವ ಯುದ್ಧಗಳು ಮತ್ತು ಇತರೆ ಯುದ್ಧಗಳಿಗೆ ನೀಡುತ್ತಿರುವ ಬೆಂಬಲವನ್ನೂ ಸೇರಿಸಿದಲ್ಲಿ, ಆ ರಾಷ್ಟ್ರ ಪ್ರತಿದಿನ ೩,೪೦,೦೦೦ ಬ್ಯಾರಲ್ (ಅಂದರೆ ೧೪ ಮಿಲಿಯನ್ ಗ್ಯಾಲನ್) ತೈಲವನ್ನು ವ್ಯಯಿಸುತ್ತದೆ. ಇದರೊಡನೆ ಮಿಲಿಟರಿ ಉದ್ದಿಮೆ ಸಂಕೀರ್ಣಕ್ಕಾಗಿ ಮಾಡುವ ತೈಲದ ಖರ್ಚೂ ಸೇರಿದಲ್ಲಿ, ಭಾರತದ ಒಟ್ಟು ತೈಲದ ಖರ್ಚಿಗಿಂತ ಆ ಮೊತ್ತ ಅತಿ ಹೆಚ್ಚಿನದೆಂದು ವಿವರಿಸಿದ್ದಾನೆ. ಅಮೆರಿಕಾದ ಜನಸಂಖ್ಯೆ ಸುಮಾರು ೩೦ ಕೋಟಿ. ವಾಹನಗಳ ಸಂಖ್ಯೆ ೨೫ ಕೋಟಿ. ಇದಕ್ಕೆ ತಗಲುವ ವೆಚ್ಚವನ್ನು ಪ್ರತ್ಯೇಕವಾಗಿ ಪರಿಗಣಿಸಬೇಕು. ಅಮೆರಿಕಾದ ಪ್ರಸಿದ್ಧ ಕಾಫಿ ದರ್ಶಿನಿಗಳ ಸರಮಾಲೆ ಕಂಪನಿ ಡಂಕಿನ್ ಡೋನಟ್. ಈ ಕಂಪನಿಯ 'ಅಮೆರಿಕಾ ಡಂಕಿನ್ ಮೇಲೆ ಓಡುತ್ತದೆ' ಎಂಬ ಜಾಹಿರಾತು ಎಲ್ಲೆಡೆ ಕಾಣಬರುತ್ತದೆ. ಈ ಜಾಹೀರಾತನ್ನು ಸ್ವಲ್ಪ ಮಾರ್ಪಡಿಸಿ 'ಅಮೆರಿಕಾ ತೈಲದ ಮೇಲೆ ಓಡುತ್ತದೆ' ಎಂದು ಸ್ವಲ್ಪ ಬದಲಾಯಿಸಿದರೆ ಅತ್ಯಂತ ಸೂಕ್ತವೇನೋ. ಯಾವುದೇ ಕಾರಣಕ್ಕೂ ಆ ರಾಷ್ಟ್ರಕ್ಕೆ ತೈಲ ಪೂರೈಕೆ ನಿಲ್ಲಿಸಲಾಯಿತು ಎಂದಾದರೆ ಆ ರಾಷ್ಟ್ರದ ಜನಜೀವನ ಸ್ಥಗಿತಗೊಳ್ಳುತ್ತದೆ. ಅಮೆರಿಕಾ ಸದಾ ಓಡುತ್ತಿರಬೇಕು, ತೈಲ ಪೂರೈಕೆಯಾಗುತ್ತಿರಲೇಬೇಕು. ಅದಕ್ಕಾಗಿ ಯುದ್ಧಗಳು ನಡೆಯುತ್ತಿರಲೇಬೇಕು. ಶೀತಲ ಸಮರದ ಕಾಲ ಈಗ ಹಳೆಯ ಕತೆ ಆದರೂ ಈಗೇಕೆ ಇಷ್ಟೊಂದು ಸಮರಗಳು ! ವಿಲಿಯಮ್ ಬ್ಲಮ್ ಯುದ್ಧದ ಬಗ್ಗೆ ಪ್ರಸ್ತಾಪಿಸುತ್ತಾ ಅಮೆರಿಕಾದ ಜನತೆಯ ಮುಂದಿಟ್ಟಿರುವ ಮೂರು ಪ್ರಶ್ನೆಗಳೆಂದರೆ: ಅಮೆರಿಕಾದ ಮೇಲೆ ಆಕ್ರಮಣ ಮಾಡುವವರು ಯಾರು ? ಅದಕ್ಕೆ ಕಾರಣಗಳೇನು ? ಮತ್ತು ಮೂವತ್ತು ಕೋಟಿ ಜನರಿರುವ ಈ ದೇಶವನ್ನು ಆಕ್ರಮಿಸಲು ಎಷ್ಟು ಸೈನಿಕರು ಬೇಕು ? ಅಮೆರಿಕಾದ ಬಹುತೇಕ ಜನರು ಈ ಪ್ರಶ್ನೆಗಳನ್ನು ಉತ್ತರಿಸಲಾರದಷ್ಟು ದೇಶಪ್ರೇಮಿಗಳು ! ಆದರೆ ಇವರ ಈ ದೇಶಪ್ರೇಮ ವಿಯತ್ನಾಂ, ಇರಾಕ್, ಅಫ್ಘಾನಿಸ್ತಾನ ಇತ್ಯಾದಿ ರಾಷ್ಟ್ರಗಳ ಸಹಸ್ರಾರು ಅಮಾಯಕರ ಹತ್ಯೆಗೆ ಕಾರಣವಾಗಿದೆ ಎಂಬುದು ಇವರ ಗಣನೆಗೆ ಬರುವುದಿಲ್ಲ.

**ಬರಾಕ್ ಒಬಾಮ ಮತ್ತು ಸುಧಾರಣೆಗಳು**

ಅಮೆರಿಕಾದ ಜನರಿಗೆ ಬರಾಕ್ ಒಬಾಮನ ಬಗೆಗಿರುವ ಆಕರ್ಷಣೆ ಕಡಿಮೆ ಯಾಗುತ್ತಿದೆ. ಜಾರ್ಜ್ ಬುಷ್ ಬಿಟ್ಟುಹೋದ ಸಮಸ್ಯೆಗಳೇ ಈತನಿಗೆ ಮುಳುವಾಗಿವೆ. ಒಬಾಮ ಗದ್ದುಗೆಯೇರಿದ ಸಂದರ್ಭದಲ್ಲಿ ಅಮೆರಿಕಾ ಭೀಕರ ಆರ್ಥಿಕ ಸಂಕಷ್ಟ ಎದುರಿಸುತ್ತಿತ್ತು. ಲಕ್ಷಾಂತರ ಜನ ನಿರುದ್ಯೋಗಿಗಳಾಗಿದ್ದರು. ಇರಾಕ್ ಮತ್ತು ಅಫ್ಘಾನಿಸ್ತಾನ ದಲ್ಲಿನ ಯುದ್ಧಗಳು ಅಮೆರಿಕಾವನ್ನು ಕಂಗೆಡಿಸಿತ್ತು. ಎಲ್ಲವೂ ದೀರ್ಘಕಾಲಿಕ ಸಂಕಷ್ಟಗಳೆ. ಹಾಗಾಗಿ ಒಬಾಮ ಚುನಾವಣಾ ಪೂರ್ವ ಮಾಡಿದ್ದ ಆಶ್ವಾಸನೆಗಳನ್ನು ಸಂಪೂರ್ಣವಾಗಿ ಜಾರಿಗೊಳಿಸಲಾಗುತ್ತಿಲ್ಲ. ಆದರೂ ಈತನ ಧೈರ್ಯವನ್ನು ಮೆಚ್ಚಬೇಕು. ಒಬಾಮ ಅಧ್ಯಕ್ಷನಾಗುವ ಸಮಯದಲ್ಲಿದ್ದ ಮತ್ತು ನಂತರ ಹುಟ್ಟಿದ ತೊಡಕುಗಳ ನಡುವೆಯೇ ರಾಷ್ಟ್ರೀಯ ವಾಹನ ನೀತಿಯನ್ನು ನಿರೂಪಿಸಿದ್ದು, ತೀವ್ರ ವಿರೋಧ ವನ್ನೆದುರಿಸುತ್ತಲೇ ಆರೋಗ್ಯ ವ್ಯವಸ್ಥೆಯಲ್ಲಿ ಸ್ವಲ್ಪಮಟ್ಟಿನ ಸುಧಾರಣೆ ತಂದದ್ದು, ಆರ್ಥಿಕ ಬಿಕ್ಕಟ್ಟಿಗೆ ಕಾರಣಕರ್ತ ರಾಗಿದ್ದ ಖಾಸಗಿ ಬ್ಯಾಂಕ್‌ಗಳನ್ನು ಹತೋಟಿಯಲ್ಲಿಡಲು ಹಣಕಾಸು ಮಸೂದೆಯನ್ನು ಜಾರಿ ಗೊಳಿಸಿದ್ದು, ಶ್ರೀಮಂತರು ಮತ್ತು ಕಾರ್ಪೊರೇಟ್‌ಗಳಿಗೆ ಜಾರ್ಜ್ ಬುಷ್ ಕೊಟ್ಟಿದ್ದ ತೆರಿಗೆ ವಿನಾಯ್ತಿಗಳನ್ನು ಕೊನೆಗೊಳಿಸಲು ಸಿದ್ಧತೆ ನಡೆಸುತ್ತಿರುವುದು ಮತ್ತು ಮಧ್ಯಮ ವರ್ಗದ ಜನರಿಗೆ ಆದಾಯ ತೆರಿಗೆಯನ್ನು ಕಡಿತಗೊಳಿಸುವ ಸೂಚನೆಯನ್ನು ಪ್ರಸ್ತಾಪಿಸಿರುವುದು, ಮಹಿಳೆಯರಿಗೆ ಸಮಾನ ವೇತನ ಪಡೆಯುವ ಹಕ್ಕನ್ನು ದೊರಕಿಸಿ ಕೊಟ್ಟಿರುವುದು, ನಿರುದ್ಯೋಗಿಗಳಿಗೆ ೯೯ ತಿಂಗಳು ನಿರುದ್ಯೋಗ ಭತ್ಯೆಯನ್ನು ಕೊಡುವ ಮಸೂದೆಯನ್ನು ಜಾರಿಗೊಳಿಸಿದ್ದು, ಇವೆಲ್ಲವು ಅಮೆರಿಕಾದ ಇತಿಹಾಸದಲ್ಲಿ ಜರುಗಿರುವ ಅತ್ಯಂತ ಪರಿಣಾಮಕಾರಿ ಸುಧಾರಣೆ ಗಳೆಂದೇ ಹೇಳಬಹುದಾಗಿದೆ. ಆರೋಗ್ಯ ವ್ಯವಸ್ಥೆಯ





ಸುಧಾರಣೆಯ ಬಗ್ಗೆ ಹಿಂದಿನ ಅಧ್ಯಕ್ಷರು ಮಾತನಾಡುತ್ತಲೇ ಬಂದಿದ್ದಾರೆ. ಆದರೆ ಈ ಬಗ್ಗೆ ಮಾತನಾಡಿದ ಕೊನೆಯ ಅಧ್ಯಕ್ಷನಾಗುವೆನೆಂದು ಒಬಾಮ ಒಮ್ಮೆ ಘೋಷಿಸಿದ್ದ. ಅಂತೆಯೇ ಇತ್ತೀಚೆಗೆ ನಿರುದ್ಯೋಗ ಭತ್ಯೆ ನೀಡುವ ಅವಧಿಯನ್ನು ವಿಸ್ತರಿಸುವಲ್ಲಿ ರಿಪಬ್ಲಿಕನ್ ಪಕ್ಷ ಸೆನೆಟ್‌ನಲ್ಲಿ ತಡೆಯೊಡ್ಡಿದ ಸಂದರ್ಭದಲ್ಲಿ ಒಬಾಮ, ಈ ಜನರು ಬಿಲಿಯಾಂತರ ಡಾಲರ್‌ಗಳನ್ನು ಮತ್ತು ಅನೇಕ ತೆರಿಗೆ ವಿನಾಯಿತಿಗಳನ್ನು ಅಮೆರಿಕಾದ ಶ್ರೀಮಂತರಿಗೆ ಕೊಟ್ಟಾಗ ಏನೂ ಕಸಿವಿಸಿಗೊಳ್ಳಲಿಲ್ಲ. ಈಗ ನಿರುದ್ಯೋಗದಿಂದ ನರಳುತ್ತಿರುವ ಅಮೆರಿಕಾದ ಮಧ್ಯಮ ವರ್ಗದ ಜನರಿಗೆ ಯಾವ ಪರಿಹಾರವನ್ನೂ ಕೊಡುವುದು ಬೇಡವೆಂದು ಇವರು ಹೇಳುವುದು ಎಷ್ಟು ಸರಿ, ಎಂದು ವಾಗ್ದಾಳಿ ನಡೆಸಿದ. ಅಮೆರಿಕಾದಲ್ಲೀಗ ನಿರುದ್ಯೋಗಿಗಳ ಸಂಖ್ಯೆ ಎಪ್ಪತ್ತು ಲಕ್ಷ. ಖಾಸಗಿ ಕ್ಷೇತ್ರದಲ್ಲಿ ಇಪ್ಪತ್ತು ಲಕ್ಷ ಉದ್ಯೋಗಗಳು ನಾಶವಾಗಿದೆ. ಪರಿಸ್ಥಿತಿ ಸುಧಾರಿಸುವ ಯಾವುದೇ ಸೂಚನೆಗಳಿಲ್ಲ, ಹಾಗಾಗಿ ನಿರುದ್ಯೋಗ ಭತ್ಯೆ ಈ ಜನರ ಬದುಕಿಗೆ ಇರುವ ಏಕಮಾತ್ರ ಆಸರೆ.

**ಅಮೆರಿಕಾ - ಟೀ ಪಾರ್ಟಿ**

ಕ್ಯೂಬಾದ ಆರೋಗ್ಯ ವ್ಯವಸ್ಥೆಗೆ ಹೋಲಿಸಿದರೆ ಒಬಾಮ ತಂದಿರುವ ಆರೋಗ್ಯ ವ್ಯವಸ್ಥೆಯ ಸುಧಾರಣೆಗಳು ಅತ್ಯಲ್ಪ. ಮಿಕ್ಕ ಸುಧಾರಣೆಗಳೂ ಮಹತ್ವವಾದವುಗಳೇನಲ್ಲ. ಆದರೆ ಬರಾಕ್ ಒಬಾಮನ ಈ ಸಾಮಾನ್ಯ ಸುಧಾರಣೆಗಳು ಬಿರುಗಾಳಿಯನ್ನೆಬ್ಬಿಸಿವೆ. ಒಬಾಮ ಅಮೆರಿಕಾದ ಗೌರವವನ್ನು ಕಿರಿದಾಗಿಸುತ್ತಿದ್ದಾನೆ, ದೇಶವನ್ನು ದಿವಾಳಿಯಾಗಿಸುತ್ತಿದ್ದಾನೆ ಇತ್ಯಾದಿಯಾಗಿ ರಿಪಬ್ಲಿಕನ್ ಪಕ್ಷ ಬೊಬ್ಬೆ ಹೊಡೆಯುತ್ತಿದೆ. ಅಮೆರಿಕಾದಲ್ಲಿ ಪ್ರತಿಭಟನೆಗಳು ಜರುಗುವುದು ವಿರಳ. ಈಗ ಯೂರೋಪಿನಲ್ಲಿ ಅವು ಹೇರಳ. ಒಬಾಮ ಅಧ್ಯಕ್ಷನಾದ ನಂತರ ಅಲ್ಲಿ-ಇಲ್ಲಿ ಟೀ ಪಾರ್ಟಿಗಳು ನಡೆಯುತ್ತಿರುತ್ತವೆ. ಅಂದಹಾಗೆ, ಅಮೆರಿಕಾದ ಸಂದರ್ಭದಲ್ಲಿ ಟೀ ಪಾರ್ಟಿಯೆಂದರೆ ಪ್ರತಿಭಟನಾ ಸಭೆ. ಹದಿನೆಂಟನೇ ಶತಮಾನದಲ್ಲಿ ಅಮೆರಿಕಾದ ಅನೇಕ ಪ್ರದೇಶಗಳು ನೇರ ಬ್ರಿಟಿಷ್ ಆಳ್ವಿಕೆಗೆ ಒಳಪಟ್ಟಿದ್ದವು. ಬ್ರಿಟನ್‌ನಿಂದ ಬಂದ ಚಹಾಪುಡಿಗೆ ಇಲ್ಲಿದ್ದ ಜನರು ತೆರಿಗೆ ಕಟ್ಟಬೇಕಾಗಿತ್ತು. ೧೭೭೩ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಜಾರಿಗೆ ತಂದ ಟೀ ಕಾಯ್ದೆಯನ್ನು ವಿರೋಧಿಸಿ ಇಂಗ್ಲೆಂಡ್‌ನಿಂದ ಅಮೆರಿಕಾದ ಬಾಸ್ಟನ್ ಬಂದರಿಗೆ ಬಂದಿಳಿದಿದ್ದ ಮೂರು ಹಡಗುಗಳಲ್ಲಿದ್ದ ಚಹಾವನ್ನು ದೇಶದೊಳಗೆ ತರಲು ಬಿಡದೆ ಜನರು ಪ್ರತಿಭಟಿಸಿದರು. ಆ ಹಡಗುಗಳು ಇಂಗ್ಲೆಂಡ್‌ಗೆ ವಾಪಸ್ಸು ಹೋಗಲು ನಿರಾಕರಿಸಿದಾಗ ಪ್ರತಿಭಟನಾಕಾರರು ಹಡಗುಗಳನ್ನೇರಿ ಚಹಾ ಪುಡಿಯನ್ನು ಅಟ್ಲಾಂಟಿಕ್ ಸಾಗರಕ್ಕೆ ಎಸೆದ ಘಟನೆ ಅಮೆರಿಕಾದ ಸ್ವಾತಂತ್ರ್ಯ ಸಂಗ್ರಾಮಕ್ಕೆ ನಾಂದಿ ಹಾಡಿತು. ಆ ಹೋರಾಟವು 'ಬಾಸ್ಟನ್ ಟೀ ಪಾರ್ಟಿ' ಎಂದೇ ಇತಿಹಾಸದಲ್ಲಿ ದಾಖಲಾಯಿತು. ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಮಹಾತ್ಮಾಗಾಂಧಿ ಬ್ರಿಟಿಷ್ ಅಧಿಕಾರಿಗಳ ಜೊತೆ ಮಾತನಾಡುತ್ತಾ ತಾವು ಬಟ್ಟೆಯಲ್ಲಿ ಕಟ್ಟಿ ತಂದಿದ್ದ ಹಿಡಿ ಉಪ್ಪನ್ನು ಅವರಿಗೆ ತೋರಿಸಿ ಬಾಸ್ಟನ್ ಟೀ ಪಾರ್ಟಿಯ ಘಟನೆಯನ್ನು ನೆನಪಿಸಿಕೊಳ್ಳುವಂತೆ ಮುಗುಳ್ನಗುತ್ತಲೇ ಹೇಳಿ ಮುಂಬರುವ ಉಪ್ಪಿನ ಸತ್ಯಾಗ್ರಹದ ಸೂಚನೆ ಕೊಟ್ಟದ್ದು ಅಂದಿನ ಟೀ ಪಾರ್ಟಿಯ ಐತಿಹಾಸಿಕ ವಿಶೇಷತೆಗೆ ಸಾಕ್ಷಿ.

**ಒಬಾಮ - ಸಮಾಜವಾದಿ !**

ಬಾಸ್ಟನ್‌ನಲ್ಲಿ ಅಂದು ನಡೆದ ಟೀ ಪಾರ್ಟಿಗೂ ಇಂದು ಅಮೆರಿಕಾದಲ್ಲಿ ನಡೆಯುತ್ತಿರುವ ಟೀ ಪಾರ್ಟಿಗಳಿಗೂ ಯಾವುದೇ ಸಾಮ್ಯವಿಲ್ಲ. ಇಂದಿನ ಟೀ ಪಾರ್ಟಿಯ ಬಹುತೇಕ ಜನರು ಬಲಪಂಥೀಯರು ಮತ್ತು ರಿಪಬ್ಲಿಕನ್ ಪಕ್ಷದ ಬೆಂಬಲಿಗರು ನಮ್ಮ ದೇಶದಲ್ಲಿ ಭಾರತೀಯ ಜನತಾ ಪಕ್ಷದ ಬೆನ್ನೆಲುಬಾಗಿರುವ ಸಂಘ ಪರಿವಾರದ ಜನಗಳಂತೆ. ೨೦೦೮ರಲ್ಲಿ ಹುಟ್ಟಿಕೊಂಡ ಟೀ ಪಾರ್ಟಿ ಅನೇಕ ರಾಜಕೀಯ ಬೇಡಿಕೆಗಳನ್ನು ಹೊಂದಿದ್ದರೂ ಇದೊಂದು ರಾಜಕೀಯ ಪಕ್ಷವಲ್ಲ, ಟೀ ಪಾರ್ಟಿ ಒಂದು ಚಳುವಳಿಯೆಂದು ಇದರ ವಕ್ತಾರರು ಹೇಳಿಕೊಳ್ಳುತ್ತಾರೆ. ಆದರೆ ಟೀ ಪಾರ್ಟಿಯ ನಾಯಕರ ಭಾಷಣಗಳನ್ನು ಕೇಳಿದರೆ ಇದು ರಿಪಬ್ಲಿಕನ್ ಪಕ್ಷದ ಇನ್ನೊಂದು ಪ್ರಮುಖ ಅಂಗ ಎಂಬುದು ಸ್ಪಷ್ಟವಾಗುತ್ತದೆ. ಬರಾಕ್ ಒಬಾಮನನ್ನು ವಾಚಾಮಗೋಚರವಾಗಿ ಬಯ್ಯುವುದು ಈ ಟೀ ಪಾರ್ಟಿಗಳ ಪ್ರಮುಖ ಕಾಯಕ.



ಜವಾಬ್ದಾರಿಯುತ ಹಣಕಾಸಿನ ವ್ಯವಹಾರ, ಸಂವಿಧಾನಾತ್ಮಕ ಸೀಮಿತ ಸರ್ಕಾರ, ಮುಕ್ತ ಮಾರುಕಟ್ಟೆ, ಅಮೆರಿಕಾದ ಶ್ರೇಷ್ಠತೆ ಇತ್ಯಾದಿಗಳನ್ನು ಪ್ರತಿಪಾದಿಸುವ ಟೀ ಪಾರ್ಟಿಯ ಸಂಘಟಕರು ಒಬಾಮ ಸಂವಿಧಾನದ ಈ ಎಲ್ಲ ಮೌಲ್ಯಗಳನ್ನು ನಾಶಪಡಿಸುತ್ತಿದ್ದಾನೆಂದೂ, ದುಂದುವೆಚ್ಚಗಳಿಗೆ (ಆರೋಗ್ಯ ಯೋಜನೆ, ನಿರುದ್ಯೋಗ ಭತ್ಯೆ, ಬ್ಯಾಂಕ್, ಕಾರ್ಖಾನೆಗಳ ಪುನಶ್ಚೇತನಕ್ಕೆ ಸರ್ಕಾರ ಕೊಟ್ಟ ಹಣಕಾಸು ಸಹಾಯ ಇತ್ಯಾದಿ!) ಕೈಹಾಕಿ ಬಜೆಟ್ ಖೋತಾವನ್ನು ಹೆಚ್ಚಿಸುತ್ತಿದ್ದಾನೆಂದೂ, ಅಂತರರಾಷ್ಟ್ರೀಯ ಸ್ತರದಲ್ಲಿ ಅಮೆರಿಕಾದ ವರ್ಚಸ್ಸನ್ನು ಕುಂದಿಸುತ್ತಿದ್ದಾನೆಂದೂ, ದೇಶವನ್ನು ದಿವಾಳಿಯಾಗಿಸುತ್ತಿದ್ದಾನೆಂದೂ ತಮ್ಮ ಸಭೆಗಳಲ್ಲಿ ಕೂಗಾಡುತ್ತಾರೆ. ಈತನೊಬ್ಬ ಹಿಟ್ಲರ್ ಎಂದೂ, ಅಮೆಂಕಾದಲ್ಲಿ ಇನ್ನು ಮುಂದೆ ಚುನಾವಣೆ ನಡೆಯುವುದಿಲ್ಲವೆಂದೂ ಟೀ ಪಾರ್ಟಿಯ ಜನ ಕೆಲವೆಡೆ ಹೇಳಿದರೆ, ಇನ್ನು ಕೆಲವೆಡೆ ಒಬಾಮ ಮಾರ್ಕ್ಸ್‌ವಾದಿಯೆಂದೂ, ಅಮೆರಿಕಾದಲ್ಲಿ ಸಮಾಜವಾದ ತರಲು ಹೊರಟಿದ್ದಾನೆಂದೂ ಕೂಗಾಡಿ ದಕ್ಷಿಣ ಅಮೆರಿಕಾದ ರಾಷ್ಟ್ರಗಳಾದ ಕ್ಯೂಬಾ, ವೆನಿಜುವೆಲ, ಬೊಲಿವಿಯ, ನಿಕರಗುವಾ, ಈಕ್ವೆಡಾರ್, ಬ್ರೆಜಿಲ್ ದೇಶಗಳಲ್ಲಿರುವ ಎಡಪಂಥೀಯ ನಾಯಕರ ಪಟ್ಟಿಗೆ ಈತನನ್ನು ಸೇರಿಸುತ್ತಾರೆ. ಪ್ರಪಂಚದಾದ್ಯಂತ ಕಮ್ಯುನಿಸ್ಟ್ ವ್ಯವಸ್ಥೆಗಳ ನಾಶಕ್ಕಾಗಿ ಏನೆಲ್ಲ ಕಷ್ಟಪಟ್ಟ ಮೇಲೆ, ಈಗ ಅಮೆರಿಕಾವೇ ಕೆಂಪಾಗುತ್ತಿದೆಯೆಂದು ರೋದಿಸುತ್ತಾರೆ. ಇದು ಅಮೆರಿಕಾದ ಜನರನ್ನು ಸ್ವಲ್ಪಮಟ್ಟಿಗೆ ಕೆಣಕಿದಂತೆ ಕಾಣುತ್ತದೆ.

**ನೆಲೆ ಕಾಣದ ಒಬಾಮ**

ಕಾರ್ಪೊರೇಟ್ ದಣಿಗಳು, ರಿಪಬ್ಲಿಕನ್ ಪಕ್ಷ ಮತ್ತು ಟೀ ಪಾರ್ಟಿ ಜನಗಳೂ ಬರಾಕ್ ಒಬಾಮನ ವಿರುದ್ಧ, ಅವನ ನೀತಿಗಳ ವಿರುದ್ಧ ಮತ್ತು ಅವನು ತಂದಿರುವ ಸುಧಾರಣೆಗಳ ಬಗ್ಗೆ ಕಟುವಾಗಿ ಟೀಕಿಸುತ್ತಾರೆ. ಇನ್ನೊಂದೆಡೆ ಡೆಮೊಕ್ರ್ಯಾಟಿಕ್ ಪಕ್ಷದ ಸುಧಾರಣಾವಾದಿಗಳಿಗೆ ಒಬಾಮ ತಂದಿರುವ ಸುಧಾರಣೆಗಳ ಬಗ್ಗೆ ಸಂಪೂರ್ಣ ತೃಪ್ತಿ ತಂದಿಲ್ಲ. ಚುನಾವಣಾಪೂರ್ವ ನೀಡಿದ ಭರವಸೆಗಳಿಂದ ಒಬಾಮ ಹಿಂದೆ ಸರಿದಿದ್ದಾನೆಂಬುದು ಇವರ ಆರೋಪ. ಇನ್ನೊಂದು ಗಮನಾರ್ಹ ಅಂಶವೆಂದರೆ ಒಬಾಮನ ಆಡಳಿತ ತಂದಿರುವ ಸುಧಾರಣೆಗಳು ಸಂಪೂರ್ಣವಾಗಿ ಜಾರಿಗೊಳ್ಳುವುದಕ್ಕೆ ಇನ್ನೂ ಎರಡು ವರ್ಷ ಬೇಕು. ಸುಧಾರಣೆಗಳ ಫಲವನ್ನು ಅನುಭವಿಸಲಿರುವ ಅಮೆರಿಕಾದ ಜನರೂ ಕೂಡ ಈಗ ಮೌನಿಗಳಾಗಿದ್ದಾರೆ. ಹಾಗಾಗಿ ಒಬಾಮನ ವರ್ಚಸ್ಸು ಇಷ್ಟು ಸಾಧನೆಗಳ ನಡುವೆಯೂ ಕುಂದಿದೆ. ಅದೇನೇ ಇರಲಿ, ಅಮೆರಿಕಾದಲ್ಲೀಗ ಸಮಾಜವಾದದ ಬಗ್ಗೆ ಚರ್ಚೆ ಅಥವಾ ಟೀಕೆ ಜಾರಿಯಲ್ಲಿ ಇರುವುದು ಈ ದೇಶದ ಇತಿಹಾಸದಲ್ಲಿ ಒಂದು ಸ್ವಾಗತಾರ್ಹ ಬೆಳವಣಿಗೆ. ಈ ಕಾರಣಕ್ಕಾದರೂ ಬರಾಕ್ ಒಬಾಮ ಓರ್ವ ವಿಶಿಷ್ಟ ವ್ಯಕ್ತಿಯಾಗಿ ಚರಿತ್ರೆಯಲ್ಲಿ ದಾಖಲಾಗಬಹುದು. ಬೇಡವೆಂದರೂ ಈತ ಸಮಾಜವಾದಿ ಎಂಬ ಹಣೆಪಟ್ಟಿ ಕಟ್ಟಿಸಿಕೊಂಡಿರುವುದು ಇತಿಹಾಸದ ವ್ಯಂಗ್ಯಗಳಲ್ಲೊಂದಾಗಬಹುದು.

**ಮುರಳೀಧರ್**
ವಕೀಲರು, ನಂ. ೮೩, ೫ನೇ ಕ್ರಾಸ್, ಮಲ್ಲೇಶ್ವರಂ ವೃತ್ತ
ಬೆಂಗಳೂರು - ೫೬೦ ೦೦೩.

# ಪದ




ಪದ.
ಹುಟ್ಟಿತ್ತು ರಕ್ತದಲ್ಲಿ.
ತುಡಿಯುತ್ತ ಬೆಳೆದಿತ್ತು ನಿಗೂಢ ದೇಹದಲ್ಲಿ,
ಹೊರಕ್ಕೆ ಪ್ರವಹಿಸಿತ್ತು. ಬಾಯಿ ಹಾಗೂ ತುಟಿಗಳ ಮೂಲಕ.
ಅತಿ ದೂರ ಮತ್ತು ಅತಿ ಹತ್ತಿರದಿಂದ,
ಸತ್ತ ಪಿತೃಗಳಿಂದ ಮತ್ತು ಅಲೆಮಾರಿ ಜನಾಂಗದಿಂದ
ಬಡಪಾಯಿ ಬುಡಕಟ್ಟುಗಳಿಂದ
ಬೇಸತ್ತು ಶಿಲೆಯಾಗಿ ಹೋದ ನಾಡುಗಳಿಂದ
ಅದು ಬಂದಿತ್ತು.
ಏಕೆಂದರೆ, ನೋವು ರಸ್ತೆಗಿಳಿದಾಗ
ಪಯಾಣಗಳು ಆರಂಭಗೊಂಡವು
ಹೊಸನಾಡು ಮತ್ತು ನೀರು ಮತ್ತೆ ಒಂದುಗೂಡಿದವು
ತಮ್ಮ ಪದಗಳನ್ನು ಹೊಸದಾಗಿ ಬಿತ್ತಲಿಕ್ಕಾಗಿ.
ಇದುವೇ ಪಿತ್ರಾರ್ಜಿತ.
ಇದೇ ಅಲೆಯುದ್ದ ನಮ್ಮನ್ನು ಸತ್ತವರೊಡನೆ,
ಮುಂಜಾವಿನೊಡನೆ, ಮತ್ತು ಇನ್ನೂ ಬೆಳಕಿಗೇ ಬಾರದಿರುವ ಹೊಸ
ಜೀವಗಳೊಡನೆ

ಸೇರಿಸುವಂತಹುದು.
ಆ ಪ್ರಥಮ ಪದದಿಂದ
ಕಂಪಿಸುತ್ತಿದೆ ಇನ್ನೂ ಇಡಿಯ ವಾತಾವರಣ.
ಕತ್ತಲಿನ ಒಡಲಿಂದ
ಅದು ಹೊರಬಂದಿತ್ತು
ಭಯ ಮತ್ತು ನಿಟ್ಟುಸಿರುಗಳ
ಉಡುಗೆಯುಟ್ಟು.
ಆ ಪದದಂಥ ಪೌರುಷದಿಂದ ಗರ್ಜಿಸುವ
ಗುಡುಗು ಇನ್ನಿದುವರೆಗು ಯಾವುದೂ ಇಲ್ಲ.
ಪ್ರಪ್ರಥಮ ಪದ
ನುಡಿದದ್ದು,
ಬಹುಶಃ ಅದೊಂದು ಸಣ್ಣ ಅಲೆಯಿದ್ದಿರಬಹುದು, ಬರಿ ಒಂದು ಹನಿ,
ಆದರೂ, ಅದರ ಮಹಾನ್ ಜಲಪಾತ ಬೀಳುತ್ತಲೇ ಇದೆ. ಬೀಳುತ್ತಲೇ ಇದೆ
ನಂತರ ಪದ ಅರ್ಥದಿಂದ ತುಂಬಿಕೊಂಡಿತ್ತು.
ಪ್ರತಿಯೊಂದೂ, ಹುಟ್ಟುಗಳೊಡನೆ, ಶಬ್ದಗಳೊಡನೆ,
ದೃಢೀಕರಣ, ನಿರ್ಮೂಲನ, ಸಾವುಗಳೊಡನೆ ಸೆಣೆಸಬೇಕಿತ್ತು.
ನಂತರ, ಕ್ರಿಯೆ ಎಲ್ಲದರ ಮೇಲೆ ಆಧಿಪತ್ಯ ಸ್ಥಾಪಿಸಿತು
ಮತ್ತು ತನ್ನ ವಿದ್ಯುತ್ ಸೌಂದರ್ಯದಿಂದ,
ಅಸ್ತಿತ್ವದೊಡನೆ ಬೆಸೆಯಿತು ಸತ್ಯವನ್ನು.

ಮಾನವರ ಪದ, ಸ್ವರ,
ಇವು ಬೆಳಕಿನ ಹರಹು ಮತ್ತು ಸ್ವರ್ಣಕಾರನ ಕುಶಲ ಕಲಾ ಸಂಯೋಜನ.
ರಕ್ತ ಸಂಸರ್ಗವನು
ಹಿಡಿದಿಟ್ಟುಕೊಳ್ಳುವುದು, ಅನುವಂಶೀಯ ಪಾತ್ರ.
ಮಾನವ, ಪದದ ಸಂಪೂರ್ಣತೆಯಲ್ಲಿ
ಇಲ್ಲಿ ಹಿಡಿದಿಟ್ಟುಕೊಂಡಿದ್ದು ಮೌನವನ್ನು.
ಆದರೆ, ಮಾತನಾಡದಿರುವುದೆಂದರೆ, ಸತ್ತಂತೆ ಮಾನವರಿಗೆ.
ಕೇಶಾಗ್ರಗಳವರೆಗು ಸಹ ಭಾಷೆ ವಿಸ್ತರಿಸುತ್ತದೆ.
ತುಟಿ ಚಾಲನೆಯಿಲ್ಲದೆಯೇ ಬಾಯಿ ಮಾತನಾಡುತ್ತದೆ.
ಕಣ್ಣುಗಳೆ ಪದಗಳಾಗಿಬಿಡುತ್ತವೆ ಇದ್ದಕ್ಕಿದ್ದಂತೆ.
ನುಡಿ ಮನುಷ್ಯಾಕೃತಿಗಿಂತ ಬೇರೇನೂ ಅಲ್ಲ ಎನ್ನುವಂತೆ

ನಾನು ಅದನ್ನು ಒಪ್ಪಿಕೊಳ್ಳುತ್ತೇನೆ, ಅದರಂತೆ ನಡೆಯುತ್ತೇನೆ.
ಅದರ ವ್ಯವಸ್ಥೆಗಳು ಭಯಗೊಳಿಸುತ್ತವೆ ನನ್ನನ್ನು, ಮತ್ತು
ನುಡಿದ ಪದಗಳ
ಒಂದೊಂದು ಬದಲಾವಣೆಯ ಮೂಲಕವೂ, ನನ್ನ ದಾರಿಯನು
ನಾನು ಕಂಡುಕೊಳ್ಳುತ್ತೇನೆ.
ನಾನು ಮಾತನಾಡುತ್ತೇನೆ, ಆದ್ದರಿಂದ ನಾನಿದ್ದೇನೆ; ಮತ್ತು
ಮಾತನಾಡದೆಯೇ ಸಮೀಪಿಸುತ್ತೇನೆ,
ಮಾತು ಮತ್ತು ಮೌನದ ಮಿತಿಯನ್ನು.

ಇಂಥ ಪದಗಳಿಗಾಗಿ ಸ್ವಸ್ತಿಪಾನ ಮಾಡುತ್ತೇನೆ,
ಮೇಲಕೆತ್ತುತ್ತ ಒಂದು ಪದವನ್ನು ಅಥವಾ ಒಂದು ಹೊಳೆವ
ಬಟ್ಟಲನ್ನು.
ಕುಡಿಯುತ್ತೇನೆ ಅದರಲ್ಲಿ
ಭಾಷೆಯ ಶುದ್ಧ ಮಧುವನ್ನು
ಅಥವಾ ಅಕ್ಷಯ ಜಲವನ್ನು
ಮತ್ತು ಪದಗಳ ಮಾತೃಮೂಲವನ್ನು
ಆಗ, ಬಟ್ಟಲು, ಜಲ ಮತ್ತು ಮಧು
ಜನ್ಮ ನೀಡುತ್ತವೆ ನನ್ನ ಹಾಡಿಗೆ.
ಏಕೆಂದರೆ, ಕ್ರಿಯೆಯ ಉಗಮಸ್ಥಾನ
ಮತ್ತು ಸ್ಪಷ್ಟಜೀವನ ನಾದ ಪದ - ಅದು ರಕ್ತ
ತನ್ನ ಸತ್ವವನು ಅಭಿವ್ಯಕ್ತಿಗೊಳಿಸುವ ರಕ್ತ,
ಆದ್ದರಿಂದ ತನ್ನದೇ ಆದ ಬಿಚ್ಚುಕೊಳ್ಳುವಿಕೆಯನ್ನು ಧ್ವನಿಸುತ್ತದೆ.
ಪದಗಳು ನೀಡುತ್ತವೆ, ಗಾಜಿಗೆ ಗಾಜಿನ ಗುಣವನ್ನು
ರಕ್ತಕ್ಕೆ ರಕ್ತವನ್ನು, ಮತ್ತು ಜೀವನಕ್ಕೆ ಜೀವನವನ್ನು, ಜೀವಕ್ಕೆ
ಜೀವನವನ್ನು.

ಮೂಲ : ಪಾಬ್ಲೋ ನೆರೂಡನ 'ದಿ ವರ್ಡ್'
ಕನ್ನಡಕ್ಕೆ : ಎಲ್. ವಿ. ಶಾಂತಕುಮಾರಿ
ನಂ. ೧೫೮, 'ರಾಮ ರಕ್ಷ', ೪ನೇ ಮುಖ್ಯ ರಸ್ತೆ ೫ನೇ ಅಡ್ಡರಸ್ತೆ
ಪೂರ್ಣಚಂದ್ರ ಲೇ ಔಟ್, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಪಂಚಾಯತ್‌ರಾಜ್ ಸಂಸ್ಥೆಗಳ ವಿಕಾಸ ಮತ್ತು ಅವುಗಳ ಹಣಕಾಸು

ಪ್ರಾಚೀನ ಕಾಲದಿಂದ ಇಂದಿನವರೆಗೆ ಪಂಚಾಯತ್ ರಾಜ್ ಸಂಸ್ಥೆಗಳು ಹೇಗೆ ಬೆಳವಣಿಗೆ ಹೊಂದಿದವು ಮತ್ತು ಸರ್ಕಾರಗಳ ವಿವಿಧ ಕಾಯಿದೆಗಳ ಅನುಷ್ಠಾನದ ಜೊತೆಗೆ ಪಂಚಾಯತ್‌ರಾಜ್ ಸಂಸ್ಥೆಗಳು ಹೇಗೆ ವಿಕಾಸಗೊಂಡವು ಎಂಬುದನ್ನು ತಿಳಿದುಕೊಳ್ಳಬೇಕಿದೆ. ಭಾರತಕ್ಕೆ ಪಂಚಾಯತ್ ರಾಜ್ ವ್ಯವಸ್ಥೆ ಹೊಸದೇನಲ್ಲ. ವೇದಗಳ ಕಾಲದಿಂದಲೂ ಗ್ರಾಮಗಳ ಆಡಳಿತವು ಸ್ಥಳೀಯ ಸಂಸ್ಥೆಗಳ ಮೂಲಕ ನಡೆಯುತ್ತಾ ಬಂದಿದೆ. ಇವು ಚಿಕ್ಕ ಗಣರಾಜ್ಯಗಳಂತೆ ಕೆಲಸ ಮಾಡಿಕೊಂಡು ಬಂದಿವೆ.

ಭಾರತದಲ್ಲಿ ಬ್ರಿಟಿಷ್ ಗೌರ್ನರ್ ಆಗಿದ್ದ ಸರ್ ಚಾರ್ಲ್ಸ್ ಮೆಟ್‌ಕಾಫ್‌ನ 'ಚಿಕ್ಕ ಗಣರಾಜ್ಯ' (೧೮೩೦)ದಿಂದ ಪ್ರಾರಂಭವಾಗಿ ಗಾಂಧೀಜಿಯವರ ಗ್ರಾಮಸ್ವರಾಜ್ ಎಂಬ ರೂಪ ತಾಳಿ, ದೇಶದ ಪ್ರಥಮ ಪ್ರಧಾನಿ ನೆಹರೂ ಅವರ ಸಮುದಾಯ ಘಟಕವಾಗಿ, ೧೯೭೦ರಲ್ಲಿ ಕೇಂದ್ರ ಸರ್ಕಾರದ 'ಸಮಗ್ರ ಗ್ರಾಮೀಣ ಅಭಿವೃದ್ಧಿ' ಕಾರ್ಯಕ್ರಮವಾಗಿ ವಿಕಾಸಗೊಂಡು ಬಲವಂತರಾಯ್ ಮೆಹತಾ ಮತ್ತು

ಜಿಲ್ಲಾ ಪಂಚಾಯಿತಿ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳು ಸಂವಿಧಾನಾತ್ಮಕವಾಗಿ ದೊರೆತಿರುವ ಅಧಿಕಾರಗಳನ್ನು ಬಳಸಿಕೊಂಡು ಕಾರ್ಯ ನಿರ್ವಹಿಸಿದಾಗ ಗಾಂಧೀಜಿ ಕಂಡ ಗ್ರಾಮರಾಜ್ಯದ ಕನಸು ನನಸಾದೀತು. ಇದರ ಜೊತೆಗೆ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಜನರ ಭಾಗವಹಿಸುವಿಕೆ ಬಹಳ ಪ್ರಮುಖವಾದುದು. ಗ್ರಾಮ ಪಂಚಾಯಿತಿಗಳು ದೇಶದ ಏಳಿಗೆಯಲ್ಲಿ ಪ್ರಮುಖ ಪಾತ್ರವಹಿಸುವಂತಾಗಿ ತಳಮಟ್ಟದಿಂದ ಪ್ರಜಾಪ್ರಭುತ್ವ ಗಟ್ಟಿಯಾಗಿ ನಿಲ್ಲುವಂತಾಗಬೇಕು. ಭಾರತದಂತಹ ಆರ್ಥಿಕತೆಯಲ್ಲಿ ಗ್ರಾಮೀಣಾಭಿವೃದ್ಧಿಯು ಎಲ್ಲಾ ಪಂಚವಾರ್ಷಿಕ ಯೋಜನೆಗಳ ಉದ್ದೇಶವಾಗಿದೆ. ಅಭಿವೃದ್ಧಿಯಲ್ಲಿ ಗ್ರಾಮೀಣ ಜನರು ಪಾಲ್ಗೊಳ್ಳುವಂತೆ ಮಾಡುವಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ಪ್ರಮುಖ ಪಾತ್ರ ವಹಿಸಬೇಕಿದೆ.

**ಕೆ. ಆರ್. ಭೋಗೇಶ್ವರಪ್ಪ**



ಅಶೋಕ್ ಮೆಹ್ತ ಇವರ ಶ್ರಮದ ಫಲವಾಗಿ ವಿಕೇಂದ್ರೀಕರಣ ಎಂಬಲ್ಲಿಗೆ ಬಂದುದಾಗಿದೆ. 'ಪಂಚಾಯತ್', 'ಪಂಚರು' ಎಂಬ ಪದಗಳು ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದವು. 'ಪಂಚ' ಎಂದರೆ 'ಐದು'. ಈ ಪದದಿಂದ ಪಂಚಾಯತ್ ನಿಷ್ಪನ್ನವಾಗಿದೆ. ಪ್ರಾರಂಭದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನ ಕೊಟ್ಟಿರಲಿಲ್ಲ. ನಂತರ ಇವುಗಳಿಗೆ ಸಂವಿಧಾನಾತ್ಮಕ ಸ್ಥಾನ ದೊರೆಯಿತು. ಭಾರತ ಸಂವಿಧಾನದ ೭೩ನೇ ತಿದ್ದುಪಡಿಯಲ್ಲಿ ಇವುಗಳಿಗೆ ಅವಕಾಶ ನೀಡಲಾಯಿತು. ಈ ತಿದ್ದುಪಡಿಯಿಂದ ೨ ಹಂತದ ಒಕ್ಕೂಟ ವ್ಯವಸ್ಥೆ ಬಹುಹಂತದ ಒಕ್ಕೂಟ ವ್ಯವಸ್ಥೆಯಾಗಿ ರೂಪುಗೊಂಡಿತು. ೧೮೬೨ರಿಂದಲೂ ಕರ್ನಾಟಕವು ಸ್ಥಳೀಯ ಸಂಸ್ಥೆಯನ್ನು ಅನುಷ್ಠಾನಗೊಳಿಸಬೇಕೆಂದು ಪ್ರಯತ್ನಿಸುತ್ತಾ ಬಂದಿದೆ. ೧೮೭೪ರಲ್ಲಿ ಪ್ರತಿ ಜಿಲ್ಲೆಯಲ್ಲಿ 'ಸ್ಥಳೀಯ ನಿಧಿ' ಸೃಷ್ಟಿಸಿ ಅದಕ್ಕಾಗಿಯೇ ಒಂದು ಸಮಿತಿಯನ್ನು ರಚಿಸಲಾಯಿತು.

೧೮೮೨ರಲ್ಲಿ ಸ್ಥಳೀಯ ಸರ್ಕಾರಗಳ ಜನಕನೆಂದು ಕರೆಯಲ್ಪಡುವ ಲಾರ್ಡ್ ರಿಪ್ಪನ್ ಸ್ಥಳೀಯ ಸರ್ಕಾರಗಳ ರಚನಾ ಕಾಯಿದೆಯನ್ನು ಜಾರಿಗೊಳಿಸಿದನು. ೧೯೦೨ರಲ್ಲಿ ಮೈಸೂರು ಲೋಕಲ್ ಬೋರ್ಡ್ಸ್ ಶಾಸನ ಜಾರಿಗೆ ಬಂದಿತು. ೧೯೧೮ರಲ್ಲಿ ಮೈಸೂರು ಸರ್ಕಾರವು ಮೈಸೂರು ಲೋಕಲ್ ಬೋರ್ಡ್ಸ್ ಅಂಡ್ ವಿಲೇಜ್ ಪಂಚಾಯತ್ ಕಾಯಿದೆಯನ್ನು ತಂದಿತು. ೧೯೨೭ರ ಕೊನೆಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಚುನಾಯಿತ ಸದಸ್ಯರನ್ನು ನೇಮಕ ಮಾಡಿಕೊಳ್ಳುವ ಪ್ರಕ್ರಿಯೆಗೆ ಚಾಲನೆ ನೀಡಲಾಯಿತು. ೧೯೫೭ರಲ್ಲಿ ಕೇಂದ್ರ ಸರ್ಕಾರವು ರಾಷ್ಟ್ರಮಟ್ಟದಲ್ಲಿ ಬಲವಂತರಾಯ್ ಮೆಹ್ತ ನೇತೃತ್ವದಲ್ಲಿ ಸಮಿತಿ ನೇಮಿಸಿತು. ಈ ಸಮಿತಿಯು ೩ ಹಂತದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂದು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸಿನ ಅನ್ವಯ ೧೯೫೯ರಲ್ಲಿ ಕರ್ನಾಟಕ ಸರಕಾರ ದಿ ಮೈಸೂರ್ ವಿಲೇಜ್ ಪಂಚಾಯತ್ ಅಂಡ್ ಲೋಕಲ್ ಬೋರ್ಡ್ಸ್ ಶಾಸನವನ್ನು ಜಾರಿಗೆ ತಂದಿತು.

೧೯೮೦ರಲ್ಲಿ ಕರ್ನಾಟಕವೂ ಸೇರಿದಂತೆ ದೇಶದ ಕೆಲವು ರಾಜ್ಯಗಳು ಅಧಿಕಾರದ ವಿಕೇಂದ್ರೀಕರಣಕ್ಕೆ ಸಂಬಂಧಿಸಿದಂತೆ ಹೊಸ ಶಕೆಯನ್ನು ಆರಂಭಿಸಿದವು. ಅಶೋಕ್ ಮೆಹ್ತಾ ಸಮಿತಿ ವರದಿಯ ಆಧಾರದಮೇಲೆ ೧೯೮೩ರಲ್ಲಿ ಪಂಚಾಯತ್‌ರಾಜ್ ಕಾಯಿದೆಯನ್ನು ಜಾರಿಗೊಳಿಸಿ ಪಂಚಾಯತ್‌ರಾಜ್ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ೧೯೮೩ರಲ್ಲಿ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯಿತಿ ಸಮಿತಿ, ಮಂಡಲ ಪಂಚಾಯತ್ ಮತ್ತು ನ್ಯಾಯ ಪಂಚಾಯಿತಿ ಕಾಯಿದೆಯನ್ನು ಅನುಷ್ಠಾನಕ್ಕೆ ತರಲಾಯಿತು. ೧೯೮೭ರಲ್ಲಿ ಕರ್ನಾಟಕದಲ್ಲಿ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯಿತಿ ಸಮಿತಿ ಮತ್ತು ಮಂಡಲ ಪಂಚಾಯಿತಿಗಳ ಮೂರು ಹಂತದ ಪಂಚಾಯತ್‌ರಾಜ್ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು.

ಕರ್ನಾಟಕದ ಪಂಚಾಯತ್‌ರಾಜ್ ಕಾಯಿದೆಯಿಂದ ಪ್ರಭಾವಕ್ಕೊಳಗಾಗಿ ಕೇಂದ್ರ ಸರ್ಕಾರ ಇಡೀ ಭಾರತದಲ್ಲಿ ಒಂದೇ ರೀತಿಯ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಜಾರಿಗೆ ತರುವ ಉದ್ದೇಶದಿಂದ ಎಲ್. ಎಂ. ಸಿಂಘ್ವಿ ಅವರ ನೇತೃತ್ವದಲ್ಲಿ ಸಮಿತಿಯನ್ನು ನೇಮಿಸಿತು. ೧೯೮೬ರಲ್ಲಿ ಸಂಸತ್ತಿನಲ್ಲಿ ಮಸೂದೆಯನ್ನು ಮಂಡಿಸಲಾಯಿತು. ಆ ಮಸೂದೆ ಲೋಕಸಭೆಯಲ್ಲಿ ಅಂಗೀಕಾರವಾಗಿ ರಾಜ್ಯಸಭೆಯಲ್ಲಿ ತಿರಸ್ಕರಿಸಲ್ಪಟ್ಟಿತು. ೧೯೯೧ರಲ್ಲಿ ಈ ಮಸೂದೆಯನ್ನು ಸಂಸತ್ತಿನ ಉಭಯ ಸದನಗಳಿಂದ ರಚಿಸಿದ ಸಂಸತ್ ಸಮಿತಿಯು ಅಧ್ಯಯನ ನಡೆಸಿದ ನಂತರ ೧೯೯೨ರಲ್ಲಿ ಸಂಸತ್ತಿನಲ್ಲಿ ಮಂಡಿಸಲಾಯಿತು. ಸಂಸತ್ ಈ ಮಸೂದೆಗೆ ಒಪ್ಪಿಗೆ ಕೊಟ್ಟಿತು. ೧೯೯೩ರಲ್ಲಿ ಸಂವಿಧಾನದ ೭೩ನೇ ತಿದ್ದುಪಡಿಗೆ ಅವಕಾಶ ಕಲ್ಪಿಸಿಕೊಡಲಾಯಿತು. ಆಗ ಇಡೀ ದೇಶದಲ್ಲಿ ಒಂದೇ ರೀತಿಯ ಸ್ಥಳೀಯ ಸರ್ಕಾರಗಳು ಅಸ್ತಿತ್ವಕ್ಕೆ ಬಂದವು. ಈ ತಿದ್ದುಪಡಿಯಲ್ಲಿ ೩ ಹಂತದ ಪಂಚಾಯಿತಿಗಳಾದ

ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳು ಅಸ್ತಿತ್ವಕ್ಕೆ ಬಂದವು.

**ಜಿಲ್ಲಾ ಪಂಚಾಯಿತಿ :** ೪೦,೦೦೦ ಜನಸಂಖ್ಯೆಗೆ ಒಬ್ಬ ಜಿಲ್ಲಾ ಪಂಚಾಯಿತಿ ಸದಸ್ಯನಿರುತ್ತಾನೆ. ಮಲೆನಾಡು ಪ್ರದೇಶಗಳಲ್ಲಿ ಈ ಸಂಖ್ಯೆಯನ್ನು ಸಡಿಲಗೊಳಿಸಲಾಗಿದೆ. ಇದರಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರಿರುತ್ತಾರೆ. ಇವರ ಅಧಿಕಾರಾವಧಿ ೨೦ ತಿಂಗಳು. ಐ.ಎ.ಎಸ್. ದರ್ಜೆಯ ಅಧಿಕಾರಿಯೊಬ್ಬರು ಆಡಳಿತವನ್ನು ನೋಡಿಕೊಳ್ಳುತ್ತಾರೆ. ಇವರನ್ನು ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಎನ್ನಲಾಗಿದೆ. ಜಿಲ್ಲಾ ಪಂಚಾಯಿತಿಯಲ್ಲಿ ವಿವಿಧ ಸಮಿತಿಗಳಿದ್ದು, ಕೆಲಸ ನಿರ್ವಹಿಸುತ್ತವೆ.

ಜಿಲ್ಲಾ ಪಂಚಾಯಿತಿಗಳು : ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನೀಡುವ ಅನುದಾನಗಳ ಮೇಲೆ ಅವಲಂಬಿತವಾಗಿರುತ್ತವೆ. ಇವುಗಳು ಆದಾಯ ಪಡೆಯುವ ಇತರ ಮೂಲಗಳೆಂದರೆ ಶುಲ್ಕ, ದರಗಳು, ಕೊಡುಗೆಗಳು, ಬಾಡಿಗೆ, ಇತ್ಯಾದಿ. ಜಿಲ್ಲಾ ಪಂಚಾಯಿತಿಗಳು ಪ್ರಕರಣ ೨೧೬ರ ಪ್ರಕಾರ ಅಭಿವೃದ್ಧಿ ಯೋಜನೆಗಳಿಗೆ ಸಾಲವನ್ನು ಪಡೆದುಕೊಳ್ಳಬಹುದಾಗಿದೆ.

**ತಾಲ್ಲೂಕು ಪಂಚಾಯಿತಿ :** ಪ್ರತಿ ೧೦,೦೦೦ ಜನಸಂಖ್ಯೆಗೆ ಒಬ್ಬ ತಾಲ್ಲೂಕು ಪಂಚಾಯಿತಿ ಸದಸ್ಯನಿರುತ್ತಾನೆ. ಇದರಲ್ಲಿ ಅಧ್ಯಕ್ಷ/ಉಪಾಧ್ಯಕ್ಷರು ಚುನಾಯಿತ ಸದಸ್ಯರಿಂದ ಆಯ್ಕೆಯಾಗುತ್ತಾರೆ. ಅಧಿಕಾರಾವಧಿ ೨೦ ತಿಂಗಳು. ರಾಜ್ಯ ಸರ್ಕಾರದ ೧ನೇ ದರ್ಜೆ ಅಧಿಕಾರಿ ಇದರ ಕಾರ್ಯ ನಿರ್ವಾಹಕ ಅಧಿಕಾರಿಯಾಗಿರುತ್ತಾನೆ.

ತಾಲ್ಲೂಕು ಪಂಚಾಯಿತಿಗೆ ತೆರಿಗೆ ವಿಧಿಸುವ ಅಧಿಕಾರ ಇಲ್ಲ. ಇವು ರಾಜ್ಯದ ಮುದ್ರಾಂಕ ಶುಲ್ಕದ ಶೇಕಡ ೩ರಷ್ಟು ಪಾಲನ್ನು ಪಡೆಯುತ್ತವೆ. ಇವು ತಮ್ಮ ಸ್ವಂತ ಆಸ್ತಿಯಿಂದ ಆದಾಯ ವೃದ್ಧಿಸಿಕೊಳ್ಳಬಹುದು. ಜೊತೆಗೆ ರಾಜ್ಯ/ಕೇಂದ್ರ ಸರ್ಕಾರಗಳಿಂದ ಅನುದಾನ ಪಡೆಯುತ್ತವೆ. ಕೇಂದ್ರ ಹಣಕಾಸು ಆಯೋಗದಿಂದಲೂ ಅನುದಾನ ದೊರೆಯುತ್ತದೆ. ಪಂಚಾಯತ್ ಅಧಿನಿಯಮ ಪ್ರಕರಣ ೨೧೫ರ ಪ್ರಕಾರ ಅಭಿವೃದ್ಧಿ ಕಾರ್ಯಗಳಿಗೆ ಸಾಲ ಪಡೆಯಬಹುದು.

**ಗ್ರಾಮ ಪಂಚಾಯಿತಿ :** ಗ್ರಾಮ ಪಂಚಾಯಿತಿಯು ೫೦೦೦ದಿಂದ ೭೦೦೦ ಜನಸಂಖ್ಯೆಯನ್ನು ಹೊಂದಿರುತ್ತದೆ. ೪೦೦ ಜನರಿಗೆ ಒಬ್ಬ ಚುನಾಯಿತ ಪ್ರತಿನಿಧಿ ಇರುತ್ತಾನೆ. ಅಧ್ಯಕ್ಷ/ಉಪಾಧ್ಯಕ್ಷರನ್ನು ಚುನಾಯಿತ ಸದಸ್ಯರು ಆಯ್ಕೆ ಮಾಡುತ್ತಾರೆ. ಇವರ ಅಧಿಕಾರಾವಧಿ ೨೦ ತಿಂಗಳುಗಳು. ಕಾರ್ಯದರ್ಶಿ ಸರ್ಕಾರದಿಂದ ನೇಮಕಗೊಂಡಿದ್ದು, ಗ್ರಾಮ ಪಂಚಾಯಿತಿ ಆಡಳಿತವನ್ನು ನೋಡಿಕೊಳ್ಳುತ್ತಿರುತ್ತಾನೆ.

ಗ್ರಾಮ ಪಂಚಾಯಿತಿಗಳಿಗೆ ತೆರಿಗೆ ವಿಧಿಸಿ ವರಮಾನ ಸಂಗ್ರಹಿಸುವ ಅಧಿಕಾರ ನೀಡಲಾಗಿದೆ. ಮನೆ ಕಂದಾಯ, ನೀರಿನ ಕಂದಾಯ, ಮನೋರಂಜನೆ (ಸಿನಿಮಾ ಹೊರತುಪಡಿಸಿ), ಮಾರುಕಟ್ಟೆ, ಬಸ್ ನಿಲ್ದಾಣ ಶುಲ್ಕ ಹಾಗೂ ಅಂಗಡಿಗಳಿಂದ ಬಾಡಿಗೆ, ಹರಾಜು, ಸ್ವಂತ ಆಸ್ತಿ ಮಾರಾಟ, ಕೊಡುಗೆಗಳು ಮುಂತಾದ ಮೂಲಗಳಿಂದ ತೆರಿಗೆಯೇತರ ಆದಾಯವನ್ನು ಪಡೆಯಲಾಗುತ್ತದೆ. ಜೊತೆಗೆ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಅನುದಾನ ನೀಡುತ್ತವೆ. ಹಣಕಾಸು ಆಯೋಗವೂ ಅನುದಾನ ನೀಡುತ್ತದೆ. ಕರ್ನಾಟಕದ ಪಂಚಾಯತ್‌ರಾಜ್ ಅಧಿನಿಯಮ ಪ್ರಕರಣ ೨೧೪ರ ಪ್ರಕಾರ ಸಾಲವನ್ನು ಅಭಿವೃದ್ಧಿ ಉದ್ದೇಶಗಳಿಗೆ ಎತ್ತಬಹುದಾಗಿದೆ.

**ಗ್ರಾಮಸಭೆ :** ಪ್ರತಿ ಆರು ತಿಂಗಳಿಗೊಮ್ಮೆ ಗ್ರಾಮ ಪಂಚಾಯಿತಿಗಳು ಗ್ರಾಮಸಭೆ ನಡೆಸಬೇಕು. ಅಲ್ಲಿ ಫಲಾನುಭವಿಗಳನ್ನು ಗುರ್ತಿಸಬೇಕು. ಕೊಡುಗೆ ಸಂಗ್ರಹಣೆ, ಅಭಿವೃದ್ಧಿ ಕಾರ್ಯಗಳ ಬಗ್ಗೆ ಚರ್ಚೆ ನಡೆಯಬೇಕು. ಗ್ರಾಮ ಪಂಚಾಯಿತಿ ಅಧ್ಯಕ್ಷರು ಗ್ರಾಮಸಭೆಯ ಅಧ್ಯಕ್ಷತೆ ವಹಿಸಬೇಕು.

**ಜಮಾಬಂದಿ :** ಗ್ರಾಮ ಪಂಚಾಯಿತಿಯು ಮಾಡಿದ ಕಾರ್ಯಗಳ ವೆಚ್ಚಕ್ಕೆ ಸಾಮಾಜಿಕ ಲೆಕ್ಕಪತ್ರ ತಪಾಸಣೆ ಮಾಡುವುದೇ ಜಮಾಬಂದಿಯಾಗಿದೆ. ಪ್ರತಿವರ್ಷ ಆಗಸ್ಟ್ ೧೫ರಿಂದ ಸೆಪ್ಟೆಂಬರ್ ೧೫ರೊಳಗೆ ಜಮಾಬಂದಿಯನ್ನು ನಡೆಸುವ ಅವಧಿಯನ್ನು ನಿಗದಿಪಡಿಸಲಾಗಿದೆ. ವರ್ಷಕ್ಕೆ ಒಂದು ಸಾರಿ ಜಮಾಬಂದಿ ಮಾಡಲಾಗುತ್ತದೆ. ಗ್ರಾಮ ಪಂಚಾಯಿತಿ ಚುನಾಯಿತ ಪ್ರತಿನಿಧಿಗಳು ಮತ್ತು ಜನರು ಒಂದು ಕಡೆ ಸೇರಿ ಚರ್ಚಿಸಲು ಇದು ಉತ್ತಮ ವೇದಿಕೆಯಾಗಿದೆ.

**ರಾಜ್ಯ ಹಣಕಾಸು ಆಯೋಗಗಳು ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳು :** ಭಾರತ ಸಂವಿಧಾನದ ೭೩ನೇ ತಿದ್ದುಪಡಿಯಲ್ಲಿ ರಾಜ್ಯ ಹಣಕಾಸು ಆಯೋಗದ ಸ್ಥಾಪನೆಗೆ ಅವಕಾಶ ಕಲ್ಪಿಸಿಕೊಡಲಾಗಿದೆ. ರಾಜ್ಯ ಸರ್ಕಾರಗಳು ಪ್ರತಿ ೫ ವರ್ಷಕ್ಕೆ ಒಮ್ಮೆ ರಾಜ್ಯ ಹಣಕಾಸು ಆಯೋಗವನ್ನು ನೇಮಿಸುವುದು ಕಡ್ಡಾಯವಾಗಿದೆ. ರಾಜ್ಯ ಮತ್ತು ಸ್ಥಳೀಯ ಸಂಸ್ಥೆಗಳ ನಡುವೆ ಹಣಕಾಸು ನಿರ್ವಹಣೆಗೆ ರಾಜ್ಯ ಹಣಕಾಸು ಆಯೋಗಗಳನ್ನು ರಚಿಸಲಾಯಿತು. ಕರ್ನಾಟಕ ಸರ್ಕಾರವು ೧೯೯೫ರಲ್ಲಿ ಡಾ|| ಜಿ. ತಿಮ್ಮಯ್ಯನವರ ಅಧ್ಯಕ್ಷತೆಯಲ್ಲಿ ಪ್ರಥಮ ರಾಜ್ಯ ಹಣಕಾಸು ಆಯೋಗವನ್ನು, ೨೦೦೨ರಲ್ಲಿ ಕೆ. ಪಿ. ಸುರೇಂದ್ರನಾಥ್ ಇವರ ಅಧ್ಯಕ್ಷತೆಯಲ್ಲಿ ೨ನೇ ರಾಜ್ಯ ಹಣಕಾಸು ಆಯೋಗವನ್ನು, ೨೦೦೬ರಲ್ಲಿ ಎ. ಜಿ. ಕೋಡ್ಗಿ ಅವರ ನೇತೃತ್ವದಲ್ಲಿ ೩ನೇ ರಾಜ್ಯ ಹಣಕಾಸು ಆಯೋಗವನ್ನು ರಚನೆ ಮಾಡಿತು. ಈ ಮೂರು ಆಯೋಗಗಳು ತಮ್ಮ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿವೆ. ೩ನೇ ರಾಜ್ಯ ಹಣಕಾಸು ಆಯೋಗವು ಇತ್ತೀಚೆಗೆ ತನ್ನ ವರದಿ ನೀಡಿದ್ದು, ಕೆಲವು ಪ್ರಮುಖ ಶಿಫಾರಸ್ಸುಗಳನ್ನು ಮಾಡಿದೆ. ಜನಸಂಖ್ಯೆ ಆಧಾರದ ಮೇಲೆ ಗ್ರಾಮ ಪಂಚಾಯಿತಿಗಳನ್ನು ಮೂರು ವರ್ಗಗಳಾಗಿ ವಿಂಗಡಿಸಲಾಗಿದೆ. ೪೦೦೦ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮ ಪಂಚಾಯಿತಿಗಳಿಗೆ ವಾರ್ಷಿಕ ೯ ಲಕ್ಷ, ೮೦೦೦ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಗ್ರಾಮ ಪಂಚಾಯಿತಿಗಳಿಗೆ ೧೨ ಲಕ್ಷ, ೮೦೦೦ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಗ್ರಾಮ ಪಂಚಾಯಿತಿಗಳಿಗೆ ೧೫ ಲಕ್ಷ ಅನುದಾನ ನೀಡಲು ಶಿಫಾರಸ್ಸು ಮಾಡಿದೆ.

ಗ್ರಾಮ ಪಂಚಾಯಿತಿಗಳಿಗೆ ವಾರ್ಷಿಕ ರೂ. ೧ ಲಕ್ಷದಿಂದ ೩ ಲಕ್ಷಗಳವರೆಗೆ ಹೆಚ್ಚುವರಿ ಅನುದಾನ ನೀಡಲಾಗುವುದು; ಹಿಂದುಳಿದ ತಾಲ್ಲೂಕುಗಳಲ್ಲಿರುವ ಎಲ್ಲಾ ಗ್ರಾಮ ಪಂಚಾಯಿತಿಗಳಿಗೆ ಪ್ರತಿವರ್ಷ ಪ್ರತಿ ಗ್ರಾಮ ಪಂಚಾಯಿತಿಗೆ ೧ ಲಕ್ಷ, ಹೆಚ್ಚು ಹಿಂದುಳಿದ ಗ್ರಾಮ ಪಂಚಾಯಿತಿಗೆ ೨ ಲಕ್ಷ, ಅತ್ಯಂತ ಹಿಂದುಳಿದ ಗ್ರಾಮ ಪಂಚಾಯಿತಿಗೆ ೩ ಲಕ್ಷ ಹೆಚ್ಚುವರಿ ಅನುದಾನ ನೀಡಲು ಆಯೋಗ ಶಿಫಾರಸ್ಸು ಮಾಡಿದೆ.

ಗ್ರಾಮ ಪಂಚಾಯಿತಿಗಳ ತೆರಿಗೆ ವಸೂಲಾತಿಯಲ್ಲಿ ಮತ್ತು ಇತರೆ ಕಾರ್ಯಕ್ರಮಗಳಲ್ಲಿ ಸಾಧಿಸಿದ ಪ್ರಗತಿ ಆಧರಿಸಿ ವಾರ್ಷಿಕ ೩ ಲಕ್ಷ ಪ್ರೋತ್ಸಾಹ ನಿಧಿ ನೀಡಲಾಗುವುದು. ಓಂಬುಡ್ಸ್‌ಮನ್‌ಅನ್ನು ನೇಮಿಸುವುದು, ಪಂಚಾಯಿತಿಗಳಿಗೆ ಪ್ರತ್ಯೇಕ ವೃಂದ ಮತ್ತು ನೇಮಕಾತಿ ಸ್ಥಾಪಿಸುವುದು. ಮೂರು ಹಂತದ ಪಂಚಾಯಿತಿಗಳ ಅಧ್ಯಕ್ಷ/ಉಪಾಧ್ಯಕ್ಷರ ಅಧಿಕಾರಾವಧಿಯನ್ನು ೫ ವರ್ಷಕ್ಕೆ ಹೆಚ್ಚಿಸುವುದು, ಆರು ತಿಂಗಳಿಗೊಮ್ಮೆ ಗ್ರಾಮಸಭೆ ನಡೆಯುವುದನ್ನು ಕಡ್ಡಾಯಗೊಳಿಸಿ ಸಭೆ ನಡೆದ ಬಗ್ಗೆ ವೀಡಿಯೋ ಚಿತ್ರೀಕರಣ ಮಾಡುವುದು, ತೆರಿಗೆ ವಸೂಲಿ ಕುಂಠಿತಕ್ಕೆ ಗ್ರಾಮ ಪಂಚಾಯಿತಿ ಅಧ್ಯಕ್ಷ/ಕಾರ್ಯದರ್ಶಿಗಳನ್ನು ಹೊಣೆಗಾರರನ್ನಾಗಿ ಮಾಡುವುದು, ಇತ್ಯಾದಿ ರಾಜ್ಯ ಹಣಕಾಸು ಆಯೋಗದ ಶಿಫಾರಸ್ಸುಗಳನ್ನು ರಾಜ್ಯ ಸರ್ಕಾರ ಹಂತ ಹಂತವಾಗಿ ಜಾರಿಗೊಳಿಸುವ ಅಗತ್ಯವಿದೆ.

**ಇತ್ತೀಚಿನ ಬೆಳವಣಿಗೆ :** ಈ ಹಿಂದೆ ಕರ್ನಾಟಕದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ವಾರ್ಷಿಕ ರೂ. ೬ ಲಕ್ಷ ಅನುದಾನವನ್ನು ರಾಜ್ಯ ಸರ್ಕಾರ ನೀಡುತ್ತಿತ್ತು. ೨೦೧೦ನೇ ಸಾಲಿನಿಂದ ೫೦೦೦ ಜನಸಂಖ್ಯೆ ಇರುವ ಗ್ರಾಮ ಪಂಚಾಯಿತಿಗೆ ರೂ. ೮ ಲಕ್ಷ, ೧೦ ಸಾವಿರ ಜನಸಂಖ್ಯೆ ಇರುವ ಗ್ರಾಮ ಪಂಚಾಯಿತಿಗೆ ೧೦ ಲಕ್ಷ, ೧೦ ಸಾವಿರಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಗ್ರಾಮ ಪಂಚಾಯಿತಿಗೆ ೧೨ ಲಕ್ಷ ಅನುದಾನವನ್ನು ನೀಡಬೇಕೆಂದು ರಾಜ್ಯ ಸರ್ಕಾರ ಪ್ರಕಟಿಸಿದೆ (ಪ್ರಜಾವಾಣಿ : ೨೩-೦೭-೨೦೧೦). ೨೦೧೦ನೇ ವರ್ಷದಲ್ಲಿ ರಾಜ್ಯದಲ್ಲಿ ಒಟ್ಟು ೫೩೨೮ ಗ್ರಾಮ ಪಂಚಾಯಿತಿಗಳು ಈ ಸೌಲಭ್ಯವನ್ನು ಪಡೆಯಲಿವೆ.

ಜಿಲ್ಲೆಗೆ ಒಬ್ಬರು ಓಂಬುಡ್ಸ್‌ಮನ್‌ಅನ್ನು ನೇಮಿಸುವ ತೀರ್ಮಾನವನ್ನು ರಾಜ್ಯ ಸರ್ಕಾರ ತೆಗೆದುಕೊಂಡಿದೆ. ೨೦೦೯-೧೦ನೇ ಸಾಲಿನ ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ೨೫೬೯.೨೦ ಕೋಟಿ ರೂ.ಗಳನ್ನು ಲೆಕ್ಕ ಮಾಡಲಾಗಿದ್ದು, ೨೦೧೦-೧೧ನೇ ವರ್ಷಕ್ಕೆ ೪೮೦೦ ಕೋಟಿ ರೂ.ಗಳನ್ನು ಈ ಕಾರ್ಯಕ್ರಮಕ್ಕೆ ಕೇಂದ್ರ ನೀಡುವ ನಿರೀಕ್ಷೆ ಇದೆ. ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಸಮರ್ಪಕವಾಗಿ ಕೆಲಸ ನಿರ್ವಹಿಸಿದರೆ ಜನತೆಗೆ ಉದ್ಯೋಗ ಭದ್ರತೆ ಲಭಿಸಿ ಅವರು ಉತ್ತಮ ಜೀವನ ನಡೆಸಬಹುದಾಗಿದೆ.

ಜಿಲ್ಲಾ ಪಂಚಾಯಿತಿ, ತಾಲ್ಲೂಕು ಮತ್ತು ಗ್ರಾಮ ಪಂಚಾಯಿತಿಗಳು ಸಂವಿಧಾನಾತ್ಮಕವಾಗಿ ದೊರೆತಿರುವ ಅಧಿಕಾರಗಳನ್ನು ಬಳಸಿಕೊಂಡು ಕಾರ್ಯ ನಿರ್ವಹಿಸಿದಾಗ ಗಾಂಧೀಜಿ ಕಂಡ ಗ್ರಾಮರಾಜ್ಯದ ಕನಸು ನನಸಾದೀತು. ಇದರ ಜೊತೆಗೆ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಜನರ ಭಾಗವಹಿಸುವಿಕೆ ಬಹಳ ಪ್ರಮುಖವಾದುದು. ಗ್ರಾಮ ಪಂಚಾಯಿತಿಗಳು ದೇಶದ ಏಳಿಗೆಯಲ್ಲಿ ಪ್ರಮುಖ ಪಾತ್ರ ವಹಿಸುವಂತಾಗಿ ತಳಮಟ್ಟದಿಂದ ಪ್ರಜಾಪ್ರಭುತ್ವ ಗಟ್ಟಿಯಾಗಿ ನಿಲ್ಲುವಂತಾಗಬೇಕು. ಭಾರತದಂತಹ ಆರ್ಥಿಕತೆಯಲ್ಲಿ ಗ್ರಾಮೀಣಾಭಿವೃದ್ಧಿಯು ಎಲ್ಲಾ ಪಂಚವಾರ್ಷಿಕ ಯೋಜನೆಗಳ ಉದ್ದೇಶವಾಗಿದೆ. ಅಭಿವೃದ್ಧಿಯಲ್ಲಿ ಗ್ರಾಮೀಣ ಜನರು ಪಾಲ್ಗೊಳ್ಳುವಂತೆ ಮಾಡುವಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ಪ್ರಮುಖ ಪಾತ್ರ ವಹಿಸಬೇಕಿದೆ.

**ಕೆ. ಆರ್. ಭೋಗೇಶ್ವರಪ್ಪ**
ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನ್ಯಾಮತಿ
ದಾವಣಗೆರೆ ಜಿಲ್ಲೆ

# ಕವಿ, ಗವಯಿ, ಸಂತ, ಪಂಡಿತ
# ಡಾ|| ಪುಟ್ಟರಾಜ ಗವಯಿ (೧೯೧೪-೨೦೧೦)

ವಿಶ್ವದ ಕೆಲವು ರಾಷ್ಟ್ರಗಳಲ್ಲಿ ಇವು ಇನ್ನೂ ಸಂಸ್ಕೃತಿ-ಸಮಾಜ-ಭಾಷೆ, ರಾಜ್ಯಾಂಗ, ನ್ಯಾಯಾಂಗ ವಿಕಸನದ ಹಾದಿಯಲ್ಲಿವೆ. ಇನ್ನು ಸಾಹಿತ್ಯ, ಸಂಗೀತ, ಕಲೆಯ ಮೂಲಕ ಜೀವನದ ಮೌಲ್ಯ, ಸಾರ್ಥಕತೆ, ಅಲ್ಲಿನ ಜನರಿಗೆಲ್ಲ ಊಹಿಸಲಾಗದ ಮಾತು. ಹೀಗಿರುವಾಗ ಕರ್ನಾಟಕ ಹಾಗೂ ಹಿಂದೂಸ್ತಾನಿ ಎಂಬ ಎರಡು ಸುಂದರ-ಸಮೃದ್ಧ ಸಂಗೀತ ಪದ್ಧತಿಗಳು ಹಲವಾರು ಶತಮಾನಗಳಿಂದ ಬೆಳೆದು ಬಂದಿರುವುದು ಭಾರತೀಯ ಸಂಸ್ಕೃತಿಯ ಪರಾಕಾಷ್ಠೆಯ ಸಂಕೇತ. ಹಾಗೆಯೇ ಈ ಎರಡೂ ಪದ್ಧತಿಗಳನ್ನು ಉಳಿಸಿ-ಬೆಳೆಸಿ-ಪೋಷಿಸಿ ಐತಿಹಾಸಿಕವಾಗಿ ವಿಶೇಷ ಸ್ಥಾನವನ್ನು ಗಳಿಸಿರುವ ಏಕಮಾತ್ರ ರಾಜ್ಯ ನಮ್ಮ ಹೆಮ್ಮೆಯ ಕರ್ನಾಟಕ. ಮೈಸೂರರಸರ ಪ್ರೋತ್ಸಾಹದಿಂದ



ಎರಡೂ ಪದ್ಧತಿಗಳು ವಿಪುಲವಾಗಿ ಬೆಳೆದುಬಂದವು. ವೀಣೆ ಶೇಷಣ್ಣ, ಸುಬ್ಬಣ್ಣ, ವಾಸುದೇವಾಚಾರ್ಯ, ದೊರೆಸ್ವಾಮಿ ಅಯ್ಯಂಗಾರ್, ಆರ್. ಕೆ. ಶ್ರೀಕಂಠನ್‌ರಂಥ ದಿಗ್ಗಜರು ಕರ್ನಾಟಕ ಪದ್ಧತಿಗೆ ಸಂಕೇತವಾದರು. ನೀಲಕಂಠ ಬುವಾ, ಮೀರಜಕರ್, ಪಂ|| ಸವಾಯಿ ಗಂಧರ್ವ, ಪಂ|| ಪಂಚಾಕ್ಷರ ಗವಯಿ, ಮಲ್ಲಿಕಾರ್ಜುನ ಮನ್ಸೂರ್, ಗಂಗೂಬಾಯಿ ಹಾನಗಲ್, ಪುಟ್ಟರಾಜ ಗವಯಿ, ಭೀಮಸೇನ ಜೋಶಿ, ಕುಮಾರ ಗಂಧರ್ವ – ಇವರೆಲ್ಲಾ ಹಿಂದೂಸ್ತಾನಿ ಸಂಗೀತದ ಧ್ರುವತಾರೆಗಳಾದರು.

ಈ ಮೇಲೆ ಉಲ್ಲೇಖಿಸಿದ ಪ್ರತಿಯೊಬ್ಬರೂ, ತಮ್ಮದೇ ಶೈಲಿ ಹಾಗೂ ಸಾಮರ್ಥ್ಯದಿಂದ ಒಂದು ಶಕ್ತಿ ಹಾಗೂ ಸಂಸ್ಥೆಯ ಮಟ್ಟಕ್ಕೆ ಬೆಳೆದವರು. ಆದರೆ ಪಂಚಾಕ್ಷರ ಗವಯಿ ಹಾಗೂ ಅವರ ಪ್ರೀತಿಯ ಶಿಷ್ಯ ಪುಟ್ಟರಾಜ ಗವಯಿಯವರು ಅಕ್ಷರಶಃ ಒಂದು ಬೃಹತ್ ಸಂಸ್ಥೆಯನ್ನು ಕಟ್ಟಿ, ಬೆಳೆಸಿ, ಪರಂಪರೆಯನ್ನು ಮುಂದುವರಿಸಿ ಹಲವಾರು ಅಶಕ್ತ, ಅನಾಥ ಮಕ್ಕಳಿಗೆ ದಾರಿದೀಪವಾದವರು.

ಹಾನಗಲ್ ಕುಮಾರಸ್ವಾಮಿಗಳ ದೂರದೃಷ್ಟಿ, ಪಂಚಾಕ್ಷರ ಗವಯಿಗಳ ದಿವ್ಯದೃಷ್ಟಿ, ಪುಟ್ಟರಾಜ ಗವಯಿಗಳ ನೇರದೃಷ್ಟಿಯಿಂದ ಗದುಗಿನ ವೀರೇಶ್ವರ ಪುಣ್ಯಾಶ್ರಮ, ಯಾವುದೇ ಸರ್ಕಾರ, ವಿಶ್ವಸಂಸ್ಥೆ, ವಿಶ್ವವಿದ್ಯಾಲಯಗಳೂ ಸಾಧಿಸಿದಂತಹ ಕೆಲಸವನ್ನು ಸಾಧಿಸಿದೆ. ಮಹಾನ್ ಕಲಾವಿದರು ರಾಷ್ಟ್ರೀಯ-ಅಂತರರಾಷ್ಟ್ರೀಯ ಮಟ್ಟದಲ್ಲಿ ಕಲೆಯ ಪ್ರಚಾರ ಮಾಡಿದರೆ, ಇಂದು ಹಳ್ಳಿಹಳ್ಳಿ – ಮೂಲೆ ಮೂಲೆಗಳಲ್ಲಿ ಒಬ್ಬ ಸಂಗೀತದ ಮೇಷ್ಟ್ರು ಸಿಗುವುದಾದರೆ, ಅವರು ಖಡಾಖಂಡಿತವಾಗಿ 'ಅಜ್ಜಾ' ಅವರ ಆಶ್ರಮದಲ್ಲೇ ಕಲಿತದ್ದು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಆರು ದಶಕಗಳಾಗಿವೆ. ಆದರೆ ಇಂದಿಗೂ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಹಿಂದೂಸ್ತಾನಿ ಸಂಗೀತ ಹಾಗೂ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಕರ್ನಾಟಕ ಸಂಗೀತದ ಬೋಧನೆ, ಕಲಿಕೆಗೆ ಅವಕಾಶವಿಲ್ಲ ಎನ್ನುವುದು ವಿಪರ್ಯಾಸ. ತಾಳೀಕೋಟೆಯ ಸಂಗೀತ ಶಾಲೆ ಸ್ಥಾಪಿಸಿದ ಪ್ರಭುದೇವ ಸಾಲಿಮಠ, ಗುಲ್ಬರ್ಗಾದ ಕಾಲೇಜಿನಲ್ಲಿ ಇದ್ದ ಸಿದ್ಧರಾಮ ಜಂಬಲದಿನ್ನಿ, ಹೊಸಪೇಟೆಯಲ್ಲಿದ್ದ ಬಸವರಾಜ ಅಮರಗೋಳಕರ, ತಬಲಾದ ಪಂ|| ಎಮ್. ನಾಗೇಶ್, ಶಿವಮೊಗ್ಗೆಯ ವೇಣುಗೋಪಾಲ್, ಹುಮಾಯೂನ್ ಹರ್ಲಾಪುರ್, ಆಕಾಶವಾಣಿ ಭೋಪಾಲದ, ಮಧ್ಯಪ್ರದೇಶದ ಸಿದ್ಧರಾಮ ಸ್ವಾಮಿ ಕೋರವಾರ ಆಕಾಶವಾಣಿ ಬರೋಡಾ, ಗೋವಾದ ನಿಲಯದ ಕಲಾವಿದರಾಗಿದ್ದ ಬಸವರಾಜ ಗೋನ್ಸಾಳ್, ಬಿ. ಎಸ್. ಮಠ, ಇವರೆಲ್ಲಾ ಆಶ್ರಮದಲ್ಲಿ ಉಂಡುಟ್ಟು, ಸಂಗೀತ ಕಲಿತು ಬೆಳೆದುಬಂದವರು.

ಗದುಗಿನ ಸುತ್ತಮುತ್ತಲಿನ ಅಶಕ್ತ ಕುಟುಂಬದ ಮಕ್ಕಳು, ಅನಾಥ ಮಕ್ಕಳು, ಅಂಗವಿಕಲ ಮಕ್ಕಳು, ಬ್ರಾಹ್ಮಣರಾದ ಕಂಪ್ಲಿ ಹನುಮಂತಾಚಾರಿ, ಜಂಗಮರಾದ ಬಸವರಾಜ ರಾಜಗುರು, ಪಂಚಾಕ್ಷರ ಮತ್ತೀಗಟ್ಟಿ ಇವರೆಲ್ಲಾ ಕಲಿತದ್ದು ವೀರೇಶ್ವರ ಪುಣ್ಯಾಶ್ರಮದಲ್ಲೇ. ಹೀಗೆ ನಿಜವಾದ ಜಾತ್ಯತೀತ ಪುಣ್ಯಾಶ್ರಮ, ವಿದ್ಯಾಶ್ರಮ, ಸಂಗೀತಾಶ್ರಮ, ನಮ್ಮ ಪಂಚಾಕ್ಷರ, ಪುಟ್ಟರಾಜ ಗವಯಿಗಳ ವೀರೇಶ್ವರ ಪುಣ್ಯಾಶ್ರಮ. ನಮ್ಮಲ್ಲಿ ಬೂಟಾಟಿಕೆಯ, ಸೋಗಿನ ಜಾತ್ಯತೀತ ರಾಜಕೀಯ ಪಕ್ಷಗಳು, ಇವುಗಳಿಂದ ರಚಿತವಾದ ಸರ್ಕಾರ, ಸರ್ಕಾರದಿಂದ ನಡೆಸಲ್ಪಡುವ ವಿದ್ಯಾಸಂಸ್ಥೆಗಳಲ್ಲಿ, ಅವುಗಳ ಗ್ರಂಥಭಂಡಾರದಲ್ಲಿ ಕೆಲವು ಅಪರೂಪದ ಪುಸ್ತಕಗಳನ್ನು ಕೆಲವರ್ಗದ ವಿದ್ಯಾರ್ಥಿಗಳಿಗೆ ಮೀಸಲಾಗಿ ಇಟ್ಟು ಕಾಯ್ದಿರಿಸುವ ಪದ್ಧತಿಯಿತ್ತು. ನಾನು ಸಂಶೋಧನೆ ಮಾಡುವಾಗ ನನ್ನ ಅನುಭವಕ್ಕೆ ಬಂದ ಮಾತಿದು. ಆದರೆ ವೀರೇಶ್ವರ ವಿದ್ಯಾಶ್ರಮದ ಜ್ಞಾನದಾಸೋಹದಲ್ಲಿ ಯಾವುದೇ ಮೀಸಲಾತಿಯಿಲ್ಲ, ಎಲ್ಲರಿಗೂ ಒಂದೇ ಊಟ, ಒಂದೇ ಬಂದಿಷ್, ಅದೇ ರಾಗ, ಅದೇ ಹೃದಯವೈಶಾಲ್ಯ.

ಅಕ್ಷರಶಃ ಸಾವಿರಾರು ವಿದ್ಯಾರ್ಥಿಗಳನ್ನು ನೂರಾರು ಕಲಾವಿದರನ್ನು ತಯಾರುಮಾಡಿದ ವೀರೇಶ್ವರ ಪುಣ್ಯಾಶ್ರಮದ ನೊಗ ಹೊತ್ತ ಪುಟ್ಟರಾಜರು, ಈ ದೊಡ್ಡ ಭಾರವನ್ನು ೧೯೪೪ರಿಂದ ೨೦೧೦ರವರೆಗೆ ನಿಭಾಯಿಸಿದರು. ಪುರಾಣ-ಪ್ರವಚನ ನಡೆಸಿ ಆಶ್ರಮಕ್ಕೆ ಧನ ಸಂಗ್ರಹಿಸಿದರು. ಅವರ ಹಾಸ್ಯಪ್ರಜ್ಞೆಯ ಮೊನಚು ನೇರವಾಗಿ ಹೃದಯಕ್ಕೇ ನಾಟುತ್ತಿತ್ತು. ಅಸಂಖ್ಯಾತ ಗೌರವ, ಪ್ರಶಸ್ತಿಗಳು ಅವರನ್ನು ಅರಸಿದವು, ಅವಲಂಬಿಸಿದವು. ಈ ಮಧ್ಯೆ ಹೊಸ ಪ್ರಶಸ್ತಿಯ ಪ್ರಸ್ತಾಪ ಬಂದರೆ, ''ಇದಕ್ಕೇನಾದರೂ ದುಡ್ಡು ಕೊಡತಾರೇನ್ರೀ ?... ನಮ್ಮ ಆಶ್ರಮದ ಹುಡುಗರಿಗೆ ಸಹಾಯ ಆಗ್ತೈತಿ'' ಅಂತಿದ್ರು. ಈ ಪ್ರವಾಸ, ಪ್ರವಚನ, ಸಂಗೀತ ಕಲಿಸುವಿಕೆ, ಸಾಹಿತ್ಯ-ಕಾವ್ಯರಚನೆಯ ಮಧ್ಯೆ, ಆಶ್ರಮಕ್ಕೆ ಬೇಕಾದ ಸವಲತ್ತು - ಹಣ ಸಂಗ್ರಹಿಸಲು, ಗವಯಿಗಳು ಹಾಗೂ ಸಾರ್ವಜನಿಕರು ಕಂಡುಕೊಂಡ ಇನ್ನೊಂದು ಮಾರ್ಗವೆಂದರೆ 'ತುಲಾಭಾರ'. ತಮ್ಮ ಭಕ್ತಿ-ಪ್ರೀತಿಯನ್ನು ತೋರಿಸಲು, ಭಕ್ತಾದಿಗಳು 'ಪುಟ್ಟರಾಜ'ರ ದೈಹಿಕ ತೂಕದಷ್ಟು (ಅವರ ಸಂಗೀತ, ಭಾಷೆ, ಜ್ಞಾನದ ತೂಕ ಅಳೆಯುವ ಮಾಪನ ಯಂತ್ರ ಇನ್ನೂ ತಯಾರಾಗಿಲ್ಲ?) ಅಕ್ಕಿ-ಬೇಳೆ-ಬೆಲ್ಲ, ಕೆಲವೊಮ್ಮೆ ನಾಣ್ಯಗಳನ್ನು ಕೊಡುತ್ತಿದ್ರು. ಕೆಲ ವರ್ಷದ ಕೆಳಗೆ, ಅವರ ತೂಕದಷ್ಟು ನಾಣ್ಯಗಳನ್ನು ಕೊಟ್ಟರೆ ಅದರ ಒಟ್ಟು ಮೊತ್ತ ಕೇವಲ ೧೫ ಸಾವಿರ ರೂಪಾಯಿ ಆಗಿತ್ತು. ಆದರೂ ಆಶ್ರಮದ ಅನಾಥ ಮಕ್ಕಳ ಸಲುವಾಗಿ ಸಾಕಷ್ಟು ದೂರ ಪ್ರಯಾಣ ಮಾಡಿ, ಅನಾಮತ್ತಾಗಿ ತಕ್ಕಡಿಯ ಒಂದು ಭಾಗದಲ್ಲಿ ಕೂತು, ದೈಹಿಕ ಶ್ರಮವನ್ನು ಸಹಿಸಿಕೊಂಡು ಆಶ್ರಮದಲ್ಲಿನ ಅನಾಥ ಮಕ್ಕಳ ಬದುಕು ಹಸನ ಮಾಡಲಿಕ್ಕೆ ಪ್ರಯತ್ನಿಸುತ್ತಿದ್ರು.

ಕನ್ನಡದಲ್ಲಿ ಬಂದಿಷ್‌ಗಳ ರಚನೆ. ಸಂಸ್ಕೃತ-ಹಿಂದಿಯಲ್ಲಿ ಕಾವ್ಯ ರಚನೆ, ಹಲವಾರು ವಾದ್ಯಗಳ ನುಡಿಕಾಣಿಕೆಯಲ್ಲಿ ಪ್ರಭುತ್ವ, ಒಂದೇ-ಎರಡೇ... ವೆಂಕಟೇಶಕುಮಾರ್, ಕುಮಾರದಾಸ್ ಮುಂತಾದ ಹಲವಾರು ರಾಷ್ಟ್ರೀಯ ಮಟ್ಟದ ಕಲಾವಿದರನ್ನು ಸೃಷ್ಟಿಸಿದ-ದಿವ್ಯದೃಷ್ಟಿ 'ಪುಟ್ಟಜ್ಜ' ಅವರಾಗಿದ್ರು. ಗದುಗಿನಲ್ಲಿ ಇತ್ತೀಚೆಗೆ ಜರುಗಿದ ದೈಹಿಕ ಅಂತಿಮಯಾತ್ರೆಯಲ್ಲಿ ಇಡೀ ಊರೇ ಭಾಗಿಯಾಗಿತ್ತು. ಗೌರವ ಸೂಚಕವಾಗಿ ಹೋಟೆಲ್-ಅಂಗಡಿಗಳೂ ಮುಚ್ಚಿದ್ದವು. ಆದರೆ ಗವಯಿಗಳ ಅಂತಿಮ ದರ್ಶನಕ್ಕೆ

**ಪಂ|| ನಾಗರಾಜರಾವ್ ಹವಲ್ದಾರ್**

ಬೇರೆ ಬೇರೆ ಊರುಗಳಿಂದ ಬಂದವರಿಗೆ, ಸಾರ್ವಜನಿಕರ ಮನೆ ಬಾಗಿಲುಗಳು ತೆಗೆದಿದ್ದವು. ಆಶ್ರಮದ ಶಿಷ್ಯ ಹನುಮಂತ ಹೂಗಾರ ಹೇಳಿದ್ರು. ''ಬಂದವರಿಗೆಲ್ಲ ಉಪ್ಪಿಟ್ಟು ಶಿರಾ... ನೂರು ಅಡಿಗೊಂದು ಟೆಂಟ್ ಹಾಕಿದ್ರು'' ಅಂದಾಗ ಅವರ ದನಿ ಉಮ್ಮಳಿಸಿತ್ತು. ''ಬಸ್‌ಸ್ಟ್ಯಾಂಡಿನಿಂದ ಆಶ್ರಮಕ್ಕೆ ಹೋದರೆ ಆಟೋದವನು ದುಡ್ಡು ಇಸಗೊಳ್ಳಲಿಲ್ಲ'' ಅಂದ್ರು ತಬಲ ವಾದಕ ಪಂ॥ ನಾಗೇಶ್. ಅಧಿಕಾರದಲ್ಲಿದ್ದಾಗ ಆಶ್ರಮಕ್ಕೆ ಭೇಟಿ ನೀಡದೇ ಇದ್ದ ನಮ್ಮ ಆಳುವ ರಾಜಕಾರಣಿಗಳು, ಗವಯಿಗಳು, ನಮ್ಮನ್ನಗಲಿದಾಗ... ''ಅವರಿಗೆ ಧನಸಹಾಯ ನೀಡ್ರಿ'' ಅಂತ ಪ್ರಲಾಪಿಸ್ತಿದಾರೆ. ಸಿನಿಮಾ ಕಲಾವಿದರು ತಮ್ಮನ್ನಗಲಿದ ಒಂದೆರಡೇ ವರ್ಷದಲ್ಲಿ ಸ್ಮಾರಕ ನಿರ್ಮಿಸುವ ನಾವು... ಈ ವೀರೇಶ್ವರ ಪುಣ್ಯಾಶ್ರಮ - ಪುಟ್ಟರಾಜ ಗವಯಿಗಳ ನಿಸ್ವಾರ್ಥ ಸೇವೆಯ ಸೌಧವನ್ನು ಉಳಿಸಿ ಬೆಳೆಸಿ, ಪೋಷಿಸಿ, ಸಂಗೀತದ-ಸಂಪದ್ಭರಿತ ಜಗತ್ತನ್ನು ಸೃಷ್ಟಿಸುವುದೇ... ನಾವು ಅವರಿಗೆ ಕೊಡಬಹುದಾದ ದೊಡ್ಡ ಗೌರವ.

ಪಂ॥ ನಾಗರಾಜರಾವ್ ಹವಲ್ದಾರ್
ಸುನಾದ ಆರ್ಟ್ ಫೌಂಡೇಷನ್, ಬೆಂಗಳೂರು



## 'ಪುಟ್ಟ' ಹಕ್ಕಿಯ ಹಾಡು...

(ಪುಟ್ಟರಾಜ ಗವಯಿಗಳ ಕುರಿತು)

ಕಣ್ಣಪ್ಪನಲ್ಲ ನೀನು,
ದಟ್ಟಡವಿಗೇ ಕಣ್ಣು;
ಕಮರಿದ ಕಂಗಳ
ಬೆಳಕ ಭಾನು...!

ಅಕ್ಕರದ ಕುರುಡು ಹರಿದ
ಮಿಣುಕು ಮಿಂಚ ಬಾನು;
ಜೀವಕ್ಕೆ ಜೀವವಾದ
ಉಸಿರನಾದ ನೀನು...!

ರಾಗ ತಾಳ ಲಯದ ಧ್ಯಾನಿ,
ಬೆಳಗ ಸುರಿವ ಅನ್ನದಾನಿ ;
ಕತ್ತಲೊಡಲ
ಕಾವ್ಯ ಮೀನು...!

ಹರಿದ ರೆಕ್ಕೆ ಮುರಿದ ಕಾಲು
ಕಳ್ಳು ಬಳ್ಳಿ ಯಾನ ;
ಹಾದಿಯುದ್ದ ನುಡಿಸಿದಂತೆ
ಹಕ್ಕಿ ಗಿಲಕಿ ಗಾನ...!

ವಿಜಯಕಾಂತ ಪಾಟೀಲ
ಕ್ಯಾಸನೂರು
ಚಿಕ್ಕಾಂಶಿ, ಹೊಸೂರು - ೫೮೧ ೧೦೪
ಹಾನಗಲ್ಲ ತಾಲ್ಲೂಕು, ಹಾವೇರಿ ಜಿಲ್ಲೆ

## ಡಾ|| ಡಿ. ಎಸ್. ಯೋಗೀಶ್ವರಪ್ಪ

# ದಲಿತರು ಜನಿವಾರ ಹಾಕಿದಾಗ

ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಹುಲಿಯೂರು ದುರ್ಗ ಹೋಬಳಿಯ ಉಜ್ಜನಿ ಕುಗ್ರಾಮವಾಗಿದ್ದರೂ ಪುರಾತನ ಇತಿಹಾಸ ಹೊಂದಿದೆ. ಇಲ್ಲಿನ ಪ್ರಮುಖ ಗ್ರಾಮದೇವತೆ ಚೌಡೇಶ್ವರಿ. ಈ ದೇವತೆಯ ಜಾತ್ರೆಯೇ ಆ ಹಳ್ಳಿಗರಿಗೆ ಪ್ರಮುಖ ಹಬ್ಬ. ಪ್ರತಿವರ್ಷ ಈ ಹಬ್ಬವನ್ನು ೧೫ ದಿನಗಳ ಕಾಲ ಆಚರಿಸುತ್ತಾರೆ. ಈ ಹಬ್ಬದಲ್ಲಿ ಚೌಡೇಶ್ವರಿ ಮೂಲ ದೇವರನ್ನು ಪೂಜಿಸುವವರು ಬ್ರಾಹ್ಮಣರು, ಆಂಜನೇಯ ದೇವರನ್ನು ಪೂಜಿಸುವವರು ವೈಷ್ಣವರು, ಬಸವೇಶ್ವರನನ್ನು ಪೂಜಿಸುವ ಅರ್ಚಕರು ಲಿಂಗಾಯಿತರು, ಹೆಬ್ಬಾರಮ್ಮನನ್ನು ಪೂಜೆ ಮಾಡುವ ಅರ್ಚಕರು ದಲಿತರು, ಬಾಬಯ್ಯನ ಕೊಂಡ ಹಾಯುವವರು ಮುಸಲ್ಮಾನರು, ಮಾರಮ್ಮನನ್ನು ಪೂಜೆ ಮಾಡುವವರು ಬೆಸ್ತರ ಕುಟುಂಬಕ್ಕೆ ಸೇರಿದ ಮಡಿವಾಳರಾಗಿದ್ದಾರೆ. ಪೂಜೆ ಮತ್ತು ಕರಗಗಳನ್ನು ಹೊತ್ತು ಕೊಂಡ ಹಾಯುವವರು ಗೌಡರ ಜನಾಂಗಕ್ಕೆ ಸೇರಿದವರು. ಹೀಗೆ ಈ ಊರಿನಲ್ಲಿ ಎಲ್ಲಾ ಜನಾಂಗದವರಿಗೂ ಆದ್ಯತೆ ನೀಡಿ ಹಬ್ಬವನ್ನು ಮಾಡಲಾಗುತ್ತದೆ. ಇದು ಬಹಳ ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವ ಪದ್ಧತಿಯಾಗಿದೆ.

ಪುರಾಣ ಕಥೆಗಳಲ್ಲಿ ಬರುವ ಉಜ್ಜಯನಿಯ ಮಹಾರಾಜ ವಿಕ್ರಮಾದಿತ್ಯನು ಬೇಟೆಗಾಗಿ ಈ ಪ್ರದೇಶಕ್ಕೆ ಬಂದಿದ್ದನಂತೆ. ಇಲ್ಲಿ ಮೊಲವು ಬೇಟೆನಾಯಿಯನ್ನು ಅಟ್ಟಿಸಿಕೊಂಡು ಹೋಗುತ್ತಿದ್ದುದನ್ನು ನೋಡಿದ ರಾಜ ಆಶ್ಚರ್ಯಗೊಂಡನಂತೆ. ನಾಯಿ ಮೊಲವನ್ನು ಅಟ್ಟಿಸಿಕೊಂಡು ಹೋಗುವುದು ಸಹಜ. ಆದರೆ ಇಲ್ಲಿ ಅದು ವ್ಯತಿರಿಕ್ತವಾಗಿದೆಯಲ್ಲಾ ಎಂದು ಯೋಚಿಸುತ್ತಿರುವಾಗ, ಅವನ ಹೆಗಲ ಮೇಲಿದ್ದ ಬೇತಾಳವು ರಾಜನಿಗೆ ಇದಕ್ಕೆ ಚೌಡಮ್ಮ ದೇವಿಯೇ ಕಾರಣವಾಗಿರುವುದರಿಂದ ಹೇಡಿಗಳೂ ಇಲ್ಲಿ ಚೌಡಮ್ಮನವರ ಆಶೀರ್ವಾದದಿಂದ ಬಲಶಾಲಿಗಳಾಗುತ್ತಾರೆ ಎಂದು ಹೇಳಿತಂತೆ. ಆದ್ದರಿಂದ ಉಜ್ಜಯಿನಿಯ ರಾಜ ಈ ಸ್ಥಳಕ್ಕೆ ತನ್ನ ರಾಜಧಾನಿಯಾದ ಉಜ್ಜಯಿನಿಯ ಹೆಸರನ್ನೇ ಈ ಸ್ಥಳಕ್ಕೆ ಇಟ್ಟನೆಂದು ಸ್ಥಳಪುರಾಣವು ಹೇಳುತ್ತದೆ. ಆದ್ದರಿಂದಲೇ ಬಲಶಾಲಿಗಳೂ, ಸಿದ್ಧಪುರುಷರೂ ಹಿಂದೆ ಇಲ್ಲಿ ನೆಲೆಸಿದ್ದರು ಎಂದು ಮೌಖಿಕ ಸಂಪ್ರದಾಯದಲ್ಲಿ ಅಲ್ಲಿನ ಜನ ಹೇಳುವರು. ಇದಕ್ಕೆ ಸರಿಯಾದ ಐತಿಹಾಸಿಕ ದಾಖಲೆಗಳಿಲ್ಲ. ಉಜ್ಜಯಿನಿ ಕ್ರಮೇಣ ಉಜ್ಜನಿಯಾಗಿ ಬದಲಾಯಿತು ಎನ್ನಲಾಗಿದೆ.

ಆದರೆ ಇದುವರೆಗೆ ದೊರಕಿರುವ ಶಾಸನೋಕ್ತ ಆಧಾರದ ಮೇಲೆ ಹೇಳುವುದಾದರೆ, 'ಉಜೆನಿ' ಎಂಬ ಹೆಸರು ಕ್ರಿ.ಶ. ೧೪೨೯ರ ಶಾಸನದಲ್ಲಿ ಮೊದಲು ಉಲ್ಲೇಖವಾಗಿರುವುದರಿಂದ ಈ ಊರಿನ ಮೂಲವನ್ನು ಕ್ರಿ.ಶ. ೧೫ನೇ ಶತಮಾನಕ್ಕಿಂತ ಮೊದಲಿಗೆ ಕೊಂಡೊಯ್ಯಬಹುದು. ಆ ಶಾಸನವು, ''ಉಜೆನಿಯ ಬೈಚರಸನ ಮಗ ಚೀಮರಸರಿಗೆ ಆ ಊರಿನ ಗೌಡಪ್ರಜೆಗಳು ಹಾಕಿಕೊಟ್ಟ ಕೊಡಗಿ ಶಾಸನ. ಅದರಲ್ಲಿ ಚೀಮರಸ ಮತ್ತು ದೇವಾಲಯದ ಪುರೋಹಿತ ವರ್ಗದವರಿಗೆ ಆ ಊರಿನ ಗೌಡ ಪ್ರಜೆಗಳು ದತ್ತಿ ನೀಡಿದರು. ಇದನ್ನು ಪಡೆದ ಅವರು ಉಜೆನಿಯ ಪೂರ್ವ ದಿಕ್ಕಿನಲ್ಲಿ ಕೆರೆಯನ್ನು ನಿರ್ಮಾಣ ಮಾಡಿ ಗೌಡಪ್ರಜೆಗಳೊಂದಿಗೆ ಒಪ್ಪಂದ ಮಾಡಿಕೊಂಡು ಗದ್ದೆ, ಬೆದ್ದಲು ಭೂಮಿಯನ್ನು ಸರ್ವಸಾಮಾನ್ಯವಾಗಿ ಪಡೆದು ನಾಲ್ಕು ದಿಕ್ಕಿಗೂ ಕಲ್ಲುಗಳನ್ನು ನೆಡಿಸಿ ಎಲ್ಲ ಗೌಡರ ಸಹಿಯನ್ನು ಆ ಊರಿನ ಚೌಡೇಶ್ವರಿ ದೇವಿಯ ಸಮಕ್ಷಮದಲ್ಲಿ ಪಡೆದರು'', ಎಂದು ತಿಳಿಸುತ್ತದೆ.

ಈ ಶಾಸನವು ಕ್ರಿ.ಶ. ೧೪೨೯ರಲ್ಲಿ ಆ ಊರಿನಲ್ಲಿ ಕೆರೆ ಕಟ್ಟಿಸಿದ್ದನ್ನು ತಿಳಿಸುತ್ತದೆಯಲ್ಲದೆ ಅಲ್ಲಿನ ಚೌಡೇಶ್ವರಿ ದೇವಿಯ ದೇವಾಲಯವನ್ನು ಕೂಡ ಉಲ್ಲೇಖಿಸುತ್ತದೆ. ಆದ್ದರಿಂದ ಉಜ್ಜನಿ ಮತ್ತು ಚೌಡೇಶ್ವರಿ ದೇವಾಲಯಗಳು ಕ್ರಿ.ಶ. ೧೪೨೯ಕ್ಕಿಂತ ಮೊದಲೇ ಇದ್ದುವು. ಕೆರೆಯನ್ನು ಕ್ರಿ.ಶ. ೧೪೨೯ರಲ್ಲಿ ನಿರ್ಮಾಣ ಮಾಡಲಾಯಿತೆನ್ನಬಹುದು. ಒಟ್ಟಾರೆ ಹೇಳುವುದಾದರೆ, ಚೌಡೇಶ್ವರಿ ದೇವಿಗೆ ಸಂಬಂಧಪಟ್ಟ ಆಚರಣೆಗಳಿಗೆ ಸುಮಾರು ೬೦೦ ವರ್ಷಗಳಿಗೂ ಹಿಂದಿನಷ್ಟು ಇತಿಹಾಸ ಇದೆ ಎಂದು ಹೇಳಬಹುದು. ಇಂತಹ ಚೌಡೇಶ್ವರಿ ದೇವರ ಗ್ರಾಮಹಬ್ಬವನ್ನು ಯುಗಾದಿ ಹಬ್ಬದ ಸಂದರ್ಭದಲ್ಲಿ ೧೫ ದಿನಗಳ ಕಾಲ ಆಚರಿಸುವರು.

ಯುಗಾದಿ ಹಬ್ಬಕ್ಕೆ ಹೊಂದಿಕೊಂಡಂತೆ ಅದೇ ದಿನ ಚೌಡೇಶ್ವರಿ ದೇವಿಯ ಜಾತ್ರೆ ನಡೆಯುವುದನ್ನು ನಿಗದಿಗೊಳಿಸಿ ೧೫ ದಿನದ ಹಬ್ಬಕ್ಕೆ ಕಂಭ ಹಾಕಿ ಚಾಲನೆ ನೀಡುವರು. ಕಂಭ ಹಾಕಿದ ದಿನದಿಂದಲೇ ಹೆಬ್ಬಾರ ಅಮ್ಮನ ಕರಗ ಹೊರುವ ಸಲುವಾಗಿ ಹೆಬ್ಬಾರ ಗುಡ್ಡರು ಎಂದು ಕರೆಸಿಕೊಳ್ಳುವ ಆರು ಜನ ಹರಿಜನರು ಬಿಳಿ ಕಚ್ಚೆ ಧರಿಸಿ ಚೌಡಮ್ಮನ ಪೂಜಾರಿಯಿಂದ ಹೋಮ ಮಾಡಿದ ತೀರ್ಥವನ್ನು ಸ್ವೀಕರಿಸಿ ಜನಿವಾರ ಹಾಕಿಸಿಕೊಳ್ಳುತ್ತಾರೆ. ಅಂದಿನಿಂದಲೇ ಅವರು ಹದಿನೈದು ದಿನಗಳ ಮಟ್ಟಿಗೆ ಬ್ರಾಹ್ಮಣರಾಗುತ್ತಾರೆ. ಈ ಜನಿವಾರ ಧರಿಸುವ ಮೊದಲು ಅವರು ಕ್ಷೌರ ಮಾಡಿಸಿಕೊಂಡು ಉಡುದಾರ ತೆಗೆದು ಸ್ವಲ್ಪ ಅರಿಶಿನ ಮತ್ತು ಸೀಗೆಕಾಯಿಯನ್ನು ಬಾಯಲ್ಲಿಟ್ಟು ನುಂಗಿ ನಂತರ ಸ್ನಾನ ಮಾಡಿ ಹೊಸಬಟ್ಟೆ ಧರಿಸುವರು. ಬಾಯಿಗೆ ಬಟ್ಟೆ ಕಟ್ಟಿಕೊಂಡು ಪಂಚೆಯನ್ನು ತಲೆಗೆ ಸುತ್ತಿಕೊಳ್ಳುವರು. ಹೀಗೆ ಜನಿವಾರ ಧರಿಸಿದವರನ್ನು ದೇವರ ಗುಡ್ಡರೆಂದು ಕರೆಯುವರು. ಇವರು ಅದೇ ಊರಿನಲ್ಲಿರುವ ಹೆಬ್ಬಾರಮ್ಮನ ಗುಡಿಯಲ್ಲಿ ತಂಗುವರು. ಇವರು ಪ್ರತಿನಿತ್ಯ ತಮ್ಮ ಆಹಾರವನ್ನು ಮಡಿಯಿಂದ ತಾವೇ ತಯಾರಿಸಿಕೊಳ್ಳಬೇಕು, ತಮ್ಮ ಮನೆಗಳಿಗಾಗಲೀ ಬೇರೆಯವರ ಮನೆಗಳಿಗಾಗಲೀ ಯಾರೂ ಹೋಗುವಂತಿಲ್ಲ ಎಂಬ ನಿಯಮಗಳೂ ಇವೆ. ಈ ಸಂದರ್ಭದಲ್ಲಿ ಹೆಬ್ಬಾರ ಗುಡ್ಡದ ಸಂಬಂಧಿಕರೇನಾದರೂ ಒಂದು ವೇಳೆ ಮರಣ ಹೊಂದಿದರೆ ಈ ವಿಷಯವನ್ನು ಅವರಿಗೆ ತಿಳಿಸುವುದಿಲ್ಲ ಮತ್ತು ಆ ಶವದ ಅಂತ್ಯ ಸಂಸ್ಕಾರವನ್ನು ಅವರಿಗೆ ಗೊತ್ತಾಗದಂತೆ ಊರ ಹೊರಗೆ ನೆರವೇರಿಸಬೇಕು.

ಭಾರತದಂತಹ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸನಾತನ ಕಾಲದಿಂದಲೂ ಸಾಮಾಜಿಕ ಸ್ತರದ ವರ್ಣಾಶ್ರಮದಲ್ಲಿ ಜಾತಿಪದ್ಧತಿಯು ವ್ಯಕ್ತಿಯ ಕಸುಬಿನ ಆಧಾರದ ಮೇಲೆ ನಿರ್ಧರಿತಗೊಂಡು ಆಳವಾಗಿ ಬೇರೂರಿದೆ. ಆದರೆ ಅದಕ್ಕೆ ಸೆಡ್ಡುಹೊಡೆಯುವಂತೆ ದಲಿತರು, ಮುಸ್ಲಿಮರು ಹಾಗೂ ಬಹುಸಂಖ್ಯಾತ ಒಕ್ಕಲಿಗರು ಸೇರಿದಂತೆ ಎಲ್ಲ ಸಮುದಾಯದ ಜನರು ಸೇರಿಕೊಂಡು ವಿಶಿಷ್ಟ ಹಾಗೂ ವಿಭಿನ್ನ ಆಚರಣೆಯ ಹಬ್ಬವನ್ನು ಉಜ್ಜನಿ ಗ್ರಾಮದ ಜನರು ತಮ್ಮ ಊರಿನಲ್ಲಿ ನೂರಾರು ವರ್ಷಗಳಿಂದಲೂ ಆಚರಿಸಿಕೊಂಡು ಬರುತ್ತಿದ್ದಾರೆ. ಇಂದು ೫೦೦ಕ್ಕೂ ಹೆಚ್ಚು ಮನೆಗಳಿರುವ ಈ ಗ್ರಾಮದಲ್ಲಿ ಎಲ್ಲ ಜಾತಿ ಜನಾಂಗದವರು ವಾಸಿಸುತ್ತಿದ್ದು, ೨೦೦೨ರಲ್ಲಿ ಮಾತ್ರ ರಸ್ತೆ ವಿಚಾರವಾಗಿ ಜನರ ಮಧ್ಯೆ ಗಲಾಟೆ ಸಂಭವಿಸಿ ಅಪಾರ ಆಸ್ತಿಪಾಸ್ತಿ ನಷ್ಟವಾಗಿತ್ತು. ಇಂದಿಗೂ ಇದು ಆ ಊರಿಗೆ ಕಪ್ಪುಚುಕ್ಕೆಯಾಗಿ ಉಳಿದಿದೆ. ಆದರೂ ಆ ವರ್ಷವೂ ಕೂಡ ಹಬ್ಬದ ಆಚರಣೆಗೇನೂ ಧಕ್ಕೆಯಾಗಲಿಲ್ಲ. ಇಂತಹ ಸೌಹಾರ್ದ ವಾತಾವರಣ ತುಂಬಿರುವ ಊರು ಎಲ್ಲ ನಗರ, ಪಟ್ಟಣ, ಹಳ್ಳಿಗಳಿಗೂ ಮಾದರಿಯಾಗಿದೆ.

ಈ ರೀತಿ ದಲಿತರು ಬ್ರಾಹ್ಮಣರಾಗುವರು. ಇದಕ್ಕೆ ಪುರಾತನ ಹಿನ್ನೆಲೆಯೂ ಇದೆ. ಉಜ್ಜನಿ ಗ್ರಾಮದ ದಲಿತ ಯುವಕನೊಬ್ಬ ತಾನು ಬ್ರಾಹ್ಮಣ ಜಾತಿಗೆ ಸೇರಿದವನು ಎಂದು ಹೇಳಿಕೊಂಡು ಬ್ರಾಹ್ಮಣ ಜನಾಂಗದ ಕನ್ಯೆಯನ್ನು ವಿವಾಹವಾಗಿದ್ದನಂತೆ. ಈ ದಂಪತಿಗೆ ಐವರು ಗಂಡುಮಕ್ಕಳು ಜನಿಸಿದರು. ಕ್ರಮೇಣ ಆ ಬ್ರಾಹ್ಮಣ ಹುಡುಗಿಗೆ ತನ್ನ ಗಂಡನ ಜಾತಿಯ ವಿಷಯ ತಿಳಿಯಿತಂತೆ. ಇದರಿಂದ ನೊಂದ ಅವಳು ಅಗ್ನಿಪ್ರವೇಶ ಮಾಡಿದಳೆಂದು ಹೇಳಲಾಗಿದೆ. ಆದ್ದರಿಂದ ಈ ರೀತಿ ಮರಣಹೊಂದಿದ ಅವರ ತಾಯಿಯನ್ನು ಸಂತೈಸಲಿಕ್ಕಾಗಿ ಅವಳ ಐದು ಮಕ್ಕಳು ಮತ್ತು ಗಂಡ ಸೇರಿದಂತೆ ಒಟ್ಟು ಆ ಕುಟುಂಬದ ಆರು ಜನ ಪ್ರತಿವರ್ಷವೂ ಯುಗಾದಿ ಹಬ್ಬದ ಸಂದರ್ಭದಲ್ಲಿ ಹದಿನೈದು ದಿನಗಳ ಮಟ್ಟಿಗೆ ಜನಿವಾರ ಧರಿಸಿ ಬ್ರಾಹ್ಮಣರಾಗುವರು. ಈ ಹಬ್ಬ ಮುಗಿದ ನಂತರ ಹೆಬ್ಬಾರ ಗುಡ್ಡರು ಜನಿವಾರ ತೆಗೆದು ಎಂದಿನಂತೆ ಬದುಕುವರು. ಹೀಗೆ ವರ್ಷದಲ್ಲಿ ೩೫೦ ದಿನಗಳ ಕಾಲ ಹೆಬ್ಬಾರ ಗುಡ್ಡರು ದಲಿತರಾಗಿ ೧೫ ದಿನಗಳ ಕಾಲ ಬ್ರಾಹ್ಮಣರಾಗಿ ಬದುಕುವ ಈ ಆಚರಣೆ ದೇಶದ ಇತಿಹಾಸದಲ್ಲಿಯೇ ಅತ್ಯಂತ ವಿಶಿಷ್ಟವಾದುದಾಗಿದೆ.

ಉಜ್ಜನಿಯಲ್ಲಿ ನಡೆಯುವ ಚೌಡೇಶ್ವರಿ ಹಬ್ಬವು ಪ್ರಾಮುಖ್ಯತೆ ಪಡೆಯುವುದು ದಲಿತ ಕುಟುಂಬದ ಆರು ಜನರು ಜನಿವಾರ ಧರಿಸುವುದರಿಂದ. ಈ ಹಬ್ಬದಲ್ಲಿ ಆ ಊರಿನ ಸುತ್ತಮುತ್ತಲಿನ ನಿಡಸಾಲೆ, ಕೆಬ್ಬಳ್ಳಿ, ಬ್ಯಾಡರಹಳ್ಳಿ, ಶಿವನಹಳ್ಳಿ, ಹೊನ್ನಮಾಚನಹಳ್ಳಿ ಇತ್ಯಾದಿ ಹಳ್ಳಿಗಳ ಜನರೂ ಭಾಗವಹಿಸುವರು. ಹಬ್ಬಕ್ಕೆ ಕಂಭ ನೆಟ್ಟ ದಿನದಿಂದ ಊರಿನಲ್ಲಿ ಮೆಣಸಿನಕಾಯಿಯನ್ನು ಸುಡುವಂತಿಲ್ಲ. ಆ ಊರಿನಲ್ಲಿ ಈ ನಿಯಮವನ್ನೂ ಬಹಳ ಕಟ್ಟುನಿಟ್ಟಾಗಿ ಆಚರಿಸುವರು. ಈ ಹಬ್ಬದಲ್ಲಿ ನಿಡಸಾಲೆ ಗ್ರಾಮದ ಚೌಡಮ್ಮ ಹಿರಿಯವಳಾಗಿದ್ದು, ಈ ದೇವತೆಯನ್ನು ಬಿಟ್ಟು ಹಬ್ಬ ಮಾಡುವಂತಿಲ್ಲ. ಈ ದೇವತೆಗೆ ಎಲ್ಲ ಪೂಜೆಗಳು ಮೊದಲು ನಡೆಯುತ್ತವೆ. ಇದಕ್ಕೆ ಕಾರಣ ಉಜ್ಜನಿಯಲ್ಲಿರುವ ತನ್ನ ತಂಗಿ ಚೌಡೇಶ್ವರಿಯ ಮಕ್ಕಳನ್ನು ಕಷ್ಟ ಕಾಲದಲ್ಲಿ ಉಳಿಸಿದ್ದಳೆಂದು ಜನರು ನಂಬಿದ್ದಾರೆ. ಈ ಹಬ್ಬದಲ್ಲಿ ನಡೆಯುವ ಪ್ರಮುಖ ಆಚರಣೆಗಳೆಂದರೆ ಕೊಂಡ, ಆರತಿ, ತಲೆಮುಡಿ, ಬಾಯಿಬೀಗ ಮತ್ತು ಬಾಬಯ್ಯನ ಜಲ್ದಿ.

ಎಲ್ಲಾ ಜನಾಂಗದವರೂ ಕೂಡಿ ನಡೆಸುವ ಈ ಹಬ್ಬ ಚೌಡೇಶ್ವರಿ ದೇವಿಗೆ ಕಂಭ ಹಾಕುವ ದಿನದಿಂದ ಆರಂಭವಾಗಿ ಕಂಭವನ್ನು ವಿಸರ್ಜಿಸುವ ತನಕ ಹದಿನೈದು ದಿನಗಳ ಕಾಲ ಮುಂದುವರಿಯುತ್ತದೆ. ಕಂಭ ಹಾಕುವ ದಿನ ಬೆಳ್ಳಿ ಕಂಕಣ ತೊಡುವ ಪೂಜಾರಿಯು ಹಬ್ಬ ಮುಗಿಯುವತನಕ ತನ್ನ ಅಡುಗೆಯನ್ನು ತಾನೇ ತಯಾರಿಸಿಕೊಂಡು ಮಡಿಯಲ್ಲಿ ಇರಬೇಕಾಗುತ್ತದೆ. ಮೊದಲು ಚೌಡೇಶ್ವರಿ ದೇವಿಗೆ ಆರತಿ ಹಬ್ಬವಾಗಿದ್ದು, ನಿಡಸಾಲೆ ಗ್ರಾಮಸ್ಥರಿಗೆ ಆರತಿ ಮಾಡಲು ಮೊದಲು ಪ್ರಾಶಸ್ತ್ಯ ನೀಡಲಾಗುವುದು. ಈ ಹಬ್ಬದ ಪ್ರಮುಖ ಹೈಲೈಟ್ ಅಗ್ನಿಕೊಂಡ. ಅಂದು ಉಜ್ಜನಿ ಮತ್ತು ಸುತ್ತಮುತ್ತಲ ಗ್ರಾಮದ ಜನತೆಗೆ ಅತ್ಯಂತ ಸಡಗರದ ದಿನ. ಸಹಸ್ರಾರು ಜನ ಹೊಸಬಟ್ಟೆ ಧರಿಸಿಕೊಂಡು ಉಜ್ಜನಿಯಲ್ಲಿ ಬಂದು ಸೇರುವರು. ಈ ಅಗ್ನಿಕೊಂಡಕ್ಕೆ ಸುತ್ತಲಿನ ಗ್ರಾಮಗಳಾದ ಕಾಡಬೋರನಹಳ್ಳಿ, ಬೋರೇಗೌಡನ ಕೊಪ್ಪಲು, ವಡ್ರಾಳು, ಬೆಣಚಕಲ್ಲು ಗ್ರಾಮಸ್ಥರು ಸೌದೆಯನ್ನು ಒದಗಿಸುವರು. ರಾತ್ರಿ ೨ ಗಂಟೆಯ ತನಕ ದೇವರ ಉತ್ಸವಗಳು ನಡೆಯುತ್ತವೆ. ಸರಿಯಾಗಿ ರಾತ್ರಿ ೨ ಗಂಟೆಗೆ ಕೊಂಡ ಹಾಯುವ ಆಚರಣೆಯಿದ್ದು ಮೊದಲಿಗೆ, ನಿಡಸಾಲೆ ಕರಗದ ಗುಡ್ಡದವರು, ನಂತರ ನಿಡಸಾಲೆ ಚಾಮುಂಡೇಶ್ವರಿ, ಉಜ್ಜನಿ ಚೌಡಮ್ಮ ಆ ನಂತರ ಜನಿವಾರ ತೊಟ್ಟ ಹೆಬ್ಬಾರ ಗುಡ್ಡದವರು ಕರಗ ಹೊತ್ತುಕೊಂಡು ಅಗ್ನಿಕೊಂಡ ಹಾಯುವರು. ಗ್ರಾಮದ ಮಡಿವಾಳರು ಇಲ್ಲಿ ಬಹಳ ಮುಖ್ಯರಾಗಿದ್ದು, ಅವರು ಕೊಂಡಕ್ಕೆ ತೆಂಗಿನ ಗರಿಗಳನ್ನು ಹಾಕಿ ಬೆಂಕಿ ಹಚ್ಚಿ ಮುಸ್ಲಿಂ ಸಂತ ಬಾಬಯ್ಯನ ಹೆಸರಿನಲ್ಲಿ "ಜಲ್ದಿನಕ ಜೈ ಜೈ" ಎನ್ನುತ್ತ ಕೊಂಡ ಹಾಯುತ್ತಾರೆ. ಇಸ್ಲಾಂ ಧರ್ಮದ ಪದ್ಧತಿಯಂತೆ ಮುಸಲ್ಮಾನರ ಐದು ಜೋಡಿ ದಂಪತಿಗಳು ಸಿಂಗರಿಸಿದ ಗಡಿಗೆಗಳನ್ನು ತಲೆಯ ಮೇಲೆ ಹೊತ್ತು ಕುಣಿಯುತ್ತಾ ಬಾಬಯ್ಯನ ಕೊಂಡ ಹಾಯುವರು. ಮಹಿಳೆಯರು ಬಾಯಿಗೆ ಬೀಗ ಚುಚ್ಚಿಸಿಕೊಂಡು ಚೌಡೇಶ್ವರಿ ದೇವಿಗೆ ಹರಕೆ ತೀರಿಸುತ್ತಾರೆ.

ಅಗ್ನಿಕೊಂಡ ಆದ ಮಾರನೆ ದಿವಸವೇ ಚೌಡೇಶ್ವರಿ ಅಮ್ಮನವರಿಗೆ ಬ್ರಹ್ಮರಥೋತ್ಸವ ನಡೆಯುವುದು. ಅದರ ಮರುದಿನ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ಅದೇ ದಿನ ಸಂಜೆ ಉಜ್ಜನಿಯ ಮಾರಿಗುಡಿ ಬಳಿ ಊರ ಪ್ರಮುಖರು ಮತ್ತು ಹೆಬ್ಬಾರ ಗುಡ್ಡದವರೆಲ್ಲರೂ ಸೇರಿ ತಮಟೆ ವಾದ್ಯಗಳೊಂದಿಗೆ ಹಬ್ಬದ ಆರಂಭದ ದಿನ ನೆಟ್ಟಿದ್ದ ಕಂಭವನ್ನು ಕೀಳುವರು. ಆ ಕಂಭವನ್ನು, ಗ್ರಾಮದ ಪ್ರಮುಖರೂ ಹೆಬ್ಬಾರ ಗುಡ್ಡದವರೂ ಸೇರಿದಂತೆ, ಎಲ್ಲರೂ ಮೆರವಣಿಗೆ ಮೂಲಕ ಗ್ರಾಮದ ದೊಡ್ಡಕೆರೆಗೆ ತೆಗೆದುಕೊಂಡು ಹೋಗಿ ವಿಸರ್ಜಿಸುವರು. ಆಗ ಜನಿವಾರ ತೊಟ್ಟು ಬ್ರಾಹ್ಮಣರಾಗಿದ್ದ ದಲಿತರು ಜನಿವಾರವನ್ನು ತೆಗೆಯುವರು. ಈ ಆಚರಣೆಯೊಂದಿಗೆ ಹಬ್ಬವೂ ಮುಗಿಯುತ್ತದೆ.

ಭಾರತದಂತಹ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸನಾತನ ಕಾಲದಿಂದಲೂ ಸಾಮಾಜಿಕ ಸ್ತರದ ವರ್ಣಾಶ್ರಮದಲ್ಲಿ ಜಾತಿಪದ್ಧತಿಯು ವ್ಯಕ್ತಿಯ ಕಸುಬಿನ ಆಧಾರದ ಮೇಲೆ ನಿರ್ಧರಿತಗೊಂಡು ಆಳವಾಗಿ ಬೇರೂರಿದೆ. ಆದರೆ ಅದಕ್ಕೆ ಸೆಡ್ಡುಹೊಡೆಯುವಂತೆ ದಲಿತರು, ಮುಸ್ಲಿಮರು ಹಾಗೂ ಬಹುಸಂಖ್ಯಾತ ಒಕ್ಕಲಿಗರು ಸೇರಿದಂತೆ ಎಲ್ಲ ಸಮುದಾಯದ ಜನರು ಸೇರಿಕೊಂಡು ವಿಶಿಷ್ಟ ಹಾಗೂ ವಿಭಿನ್ನ ಆಚರಣೆಯ ಹಬ್ಬವನ್ನು ಉಜ್ಜನಿ ಗ್ರಾಮದ ಜನರು ತಮ್ಮ ಊರಿನಲ್ಲಿ ನೂರಾರು ವರ್ಷಗಳಿಂದಲೂ ಆಚರಿಸಿಕೊಂಡು ಬರುತ್ತಿದ್ದಾರೆ. ಇಂದು ೫೦೦ಕ್ಕೂ ಹೆಚ್ಚು ಮನೆಗಳಿರುವ ಈ ಗ್ರಾಮದಲ್ಲಿ ಎಲ್ಲ ಜಾತಿ ಜನಾಂಗದವರು ವಾಸಿಸುತ್ತಿದ್ದು, ೨೦೦೨ರಲ್ಲಿ ಮಾತ್ರ ರಸ್ತೆ ವಿಚಾರವಾಗಿ ಜನರ ಮಧ್ಯೆ ಗಲಾಟೆ ಸಂಭವಿಸಿ ಅಪಾರ ಆಸ್ತಿಪಾಸ್ತಿ ನಷ್ಟವಾಗಿತ್ತು. ಇಂದಿಗೂ ಇದು ಆ ಊರಿಗೆ ಕಪ್ಪುಚುಕ್ಕೆಯಾಗಿ ಉಳಿದಿದೆ. ಆದರೂ ಆ ವರ್ಷವೂ ಕೂಡ ಹಬ್ಬದ ಆಚರಣೆಗೇನೂ ಧಕ್ಕೆಯಾಗಲಿಲ್ಲ. ಇಂತಹ ಸೌಹಾರ್ದ ವಾತಾವರಣ ತುಂಬಿರುವ ಊರು ಎಲ್ಲ ನಗರ, ಪಟ್ಟಣ, ಹಳ್ಳಿಗಳಿಗೂ ಮಾದರಿಯಾಗಿದೆ. ಎಂತಹ ರಾಜಕೀಯ ವೈಮನಸ್ಯಗಳಿದ್ದರೂ ದೇವಿಯ ಹಬ್ಬದ ಆಚರಣೆಯಲ್ಲಿ ಇಲ್ಲಿನ ಜನ ಅವೆಲ್ಲವನ್ನೂ ಮರೆತುಬಿಡುವರು. ಒಟ್ಟಾರೆ ದಲಿತರು ಇಲ್ಲದೆ ಇಲ್ಲಿ ಚೌಡೇಶ್ವರಿ ಹಬ್ಬ ಆಚರಿಸಲು ಸಾಧ್ಯವೇ ಇಲ್ಲ.

**ಡಾ|| ಡಿ. ಎಸ್. ಯೋಗೀಶ್ವರಪ್ಪ**
ಮುಖ್ಯಸ್ಥರು, ಇತಿಹಾಸ ವಿಭಾಗ, ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು - ೫೭೨ ೧೦೧

# ಜೀವನ್ಮುಖಿ

ಅಬಲೆಯೆನ್ನುವ ಕಾಲ ಹೋಯಿತು
ಬೆನ್ನ ಹಿಂದೆ
ಕ್ರಮಿಸಬೇಕಾದ ದಾರಿಯಿದೆ ಮುಂದೆ.

ಅಸ್ಪಷ್ಟವಾಗಿಯೇ ಇರಲಿ ಹಿನ್ನೆಲೆ
ನಿನಗದರ ಉಸಾಬರಿ ಬೇಡ
ಬೆಳಕು ತುಂಬಿ ನಿಂತಿದೆ ಮುನ್ನೆಲೆ
ಕಣ್ಣು ಕೋರೈಸುವದಕೆ ಅವಕಾಶವೀಯಬೇಡ.

ಗುರಿಗಿಂತ ಮಾರ್ಗವೇ ಮುಖ್ಯ
ಬದುಕ ಪಯಣದಲಿ ಹೊರಟವರಿಗೆ
ಬೇಕಿನ್ನೊಂದು ಜೀವದ ಅಷ್ಟಿಷ್ಟು ಸಖ್ಯ

ಎಷ್ಟು ದಿನವಾದೀತು ಕೈಚೀಲದಲಿ
ತುಂಬಿರುವ ಜೀವನ ಸರಕು ?

ಕೊನೆ ಮುಟ್ಟಿದ ನಂತರವಾದರೂ
ಮತ್ತೆ ಗೂಡಿಗೆ ಮರಳಲೇಬೇಕು.

ಎಲ್ಲಿಯವರೆಗೆ ಹೋದರೂ ಸಮಾ-
ನಾಂತರ ಈ ರೈಲು ಹಳಿಗಳು
ಅದೆಲ್ಲ ಯಂತ್ರ ತಂತ್ರದ ಗತ್ತು
ಯಾರನ್ನೆಲ್ಲಿ ಸಂಧಿಸುತ್ತೇವೆಂಬುದು
ಜಗನಿಯಾಮಕನಿಗೇ ಗೊತ್ತು.

ಬದುಕಿಗೆ ಬೆನ್ನು ಹಾಕಿ
ನಡೆಯುವುದು ಬೇಡ ಸಖಿ
ಗುರಿ ಸಾಧಿಸುತ್ತಲೇ ನೀನಾಗು
ಜೀವನ್ಮುಖಿ ....



**ಚನ್ನಪ್ಪ ಅಂಗಡಿ ಬಮ್ಮನಹಳ್ಳಿ**
ಅಗ್ರಿಕಲ್ಚರ್ ಆಫೀಸರ್, ರಾಜ್ಯ ಮಣ್ಣು
ಮತ್ತು ಸಮೀಕ್ಷೆ ಕಛೇರಿ
ಬೆಳಗಾವಿ ರಸ್ತೆ
ಧಾರವಾಡ - ೫೮೦ ೦೦೮



# ಬಲಿಪಶು

ಚಂದ್ರಪ್ರಭ ಕಠಾರಿ

"ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ ಭೀಕರ ಅಪಘಾತ. ಇತಿಹಾಸದಲ್ಲಿ ಕಂಡು ಕೇಳರಿಯದ ಸಾವುನೋವು."

ದಿನಪತ್ರಿಕೆಯ ಮುಖಪುಟದಲ್ಲಿ ದಪ್ಪಕ್ಷರಗಳಲ್ಲಿದ್ದ ಈ ವರದಿಯನ್ನು ನೋಡಿದೊಡನೆ ವಿಹ್ವಲವಾಯಿತು ಸದಾಶಿವಪಿಳ್ಳೆಯ ಮನಸ್ಸು. ಈ ಪತ್ರಿಕೆಯವರಿಗೆ ಒಳ್ಳೆಯ ಸುದ್ದಿ ಸಿಗುವುದೇ ಇಲ್ಲವೇ ? ದಿನ ಬೆಳಗಾದರೆ ಆ್ಯಕ್ಸಿಡೆಂಟ್, ಆತ್ಮಹತ್ಯೆ, ಕೊಲೆ ಇಂಥದ್ದರ ಬಗ್ಗೆಯೇ ದೊಡ್ಡದಾಗಿ ಬರೀತಾರೆ ! ಕಣ್ಣು ಕಿವಿಗೆ ಇಂಥ ದುರ್ಘಟನೆಗಳ ಕೆಟ್ಟ ಸುದ್ದಿ ಬಿದ್ದರೆ ಸಾಕು, ತನ್ನ ಬದುಕಿನ ಬುಡವನ್ನೇ ಅಲುಗಾಡಿಸಿದ ಆ ವಿಧಿಯ ಅಟ್ಟಹಾಸ ಬೇಡಬೇಡವೆಂದರೂ ಕಣ್ಮುಂದೆ ಬಂದು ನಿಂತು ಬದುಕಿನ ಚೈತನ್ಯವ ಕುಗ್ಗಿಸಲು ಹವಣಿಸುತ್ತದೆ.

ಬಾಪೂಜಿನಗರದ ದೊಡ್ಡಮೋರಿಯ ದಡದಲ್ಲಿ, ಹತ್ತು ವರುಷಗಳಿಂದ ವಾಸವಿದ್ದ ಜೋಪಡಿಯಂಥ ಮನೆಯನ್ನು ಕೆಡವಿ, ನಾಲ್ಕು ಚದರ ಚಿಕ್ಕ ಜಾಗದಲ್ಲಿ ಬೆಂಕಿಪೊಟ್ಟಣಗಳನ್ನು ಒಂದರ ಮೇಲೊಂದು ಜೋಡಿಸಿ ಇಟ್ಟಂತೆ ಕಳೆದೆರಡು ವರುಷಗಳ ಹಿಂದೆ ಕಟ್ಟಿದ್ದ ಮೂರು ಅಂತಸ್ತಿನ ಮನೆಯ ಉಪ್ಪರಿಗೆಗೆ ಸದಾಶಿವ ಪಿಳ್ಳೆ ಬಂದು ನಿಂತ. ಹಿಂದಕ್ಕೆ ದೊಡ್ಡಮೋರಿಯವರೆಗೂ ಸುಮಾರು ನೂರು ಅಡಿ ಮತ್ತು ಎಡಕ್ಕೆ ಮೈಸೂರು ರಸ್ತೆಯವರೆಗೂ ಸುಮಾರು ಇನ್ನೂರು ಅಡಿ ಪ್ರದೇಶದಲ್ಲಿದ್ದ ಎಪ್ಪತ್ತಕ್ಕೂ ಮಿಕ್ಕು ಅಚ್ಚುಕಟ್ಟಾಗಿ ಒಂದರ ಪಕ್ಕ ಒಂದು ಪುಟ್ಟಪುಟ್ಟ ಹೆಂಚಿನ ಮನೆಗಳ ಸಾಲುಗಳತ್ತ ನೋಡುತ್ತ ಕೃತಕೃತ್ಯದ ಭಾವ ಹೊಂದಿದ. ಸರ್ಕಾರದಿಂದ ಬರಬೇಕಾಗಿದ್ದ ಪರಿಹಾರದ ಹಣ ಮಧ್ಯವರ್ತಿಗಳೆಂಬ ಪಾಪಿಗಳ ಪಾಲಾದಾಗ, ಇಂದಿರಾನಗರದಲ್ಲಿ ಕಟ್ಟಿಸಿದ್ದ ಹೆಂಡತಿಯ ಕನಸಿನ ಅರಮನೆಯನ್ನು ಮತ್ತೆ ಅವಳ ಕನಸಲ್ಲೇ ಇರಗೊಟ್ಟು, ಮಾರಿ ಬಂದ ಹಣದಿಂದ ತನ್ನೊಡನೆ ಕೆಲಸಕ್ಕಿದ್ದ ಬಡ ಕೂಲಿಕಾರರಿಗೆ ಕಟ್ಟಿಕೊಟ್ಟ ಮನೆಗಳವು.

ಬಂಗಲೆಯೊಂದಿಗೆ ಅದರೊಳಗೆ ಒಪ್ಪ ಓರಣವಾಗಿ ಇರಿಸಿದ್ದ ಸೋಫ, ಕುರ್ಚಿ, ಮೇಜು, ಪೀಠೋಪಕರಣಗಳ ಸಹಿತ ಮಾರಿ "ನಮಗಿನ್ನು ಗುಡಿಸಲೇ ಗತಿ" ಎಂದು ಗೇಟಿನಾಚೆ ರಸ್ತೆಯಲ್ಲಿ ನಿಂತು ಕೊನೆಯಬಾರಿ ಮನೆಯನ್ನೊಮ್ಮೆ ನೋಡಿ ಕಣ್ತುಂಬಿಕೊಳ್ಳುವಾಗ ಕೈಹಿಡಿದವಳು – ಒಂದು ಬೈಗುಳ, ಒಂದು ಮಾತುಬೇಡ, ಒಂದು ಹನಿ ಕಣ್ಣೀರನ್ನೂ ಹಾಕದೆ ನಿರ್ಲಿಪ್ತಳಾಗಿದ್ದಳಲ್ಲ! ಕೊನೆಗೆ ತಡೆಯಲಾರದೆ ತನ್ನದೇ ಸ್ವಯಂಕೃತ ಅಪರಾಧ ಎಂದು ಅವಳ ಸೆರಗಲ್ಲಿ ಮುಖ ಮುಚ್ಚಿ ತಾನೇ ಬಿಕ್ಕಿಬಿಕ್ಕಿ ಅತ್ತನಲ್ಲ!

ಕಣ್ಣಂಚಲಿ ಮತ್ತೆ ನೀರಾಡಿತು. ಛೆ! ಪದೇಪದೇ ಕಾಡುವ ಈ ಹಾಳು ನೆನಪುಗಳ ಮರೆಸಲಿಕ್ಕೆ ಮದ್ದಿಲ್ಲವೆ ? ಹರಿಯುತ್ತಿದ್ದ ಕಣ್ಣೀರನ್ನು ಸದಾಶಿವ ಪಿಳ್ಳೆ ಒರೆಸಿಕೊಂಡ.

ವಿಧಿಯೊಡನೆ ಸದಾಶಿವ ಪಿಳ್ಳೆಯ ಸೆಣಸಾಟದ ಕತೆ ಬಾಲ್ಯದಲ್ಲಿಯೇ ಆರಂಭಗೊಂಡದ್ದು. ಸುಳಿವು ಕೊಡದೆ ಬರುವ ಜವರಾಯ ಬಂದು ತನ್ನಪ್ಪನನ್ನು ಪರಲೋಕಕ್ಕೆ ಕರೆದೊಯ್ದಾಗ ಒಂಬತ್ತನೇ ತರಗತಿಯಲ್ಲಿ ಓದುತ್ತಿದ್ದ. ಅಡುಗೆಮನೆ ಬಿಟ್ಟು ಹೊರಗೆ ಜಗತ್ತೊಂದಿದೆ ಎಂದು ತಿಳಿಯದ ಮುಗ್ಧ ತಾಯಿಯೊಂದಿಗೆ ಸಂಸಾರದ ಜವಾಬ್ದಾರಿಯನ್ನು ತನ್ನ ಪುಟ್ಟ ಹೆಗಲ ಮೇಲೆ ಹೊತ್ತು, ಅಪ್ಪನಂತೆ ತಾನೂ ಕಟ್ಟಡ ನಿರ್ಮಾಣದ ಕೆಲಸಕ್ಕೆ ಕೂಲಿಯಾಗಿ ಸೇರಿಕೊಂಡ.

ತನ್ನ ಗಣಿತದ ಜ್ಞಾನ, ಸ್ಮರಣಶಕ್ತಿ ಬಲದಿಂದ ನಿರಕ್ಷರಕುಕ್ಷಿ ಮೇಸ್ತ್ರಿಗಳಲ್ಲಿ ಮಾಡಿದ ಕೆಲಸದ ಅಳತೆ ತೆಗೆದು ಬಿಲ್ಲು ಮಾಡುವ ಸಹಾಯಕನಾಗಿ ದುಡಿದು, ಹಂತಹಂತವಾಗಿ ಬೆಳೆದ ಸದಾಶಿವ ಪಿಳ್ಳೆ ಮುಂದೆ ಕಟ್ಟಡ ನಿರ್ಮಾಣ ಗುತ್ತಿಗೆ ಕೆಲಸ ಹಿಡಿದು, ಅಲ್ಲಿ "ಸದಾಶಿವನಿಗೆ ಕೆಲಸ ವಹಿಸಿದರೆ ಸಾಕು, ಕಟ್ಟಡ ಕೆಲಸ ಮುಗಿದಂತೆ" ಎನ್ನುವ ಮೆಚ್ಚುಗೆಯ ಮಾತು ನಿರ್ಮಾಣ ವಲಯದಲ್ಲಿ ಹರಡುವ ಮಟ್ಟಿಗೆ ಹೆಸರುವಾಸಿಯಾದ.

ಒಂದಾದ ಮೇಲೊಂದರಂತೆ ಸಿಗುತ್ತಿದ್ದ ಕಟ್ಟಡ ನಿರ್ಮಾಣ ಗುತ್ತಿಗೆ ಕೆಲಸದಿಂದ ಕ್ರಮೇಣ ಬೆಳೆದ ಸದಾಶಿವ ಪಿಳ್ಳೆ ಇಷ್ಟಪಟ್ಟು ಬಂದ ಹುಡುಗಿ ಶಾಂತಿಯ ಕೈಹಿಡಿದು ಮದುವೆಯೂ ಆದ. ಅವಳ ಆಸೆಯಂತೆ ತಾನಿದ್ದ ಪುಟ್ಟ ಮನೆಯನ್ನು ಮಾರಿ ಇಂದಿರಾನಗರದಲ್ಲಿ ಭವ್ಯ ಬಂಗಲೆಯೊಂದನ್ನು ಕಟ್ಟಿಸಿದ. ಓಡಾಟಕ್ಕೆ ಕಾರುಗಳು, ತನ್ನೆರಡು ಮಕ್ಕಳಿಗೆ ದೊಡ್ಡ ಸ್ಕೂಲುಗಳಲ್ಲಿ ವಿದ್ಯಾಭ್ಯಾಸ – ಒಟ್ಟಿನಲ್ಲಿ ಸರಿಸುಮಾರು ಇಪ್ಪತ್ತೈದು ವರುಷಗಳು ನಿರಂತರವಾಗಿ ಬದ್ಧತೆ, ಪ್ರಾಮಾಣಿಕತೆಯಿಂದ ದುಡಿದ ಶ್ರಮದ ಪ್ರತಿಫಲ ಅವನಲ್ಲಿ ಸಾರ್ಥಕತೆಯನ್ನು ಕಾಣಿಸಿತ್ತು.

ಇಂತಿರುವಾಗಲೇ ಸದಾಶಿವ ಪಿಳ್ಳೆ ಹೇಳುವ ವಿಧಿಯ ಕಾಣದ ಕೈ ಅವನನ್ನು ಸುಭಾಷನಗರದಲ್ಲಿ ದಿಢೀರೆಂದು ಭೂಮಿಯಿಂದ ಉದ್ಭವವಾದಂತೆ ಅಹೋರಾತ್ರಿ ಮೇಲೆದ್ದಿದ್ದ ಎಂಟಸ್ತಿನ ಕಟ್ಟಡದ ಮಾಲೀಕರ ಮುಂದೆ ತಂದು ನಿಲ್ಲಿಸಿತ್ತು.

"ಸದಾಶಿವ ಪಿಳ್ಳೆ... ನೀವೇನಾ ? ನಿಮ್ಮ ಕಾಂಟ್ರಾಕ್ಟ್ ಕೆಲಸದ ಬಗ್ಗೆ ಬಹಳ ಕೇಳಿದ್ದೀವಿ" ಎಂದಿತು ಮಧ್ಯವಯಸ್ಸಿನ ಸೂಟುಬೂಟು ತೊಟ್ಟು, ಕಾಲು ಮೇಲೆ ಕಾಲು ಹಾಕಿ ಅಲುಗಾಡದ ಮೂರ್ತಿಯಂತೆ ಕುಳಿತ ಗಡ್ಡಧಾರಿ.

"ಎಲ್ಲಾ ತಮ್ಮಂಥವರ ಆಶೀರ್ವಾದ, ಸ್ವಾಮಿ."

"ಎಷ್ಟು ಜನ ಕೆಲ್ಸಗಾರ್ನ ಇಟ್ಟಿದ್ದೀರೀ ?" ಎಂದ ಮತ್ತೊಬ್ಬ ಯುವಕ. ಅವನು ಬಹುಶಃ ಕಟ್ಟಡದ ಇಂಜಿನಿಯರ್ ಇರಬೇಕು.

"ಇದ್ದಾರೆ, ಸಾರ್. ಸುಮಾರು ನಾಲ್ಕುನೂರು ಜನ..."

"ಸರಿ, ಹೊರಗೆ ನೋಡಿದ್ರಲ್ಲ ಎಷ್ಟು ಫಾಸ್ಟಾಗಿ ಕೆಲ್ಸ ನಡೀತಿದೆ ಅಂತ. ಬರೀ ನಾಲ್ಕು ತಿಂಗಳಲ್ಲೇ ಎಂಟು ಫ್ಲೋರ್ ಮುಗಿಸಿದ್ದೀರಿ. ಬಿಲ್ಡಿಂಗ್ ಕಟ್ಟೋವಾಗ ಇದ್ದ ಪ್ರೊಗ್ರೆಸ್ ಈಗ ಫಿನಿಶಿಂಗ್ ಟೈಮಲ್ಲಿ ಡಿಲೇ ಆಗಬಾರ್ದು. ಅದಕ್ಕೆ ಇಡೀ ಬಿಲ್ಡಿಂಗ್‌ಗೆ ಟೈಲ್ಸ್ ಹಾಕೋ ಕೆಲ್ಸ ನಿಮ್ಗೆ ಕೊಡೋಣಾಂತ ಡಿಸೈಡ್ ಮಾಡಿದ್ದೀವಿ".

"ಸಂತೋಷ... ಸಾರ್ !"

"ಆದ್ರೆ ಪೂರಾ ಕೆಲ್ಸ, ಕೇವಲ ಎರಡು ತಿಂಗಳಲ್ಲಿ ಮುಗೀಬೇಕು. ರೇಟಿಗೆ ಯೋಚ್ನೆ ಮಾಡ್ಬೇಡಿ. ಮಾರ್ಕೆಟ್‌ನಲ್ಲಿ ಇರೋದಿಕ್ಕಿಂತ ಜಾಸ್ತಿ ಕೊಡ್ತೀವಿ!" ಅಂದ, ಕೈಲಿದ್ದ ವಾಕಿಂಗ್ ಸ್ಟಿಕ್ ಹಿಡಿ ಮೇಲೆ ಮುಖ ಊರಿ ಕುಳಿತಿದ್ದ ವಯಸ್ಸಾಗಿದ್ದ ಮಗದೊಬ್ಬ ಸೂಟುಧಾರಿ.

"ಎರಡು ತಿಂಗಳಲ್ಲಿ ಕಷ್ಟ! ಪ್ರಯತ್ನ ಮಾಡ್ತೀನಿ, ಸ್ವಾಮಿ" ಎಂದು ಕೈಮುಗಿದು ಸೆಲ್ಲಾರಿನಲ್ಲಿದ್ದ ಸೈಟ್ ಆಫೀಸಿನಿಂದ ಹೊರಬಂದ ಸದಾಶಿವ ಪಿಳ್ಳೆ.

ಮಾಲೀಕರು ಹೇಳಿದಂತೆ ಕಟ್ಟಡದ ಕೆಲಸ ಜೋರಾಗಿಯೇ ಸಾಗಿತ್ತು. ಕಟ್ಟಡದ ಕೆಲಸದ ಆರಂಭದಲ್ಲಿ ಇರುವ ಕಾಂಕ್ರೀಟ್ ಗ್ಯಾಂಗ್‌ನವರು, ಕಂಬಿ ಕೆಲಸದವರಿಂದ ಹಿಡಿದು ಕಟ್ಟಡ ಮುಗಿಯುವ ಹೊತ್ತಲ್ಲಿ ಬರುವ ಪ್ಲಾಸ್ಟರಿಂಗ್ ಮೇಸನ್‌ಗಳು, ಕಾರ್ಪೆಂಟರ್‌ಗಳು, ಪ್ಲಂಬರ್

ಗಳು ಎಲ್ಲಾ ಹಂತದ ಕೆಲಸಗಾರರು ಇರುವೆಗಳಂತೆ ದುಡಿಯುತ್ತಿದ್ದರು. ಕೆಲಸಗಾರರ ಧಾವಂತ ನೋಡಿದರೆ ಕಟ್ಟಡ ರಾತ್ರಿಯಲ್ಲಿಯೇ ಮುಗಿದು ಬೆಳಿಗ್ಗೆ ಉದ್ಘಾಟನೆಗೆ ಸಿದ್ಧವಾಗಿಬಿಡುತ್ತೇನೋ ಅನ್ನುವಂತಿತ್ತು. ಆದರೆ ಯಾವ ಕೆಲಸದಲ್ಲೂ ನಯ ನಾಜೂಕು, ಗುಣಮಟ್ಟದ ಕೆಲಸ ಮತ್ತು ಒಳ್ಳೆಯ ಕಟ್ಟಡ ಸಾಮಗ್ರಿಗಳು ತಾನು ಮಾಡಿಸುತ್ತಿದ್ದ ಕೆಲಸದಲ್ಲಿದ್ದಂತೆ ಸದಾಶಿವ ಪಿಳ್ಳೆಗೆ ಕಾಣಲಿಲ್ಲ.

ಪ್ರಾರಂಭದಲ್ಲಿ ಐವತ್ತು ಅರವತ್ತು ಜನರನ್ನಿಟ್ಟು ಸದಾಶಿವ ಪಿಳ್ಳೆ ಕೆಲಸ ಶುರುಮಾಡಿದ. ಒಂದು ವಾರ ಕಳೆದಿತ್ತಷ್ಟೆ ! ಮಾಲೀಕರು ಮತ್ತು ಇಂಜಿನಿಯರ್‌ಗಳು ಬಂದು, ''ಕೆಲಸ ಬಹಳ ಸ್ಲೋ ಆಯ್ತು!'', ಇನ್ನೂ ಬೇಗ ಆಗಬೇಕು'' ಎಂದು ತಗಾದೆ ತೆಗೆದು, ಬೇಕಾದಲ್ಲಿ ಅಡ್ವಾನ್ಸ್ ಆಗಿ ಹಣ ಕೊಡುವುದಾಗಿ ತಿಳಿಸಿದರು. ಅವರು ಹೇಳುವ ಹಾಗೆ ಇನ್ನೂರು ಜನರನ್ನು ಒಟ್ಟಿಗೆ ಕರೆತಂದು ಇಲ್ಲೇ ಬಿಟ್ಟರೆ ಬೇರೆಡೆ ಆಗಲೇ ನಡೆಯುತ್ತಿದ್ದ ಕೆಲಸಗಳಿಗೆ ತೊಂದರೆಯಾಗುವುದೆಂದು, ಮತ್ತೆ ನಲವತ್ತು ಕೆಲಸಗಾರರನ್ನು ನೇಮಿಸಿಕೊಂಡ.

ಆ ದಿನ ಒಂದೊಂದೇ ಮಹಡಿಯಲ್ಲಿ ನಡೆಯುತ್ತಿದ್ದ ಕೆಲಸ ನೋಡಿಕೊಂಡು ಮೆಟ್ಟಲಿಳಿಯುವಾಗ, ಹತ್ತುವ ಇಳಿಯುವ ಮೆಟ್ಟಲುಗಳ ಮಧ್ಯೆ ಬಾವಿಯಂಥ ಖಾಲಿ ಜಾಗದಲ್ಲಿ ತಾರಸಿ ಮಹಡಿಯಿಂದ ಮರಳು ನೀರಿನ ಧಾರೆಯಂತೆ ನಿಧಾನವಾಗಿ ಸುರಿಯುತ್ತಿತ್ತು. ತಲೆಯೆತ್ತಿ ಸಿಟ್ಟಿನಿಂದ, ''ಯಾವೋನೋ ಮರಳನ್ನು ಹೀಗೆ ಸುಮ್ನೆ ವೇಸ್ಟ್ ಮಾಡ್ತಿರೋದು? ಅದನ್ನ ಮಟ್ಟಿಯಲ್ಲಿ ಒಂದ್ ಪಕ್ಕಕ್ಕಾದ್ರು ಎಳೆದು ಹಾಕ್ಕೊ...!'' ಎಂದು ಜೋರಾಗಿ ಕೂಗಿ ಹೇಳಿದ. ಹಾಗೆ ತಲೆ ಎತ್ತಿ ನೋಡುತ್ತಿದ್ದರೆ ಎಂಬತ್ತು ಅಡಿ ಎತ್ತರಕ್ಕೆ ನಿಂತಿದ್ದ ಮೆಟ್ಟಿಲುಮನೆ (ಸ್ಟೇರ್‌ಕೇಸ್) ಒಮ್ಮೆಗೆ ಅಲುಗಾಡಿದಂತೆ ಭಾಸವಾಯಿತು. ಗಾಬರಿಯಾದ ಸದಾಶಿವ ಪಿಳ್ಳೆಗೆ ಆ ಕ್ಷಣದಲ್ಲಿ ಅದೇನು ಹೊಳೆಯಿತೋ! ಮೆಟ್ಟಲುಮನೆ ಗೋಡೆಯಲ್ಲಿದ್ದ ಕಿಟಕಿಯನ್ನು ಹತ್ತಿ ಹೊರಗೆ ಧುಮುಕಿದ. ಆರನೇ ಮಹಡಿಯಿಂದ ಅವನು ಹಾಗೆ ಜಿಗಿದಾಗ ಹೊರಗಡೆ ಖಾಲಿ ಜಾಗದಲ್ಲಿ ದಾಸ್ತಾನು ಮಾಡಿದ್ದ ಎರಡು ಅಂತಸ್ತಿನಷ್ಟು ಎತ್ತರಕ್ಕಿದ್ದ ಮರಳು ಗುಡ್ಡೆಯಲ್ಲಿ ಬಿಟ್ಟ ಬಾಣದಂತೆ ಸೊಂಟದವರೆಗೂ ಮರಳಲ್ಲಿ ಹೂತುಹೋದ.

ಕಣ್ಣೆದುರಿಗೆ ತಾರಸಿಮಹಡಿಗಿಂತಲೂ ಮೇಲಕ್ಕಿದ್ದ ನೀರಿನ ಓವರ್‌ಹೆಡ್ ಟ್ಯಾಂಕ್ 'ದಢುಂ' ಎಂದು ಬಾಂಬು ಸ್ಫೋಟಗೊಂಡಂಥ ಶಬ್ದ ಮಾಡುತ್ತ ಕುಸಿಯಿತು. ಅದರ ಭಾರಕ್ಕೆ ಎಂಟನೇ ಮಹಡಿಯ ಛಾವಣಿ ಜೋರು ಸದ್ದು ಮಾಡುತ್ತ ಕುಸಿದರೆ,ಆ ಇಡೀ ಗಗನಚುಂಬಿ ಕಟ್ಟಡವೇ ಗಾಳಿಗೆ ಅಲುಗಾಡುವ ತೆಂಗಿನಮರದಂತೆ ತೊನೆದಾಡಿತು. ಅರೆನಿಮಿಷದಲ್ಲಿ ಒಂದರ ಮೇಲೊಂದರಂತೆ ಎಲ್ಲಾ ಮಹಡಿಗಳು ಚುಪತುಪನೆ ಬಿದ್ದು, ಹಪ್ಪಳ ಮುರಿದಂತೆ ಚೂರುಚೂರಾಗಿ ನೆಲಕ್ಕುರುಳಿದವು. ಕೆಲವು ಕಾಂಕ್ರೀಟ್ ಕಂಬಗಳು ಕಡ್ಡಿ ಮುರಿದಂತೆ ಲಟಲಟನೆ ಮುರಿದರೆ, ಮತ್ತೆ ಕೆಲವು ನೆಟ್ಟಗೆ ಒಂದೆಡೆ ವಾಲಿ ಅನಾಮತ್ತಾಗಿ ನೆಲಕ್ಕೆ ಬಿದ್ದು ಪುಡಿಪುಡಿಯಾದುವು. ಈಗಷ್ಟೇ ಗೋಣೆತ್ತಿ ನೋಡುವಂತೆ ನಿಂತಿದ್ದ ಕಟ್ಟಡ, ಇಲ್ಲಿ ಏನೂ ಇರಲಿಲ್ಲವೆಂಬಂತೆ ಖಾಲಿಯಾಗಿ ಧರೆಗುರುಳಿತ್ತು.

ಆಕಾಶದೆತ್ತರಕ್ಕೆ ಎದ್ದ ಧೂಳು, ಹೊಗೆಯಿಂದ ಏನೊಂದೂ ಕಾಣಿಸದಾಗಿತ್ತು. ಆದರೆ ಕಟ್ಟಡದೊಳಗೆ ಸಿಕ್ಕು ಸತ್ತವರ ಲೆಕ್ಕ ಒತ್ತಟ್ಟಿಗಿರಲಿ. ಆದರೆ, ಅರೆಬರೆ ಬದುಕುಳಿದವರು ಬಿದ್ದ ಅವಶೇಷಗಳಲ್ಲಿ ಎಲ್ಲಿ ಸಿಕ್ಕಿಬಿದ್ದಿದ್ದರೋ, ಅವರ ನೋವಿನ ಕೂಗು, ಆಕ್ರಂದನ ಮುಗಿಲುಮುಟ್ಟಿತ್ತು. ಹೊರಗಡೆ ಚೆಲ್ಲಾಪಿಲ್ಲಿಯಾಗಿ ದಿಕ್ಕೆಟ್ಟು ಓಡಿದ ಜನರ ಕಾಲ್ತುಳಿತಕ್ಕೆ ಅನೇಕರು ಅಸು ನೀಗಿದರೆ, ಕೆಲವರು ಕೈಕಾಲು ಮುರಿದುಕೊಂಡು ಏಳಲಾರದ ಸ್ಥಿತಿಯಲ್ಲಿ ರೋದಿಸುತ್ತಿದ್ದರು.

ಅದನ್ನೆಲ್ಲ ನೋಡುತ್ತಿದ್ದಂತೆ ಜ್ಞಾನ ತಪ್ಪಿ ಗೋಣು ಚೆಲ್ಲಿದ ಸದಾಶಿವ ಪಿಳ್ಳೆ, ಸೊಂಟದ ಮೇಲಷ್ಟೆ ಕಡಿದು ಮರಳಲ್ಲಿ ಹೂತು ನಿಲ್ಲಿಸಿದ ವಿಗ್ರಹದಂತೆ ಕಾಣುತ್ತಿದ್ದ.

ಮೂರ್ಛೆಹೋಗಿದ್ದ ಸದಾಶಿವ ಪಿಳ್ಳೆಗೆ ಜ್ಞಾನ ಬರಲು, ಆಸ್ಪತ್ರೆಯಲ್ಲಿ ಒಂದು ವಾರವೇ ಹಿಡಿಯಿತು. ಅವನ ಎರಡು ಕಾಲುಗಳು ಸ್ವಾಧೀನ ಕಳೆದುಕೊಂಡು ನಿಶ್ಚಲವಾಗಿದ್ದುವು. ಎಚ್ಚರಗೊಂಡಾಗ ಕಣ್ಣೀರುಗರೆಯುತ್ತ ನಿಂತ ಹೆಂಡತಿ ಮಕ್ಕಳು ಮಂಜುಮಂಜಾಗಿ ಕಂಡರು. ತಾನು ಜೀವಂತವಾಗಿ ಬದುಕಿದ್ದೇನೆ ಅನ್ನುವ ಖುಷಿಗಿಂತ, ತನ್ನೆದುರೇ ಆಟಿಕೆಯಂತೆ ಕುಸಿದ ಕಟ್ಟಡದಲ್ಲಿದ್ದ ತನ್ನ ಕೆಲಸಗಾರರನ್ನು ನೆನೆದು ಕಳವಳಗೊಂಡ. ಆದ ಆಘಾತದಿಂದ ಹೊರಬರದೆ, ತುಟಿಯೆರಡು ಮಾಡಿ ಮಾತನಾಡಲಾಗದೆ ತೊದಲುತ್ತಿದ್ದರೆ, ಅವನು ಎಚ್ಚರಗೊಳ್ಳುವುದನ್ನೇ ಕಾಯುತ್ತಿದ್ದ ಪೊಲೀಸರು ಪೇಪರು, ಪೆನ್ನು ಹಿಡಿದು ಪ್ರಶ್ನಿಸಲು ಪ್ರಾರಂಭಿಸಿದರು.

''ಬಿಲ್ಡಿಂಗ್ ಓನರ್ ಹೇಗೆ ಪರಿಚಯ ?''

''ಪರಿಚಿತ ಕಂಟ್ರಾಕ್ಟರ್‌ರಿಂದ.''

''ಒಟ್ಟು ಎಷ್ಟು ಜನ ಕೆಲ್ಸ ಮಾಡ್ತಿದ್ರಿ ?''

''ತೊಂಭತ್ತರಿಂದ ತೊಂಭತ್ತೈದು''

''ಎಷ್ಟು ದಿನದಿಂದ ಕೆಲ್ಸ ಮಾಡ್ತಿದ್ರಿ ?''

''ಹತ್ತು ದಿನ''

''ಕಟ್ಟಡ ಕುಸಿದದ್ದು ಏಕೆ ?''

''...............''

''ಕಟ್ಟಡದ ಕಳಪೆ ಕಾಮಗಾರಿಯಲ್ಲಿ ನಿಮ್ಮ ಕೆಲಸದ ಪಾಲೆಷ್ಟು ?''

''...............''

''ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡದೆ ಮೌನವಾಗಿದ್ರೆ ಓನರ್ನ, ಇಂಜಿನಿಯರ್‌ಗಳನ್ನು ಅರೆಸ್ಟ್ ಮಾಡ್ದಾಗೆ ನಿಮ್ಮನ್ನು ಮಾಡ್ಬೇಕಾಗುತ್ತೆ!'' ಎಂದು ಸಬ್ ಇನ್ಸ್‌ಪೆಕ್ಟರ್ ಗದರಿದಾಗ ಸದಾಶಿವ ಪಿಳ್ಳೆ ತಬ್ಬಿಬ್ಬಾದ.

ಮೂಲ ಕಟ್ಟಡವೇ ಇಡಿಯಾಗಿ ಕುಸಿದಿರುವಾಗ, ಟೈಲ್ಸ್ ಕೆಲಸವೆಂದು ಮುಗಿತಾಯದ ಹಂತದಲ್ಲಿ ಬಂದಿರುವ ತನಗೂ ಕುಸಿತಕ್ಕೂ ಸಂಬಂಧವಿಲ್ಲವೆಂದು ಎಷ್ಟು ಬಿಡಿಸಿ ಹೇಳಿದರೂ, ''ನೀವ್ಹೇಳೋದು ಕನ್ವಿನ್ಸಿಂಗ್ ಆಗಿಲ್ಲ, ಮತ್ತೆ ಬರುತ್ತೇವೆ'' ಎಂದು ಹೇಳಿ, ''ನಿಮ್ಮ ಕಡೆಯವರು ಯಾರಾದರೂ ಇದ್ದರೆ ಸ್ಟೇಷನ್‌ಗೆ ಕಳ್ಸಿ, ಅವರಿಗೆ ಎಲ್ಲಾ ಸಮಾಚಾರ ತಿಳಿಸ್ತೀವಿ'' ಎಂದು ಹೇಳಿ ಹೊರಟುಹೋದರು.

ಘಟನೆ ನಡೆದಂದಿನಿಂದ ಮೊದಲ ಮಗ ಸುರೇಶ ಕಾಲೇಜಿಗೆ ಹೋಗದೆ, ಬದುಕುಳಿದಿದ್ದ ಕಾರ್ಮಿಕರನ್ನು ಸರ್ಕಾರ ತಾತ್ಕಾಲಿಕವಾಗಿ ಇರಿಸಿದ್ದ ಪುನರ್ವಸತಿ ಕೇಂದ್ರ, ಪೊಲೀಸ್ ಸ್ಟೇಷನ್, ಆಸ್ಪತ್ರೆಯೆಂದು ಓಡಾಡಿಕೊಂಡಿದ್ದನ್ನು ಕೇಳಿ ಅವನ ಓದು ಹಾಳಾಯಿತೆಂದು ತನ್ನನ್ನೇ ತಾನು ಶಪಿಸಿಕೊಂಡ. ಅದಕ್ಕಿಂತಲೂ ಹೆಚ್ಚಿನ ನೋವು, ದುಃಖ ಅವನಿಗೆ ಆದದ್ದು ತನ್ನ ಕೆಲಸಗಾರರಲ್ಲಿ ಒಟ್ಟು ನಲವತ್ತಾರು ಮಂದಿ ಸತ್ತು, ಹದಿನೆಂಟು ಜನರು ಕೈ, ಕಾಲುಗಳನ್ನು ಕಳೆದುಕೊಂಡಿದ್ದರ ಬಗ್ಗೆ.

ಮೂರು ತಿಂಗಳ ನಂತರ ಸದಾಶಿವ ಪಿಳ್ಳೆ ಕೋಲೂರಿಕೊಂಡು ನಡೆಯುವಂತಾದರೂ ದೇಹದಲ್ಲಿ ಮೊದಲಿನ ಚೈತನ್ಯವಿರಲಿಲ್ಲ. ಪುನರ್ವಸತಿ ಕೇಂದ್ರಕ್ಕೆ ಬಂದರೆ ಅಲ್ಲಿದ್ದ ನೂರಾರು ಜನ ತಮ್ಮ ಮನೆಯ ದುಡಿಯುವ ಕೈಗಳನ್ನು ಕಳೆದುಕೊಂಡ ಹೆಂಗಸರು, ಮಕ್ಕಳು ಅವನನ್ನು ಮುತ್ತಿಕೊಂಡು ಗೋಳಿಟ್ಟರು. ನಡುನೀರಿನಲ್ಲಿ ಕೈಬಿಡುವುದಿಲ್ಲವೆಂದು ಸದಾಶಿವ ಪಿಳ್ಳೆ ಅವರಿಗೆ ಸಾಂತ್ವನ ಹೇಳಿ, ಅಷ್ಟೂ ತನ್ನ ಜನರಿಗೆ ದಿನಕ್ಕೆರಡು ಹೊತ್ತು ಹೊಟ್ಟೆ ತುಂಬಿಸುವ ವ್ಯವಸ್ಥೆಯನ್ನು ಮಾಡಿದ. ತಿಂಗಳುಗಟ್ಟಲೆ ನಡೆದ ಈ ಕೈಂಕರ್ಯದಿಂದ ಅವನ ದುಡಿಮೆಯ ಗಳಿಕೆ ಕರಗಲು ಪ್ರಾರಂಭವಾಯಿತು.

ಇದಕ್ಕಿಂತ ಹೆಚ್ಚಾಗಿ ಅವನಲ್ಲಿದ್ದ ಬ್ಯಾಂಕ್ ಉಳಿತಾಯ, ಚರಾಸ್ತಿಗಳು ಕಾಣೆಯಾಗತೊಡಗಿದ್ದು ಪೊಲೀಸರೆಂಬ ಖಾಕಿ ದುಂಡಾವರ್ತಿಗಳಿಗೆ ತೆತ್ತ ಅನವಶ್ಯಕ ದಂಡದಿಂದ. ನಿರಂತರವಾಗಿ ಇಲ್ಲಸಲ್ಲದ ಪ್ರಶ್ನೆಗಳನ್ನು ಕೇಳಿ ಕಿರುಕುಳ ಕೊಡುತ್ತಿದ್ದ ಪೊಲೀಸರು, ಸದಾಶಿವ ಪಿಳ್ಳೆಯನ್ನು ದುರಂತದ ವಿಚಾರಣೆಯಲ್ಲಿ ಪ್ರತ್ಯಕ್ಷ ಸಾಕ್ಷಿಪಟ್ಟಿಯಲ್ಲಿ ಆಗಲೇ ಸೇರಿಸಿಕೊಂಡಿದ್ದರು. ಜೊತೆಗೆ, ಕೇಳಿದಷ್ಟು



ಕೊಡದಿದ್ದರೆ ಆಪಾದನೆಗಳ ಪಟ್ಟಿ ಮಾಡಿ ಅಪರಾಧಿಯನ್ನಾಗಿ ಮಾಡುತ್ತೇವೆಂದು ಬೆದರಿಸಿ, ಪದೇಪದೇ ಪೀಡಿಸಿ ಸಾವಿರಗಟ್ಟಲೆ ಹಣ ವಸೂಲಿ ಮಾಡುತ್ತಿದ್ದರು.

ಇದರೊಂದಿಗೆ ಬೇರೊಂದು ತೆರನಾದ ಕೋಟಲೆ ಶುರುವಾದದ್ದು ಸ್ಥಳೀಯ ರಾಜಕಾರಣಿಗಳ ಬಾಲಂಗೋಚಿಗಳೆಂದು ಹೇಳಿಕೊಂಡು, ದಿನಕ್ಕೊಂದು ಗುಂಪು ಕಟ್ಟಿಕೊಂಡು ಬರುವ ಪುಂಡರಿಂದ.

''ಯಾರ್ರೀ ಸದಾಶಿವ ಪಿಳ್ಳೆ ?''

''ನಾನೇ, ಹೇಳಿ ಏನಾಗ್ಬೇಕಿತ್ತು ?''

''ನಮ್‌ಗೇನೂ ಆಗ್ಬೇಕಾಗಿಲ್ಲ! ಆಗಬೇಕಿರೋದು ನಿಮಗೆ... ಸಹಾಯ, ನಮ್ಮ ಪಾರ್ಟಿ ಲೀಡರಿಂದ !''

''ಯಾವ್ ತರ ಸಹಾಯ ?''

''ಇದೇನ್ ಹಿಂಗ್ ಮಾತಾಡ್ತೀರಾ ? ಏನೂ ಗೊತ್ತಿಲ್ಲದ ಹಾಗೆ! ನಮ್ ಲೀಡರ್ರು ನಿಮಗೋಸ್ಕರ ಆಸೆಂಬ್ಲೀಲಿ ಕಾದಾಡಿ, ಸರ್ಕಾರದಿಂದ ಸತ್ತೋರಿಗೆ ಐವತ್ತು ಸಾವಿರ, ಕೈಕಾಲು ಮುರ್ಕೊಂಡೋರಿಗೆ ಐದು ಸಾವಿರ ಪರಿಹಾರ ಕೊಡಸವ್ರೆ. ಅದು ಗೊತ್ತಿಲ್ವ ?''

''ಅದರಲ್ಲಿ ಸಹಾಯ ಏನ್ ಬಂತು ? ಬಡಜನರು ಪ್ರಾಣ ಕಳ್ಕೊಂಡವ್ರೆ, ಅದ್ಕೆ ಸರ್ಕಾರ ಕೊಡ್ತಿದೆ. ಇಷ್ಟಕ್ಕೂ ಅವ್ರು ಕೊಡ್ತೀರೋ ಅಲ್ಪ ಹಣ ಒಬ್ಬ ದುಡ್ಯೋ ಮನುಷ್ಯನಿಗೆ ಸಮನಾಗುತ್ತ ?''

''ಏನ್ರೀ ತಲೆಯೆಲ್ಲಾ ಹರಟ್ತೀರಾ ? ನೀವ್ ದುಡ್ಡು ಮಾಡೋಕ್ಕೋಗಿ ಸತ್ರೆ ಗೌರ್ಮೆಂಟು ಯಾಕ್ರೀ ಪರಿಹಾರ ಕೊಡ್ಬೇಕು ? ಅದೆಲ್ಲಾ ಮಾತ್ಬೇಡ... ಬರೋ ದುಡ್ಡಲ್ಲಿ ಮೂವತ್ತು ಪರ್ಸೆಂಟು ನಮ್ಗೆ ಕೊಡ್ಬೇಕು. ಅದೆಲ್ಲಾ ನಾವೊಬ್ಬರೇ ತಿನ್ನಲ್ಲ. ಪೊಲೀಸ್ನೋರು ಅವ್ರು ಇವ್ರು ಅಂತ ಐದಾರು ಬಾಯಿಗಳಿವೆ. ನಮ್ಮನ್ನ ಬಿಟ್ಟು ಬೇರೆಯವರ ಹತ್ರ ಏನಾದ್ರೂ ಡೀಲ್ ಮಾಡಿದ್ರೆ, ಸಿಗೋ ದುಡ್ಡಿಗೂ ಕಲ್ ಹಾಕ್ಕೋತಿರಾ !'' ಎಂದು ಬಂದ ದಾರಿಗೆ ಸುಂಕವಿಲ್ಲದಿದ್ದರೆ ಹೇಗೆಂದು ಕುಡಿಯಲಿಕ್ಕೆಂದು ಒಂದಷ್ಟು ಹಣ ಪೀಕಿಸಿ ತಮ್ಮ ನಾಯಕರಿಗೆ ಜಯಕಾರ ಹಾಕುತ್ತ ಹೋಗುತ್ತಿದ್ದರು.

ಇವಿಷ್ಟು ಕಟ್ಟಡದ ದುರಂತಕ್ಕೆ ಸಂಬಂಧಪಟ್ಟ ಕತೆಯಾದರೆ, ಅತ್ತ ಬೇರೆಬೇರೆ ಜಾಗಗಳಲ್ಲಿ ನಡೆಯುತ್ತಿದ್ದ ಕಟ್ಟಡದ ಕೆಲಸಗಳು ಸದಾಶಿವ ಪಿಳ್ಳೆಯ ಅನುಪಸ್ಥಿತಿಯಲ್ಲಿ ಸ್ಥಗಿತಗೊಂಡಿದ್ದವು. ಅವುಗಳ ಮಾಲೀಕರು ಒಂದಷ್ಟು ವಾರ ತಡೆದು, ನಂತರ ಕಟ್ಟಡ ಕುಸಿತ ದುರಂತದಲ್ಲಿ ಸದಾಶಿವ ಪಿಳ್ಳೆಯ ಪಾತ್ರವಿದೆಯೆಂದು ತಾವೇ ಕಪೋಲ ಕಲ್ಪಿಸಿ, ಅಲ್ಲಿಯವರೆಗೂ ಮಾಡಿದ್ದ ಕೆಲಸದ ಬಿಲ್ಲುಗಳಿಗೆ ಪಂಗನಾಮ ಹಚ್ಚಿದ್ದರು. ಕಳೆದ ಅದೆಷ್ಟೋ ವರುಷಗಳಿಂದ ಕೂಡಿಟ್ಟಿದ್ದ ಕಾರ್ಮಿಕರ ಅಖಂಡ ಗುಂಪುಗಳು ಬೇರೆಡೆ ಕೆಲಸ ಅರಸಿಕೊಂಡು ಚದುರಿಹೋಗಿದ್ದವು.

ದಿನವೂ ಬರುತ್ತಿದ್ದ ಇಂಥ ಕೆಟ್ಟ ಸಮಾಚಾರಗಳನ್ನು ಕೇಳುವುದನ್ನು ಬಿಟ್ಟು ಬೇರೆ ಏನೂ ಮಾಡಲಾಗದೆ ಸದಾಶಿವ ಪಿಳ್ಳೆ ಕಾಣದ ಕೈ ಬೀಸಿದ ಬಲೆಯಲ್ಲಿ ಸಿಕ್ಕು ದುರ್ವಿಧಿಯನ್ನು ಶಪಿಸುತ್ತ ಕೈಚೆಲ್ಲಿ ಕುಳಿತಿದ್ದ.

ಕೋರ್ಟು ಕಛೇರಿಗಳ ವಿಚಾರಣೆ ಮುಗಿದು, ಪೊಲೀಸರಿಂದ ಮುಕ್ತಿ ಹೊಂದಿ ಪರಿಹಾರದ ಹಣ ಬಂತೆಂಬ ಹೊತ್ತಲ್ಲಿ, ಮಧ್ಯವರ್ತಿಗಳೆಂಬ ಖಾದಿ ಪುಂಡರು ರೂಪಾಯಿಯಲ್ಲಿ ಹನ್ನೆರಡಾಣೆ ನುಂಗಿ ಉಳಿದಿದ್ದನ್ನು ದಾನವೆಂಬಂತೆ ಕೈಗಿಡಲು ನೋಡಿದರು. ಅಲ್ಲಿಯವರೆಗೂ



ಆದ ಸರಣಿ ಆಘಾತಗಳಿಂದ ಜರ್ಜರಿತನಾಗಿದ್ದ ಸದಾಶಿವ ಪಿಳ್ಳೆ ಸಿಡಿದೆದ್ದು ಧಿಕ್ಕರಿಸಿ ನಿಂತ.

ತನಗೆ, ತನ್ನವರಿಗಾದ ಕಷ್ಟಕಾರ್ಪಣ್ಯಗಳನ್ನು ವಿವರಿಸಿ ಸರ್ಕಾರಕ್ಕೆ ಪತ್ರ ಬರೆದು, ಒಂದು ಕಾಸನ್ನೂ ಮುಟ್ಟದೆ ಪರಿಹಾರ ಧನವನ್ನು ಸಾರಾಸಗಟಾಗಿ ತಿರಸ್ಕರಿಸಿದ. ಹಾಗೆ ಮಾಡಿದ್ದರಿಂದ, ಕಣ್ಣೀರಿಡುವ ನೊಂದವರ ಎಂಜಲನ್ನು ನೆಕ್ಕಲೂ ಹೇಸದ ಭ್ರಷ್ಟರಲ್ಲಿ ಅಂಥ ಬದಲಾವಣೆಯೇನೂ ಆಗಲಿಲ್ಲ. ಹೆಚ್ಚೆಂದರೆ ನ್ಯೂಸ್‌ಪೇಪರಲ್ಲಿ ಒಂದಷ್ಟು ಸುದ್ದಿ ಪ್ರಕಟವಾಗಿ, ವಿಧಾನಸಭೆಯಲ್ಲಿ ವಿರೋಧ ಪಕ್ಷದವರು ಸರ್ಕಾರದ ವಿರುದ್ಧ ಕೂಗಾಡಿ ಒಂದಷ್ಟು ಬಾಯಿತೀಟೆ ತೀರಿಸಿಕೊಂಡರು.

ಕೊನೆಗೆ ಎಲ್ಲವನ್ನು ಕಳೆದುಕೊಂಡು, ಉಳಿದಿದ್ದ ತನ್ನ ಹೆಂಡತಿಯ ಕನಸಿನ ಅರಮನೆಯನ್ನು ಮಾರುವ ಕಡು ನಿರ್ಧಾರಕ್ಕೆ ಬಂದ. ಕಟ್ಟಡ ಸಾಮಗ್ರಿ, ಉಪಕರಣಗಳನ್ನು ಇರಿಸಲು ಖರೀದಿಸಿದ್ದ ಜಾಗದಲ್ಲಿ ತನ್ನ ನಂಬಿದ್ದ ಜನರಿಗೆ ಮಾರಿ ಬಂದ ಹಣದಲ್ಲಿ ಮನೆ ಕಟ್ಟಿಕೊಟ್ಟು, ತಾನು ಅವರೊಂದಿಗೆ ಉಳಿದದ್ದು ಈಗ ಇತಿಹಾಸ.

''ಕಟ್ಟಡವನ್ನು ಬೇಗ ಮುಗಿಸಿ ಹಣ ಮಾಡುವ ಧಾವಂತದಲ್ಲಿ ನಿರ್ಮಾಣದ ನಿಯಮಾವಳಿ, ಗುಣಮಟ್ಟಗಳನ್ನೆಲ್ಲ ಗಾಳಿಗೆ ತೂರಿ ಕಳಪೆ ಕಾಮಗಾರಿ ಕೆಲಸ ನಡೆದಿದ್ದ ಕಟ್ಟಡದಲ್ಲಿ, ಹಗಲು ಕಂಡ ಬಾವಿಗೆ ಹಗಲೇ ಹೋಗಿ ಬಿದ್ದೆ. ಯಾರದೋ ಸ್ವಾರ್ಥಕ್ಕೆ ಬಲಿಪಶುವಾದೆ. ಇದು ಮನುಷ್ಯನ ಕಾಟವಲ್ಲದೆ ವಿಧಿಯಾಟವೆಲ್ಲಿಂದ ಬಂತು ?'' ಎಂದೆಲ್ಲಾ ಚಿಂತಿಸತೊಡಗಿದ ಸದಾಶಿವ ಪಿಳ್ಳೆ.

ಆದದ್ದು ಆಗಿ ಹೋಗಿದೆ. ಸದ್ಯಕ್ಕೆ ಲೇಬರ್ ಕಾಂಟ್ರಾಕ್ಟ್ ಕೆಲಸದಿಂದ ಎರಡು ಹೊತ್ತು ಊಟಕ್ಕೆ, ಕಣ್ತುಂಬ ನಿದ್ದೆಗೆ ತೊಂದರೆಯಿಲ್ಲ. ಮಗಳ ಮದುವೆ ಮಾಡಿಯಾಗಿದೆ. ಇನ್ನು ಕಾಲೇಜಿಗೆ ಎಳ್ಳು ನೀರು ಬಿಟ್ಟು ಖಾಸಗಿ ಕಂಪನಿಯಲ್ಲಿ ದುಡಿಯುತ್ತಿರುವ ಮಗನಿಗೆ ಮದುವೆ ಮಾಡಿದರೆ ಸಾಕೆಂದು ನಿಟ್ಟುಸಿರುಬಿಟ್ಟ.

ಸ್ನಾನ ಮುಗಿಸಿ ತಿಂಡಿ ತಿನ್ನುವ ಹೊತ್ತಿಗೆ ಸೈಟಿನಿಂದ, ಪೀಣ್ಯದಲ್ಲಿ ನಡೆಯುತ್ತಿರುವ ಕಾರ್ಖಾನೆ ಕಟ್ಟಡದ ಇಂಜಿನಿಯರ್ ಮತ್ತು ಗುತ್ತಿಗೆದಾರ ರವಿಕಿರಣ್ ಫೋನು ಮಾಡಿದ್ದರು.

''ಹಲೋ ಸಾರ್, ಹೇಳಿ.''

''ಸದಾಶಿವ್, ಸ್ವಲ್ಪ ಬೇಗ ಸೈಟಿಗೆ ಬನ್ನಿ.''

''ಈಗ್ಲೆ ಹೊರಟೆ. ಏನ್ ಸಮಾಚಾರ ಸಾರ್ ?''

''ಆಕ್ಸಿಡೆಂಟ್ ಆಗಿದೆ. ನೀವು ಯಾವುದಕ್ಕೂ ಬೇಗ ಬನ್ನಿ ಎಂದು ಹೇಳಿ ತರಾತುರಿಯಲ್ಲಿ ಫೋನು ಇಟ್ಟರು.

''ಆಕ್ಸಿಡೆಂಟಾ ! ಇದ್ಯಾವ ಕರ್ಮ ! ಎಲ್ಲಾ ಸರಿ ಯಾಯಿತು ಅನ್ನುವಾಗ ಮತ್ತೆ ಬಂದು ಸುತ್ತಿಕೊಳ್ಳುತ್ತಿದೆ'' ಎಂದು ತಿನ್ನುತ್ತಿದ್ದವನು ಅರ್ಧಕ್ಕೆ ಕೈತೊಳೆದು ಹೊರಟ.

ಪೀಣ್ಯದಲ್ಲಿ ಔಷಧ ಕಾರ್ಖಾನೆಗಾಗಿ ಕಟ್ಟುತ್ತಿದ್ದ ಕಟ್ಟಡದಲ್ಲಿ ಟೆಕ್ನಿಕಲ್ ಡಿಸೈನ್ ತಪ್ಪಾಗಿ ಅಥವಾ ಕಾಂಕ್ರೀಟ್ ಭಾರಕ್ಕೆ ಸರ್ವೆಮರಗಳೇನಾದರೂ ಲಟಲಟನೆ ಮುರಿದು ಅಟ್ಟಣೆ ಕುಸಿದು ಭಾವಣೆ ನೆಲ ಕಚ್ಚಿರಬಹುದೇ, ಎಂಬ ವಿಚಾರ ಲೇಬರ್ ಕಾಂಟ್ರಾಕ್ಟರ್ ಸದಾಶಿವ ಪಿಳ್ಳೆಗೆ ಕಾಡತೊಡಗಿತು.

ಸೈಟಿನತ್ತ ಬರುತ್ತಲೇ ದೂರದಲ್ಲೇ ಮೊದಲು ಕಟ್ಟಡದತ್ತ ನೋಡಿದ. ಅದು ಸುಸ್ಥಿತಿಯಲ್ಲಿದ್ದರಿಂದ ಸಮಾಧಾನ

ಗೊಂಡ. ಆದರೆ ಗಾರೆಯವರು, ಕೂಲಿಕಾರರು ಕೆಲಸ ಮಾಡದೆ ಅಲ್ಲಲ್ಲಿ ಗುಂಪುಕಟ್ಟಿ ನಿಂತಿದ್ದರೆ, ಪಕ್ಕದಲ್ಲೇ ಇದ್ದ ಕಾರ್ಖಾನೆಯ ಹಳೆ ಕಟ್ಟಡದ ಹೊರಗಡೆ ಸಮವಸ್ತ್ರ ಧರಿಸಿದ್ದ ಕಾರ್ಮಿಕರೂ ಶಿಸ್ತಿನಿಂದ ಸಾಲಾಗಿ ಶಾಲಾಮಕ್ಕಳಂತೆ ನಿಂತಿದ್ದರು.ಎತ್ತರದ ಜಾಗದಲ್ಲಿ ನಿಂತಿದ್ದ ಕಾರ್ಖಾನೆಯ ಜನರಲ್ ಮ್ಯಾನೇಜರ್ ಭಾಷಣ ಮಾಡುವವನಂತೆ ಏನನ್ನೋ ಹೇಳುತ್ತಿದ್ದ.

''....ನಿಮಗೆಲ್ಲ ತಿಳಿದಂತೆ ಕಳೆದ ಮೂರು ತಿಂಗಳ ಹಿಂದೆ ಅವರು ಇಂಗ್ಲೆಂಡಿನಿಂದ ಬಂದಾಗ ಹೊಸ ಬಿಲ್ಡಿಂಗ್‌ನ ಪ್ರೊಗ್ರೆಸ್‌ನ ಬಗ್ಗೆ ಬಹಳ ಸಂತೋಷ ಪಟ್ಟಿದ್ದರು. ನಮ್ಮ ಕಂಪನಿಯ ಹೆಸರನ್ನು ಇನ್ನೂ ಹೆಚ್ಚು ಎತ್ತರಕ್ಕೆ ಕೊಂಡೊಯ್ಯುವ ಆಸೆ ಅವರಿಗಿತ್ತು. ಎಲ್ಲ ಅಂದುಕೊಂಡಂತೆ ನಡೆದಿದ್ದರೆ ಇನ್ನು ಮೂರ್‍ನಾಲ್ಕು ತಿಂಗಳಲ್ಲಿ ಹೊಸ ಬಿಲ್ಡಿಂಗ್‌ನ ಕೆಲ್ಸ ಮುಗಿದು, ಅವರು ತಂದೆಯ ಕನಸಂತೆ ಅವರ ಸ್ಥಾನದಲ್ಲಿ ಕುಳಿತು ಕಂಪನಿಯನ್ನು ಮುಂದುವರಿಸಬೇಕಿತ್ತು. ದುರ್ದೈವವಶಾತ್ ಈಗ ನಮ್ಮೊಂದಿಗಿಲ್ಲ. ಅವರಲ್ಲಿದ್ದ ಜ್ಞಾನಸಂಪತ್ತು, ಹೊಸ ಚಿಂತನೆಗಳು ನಮಗೆ ದೊರಕದೇ ಹೋದದ್ದು ಶೋಚನೀಯ ಸಂಗತಿ. ಈ ಅಪಾರ ದುಃಖವನ್ನು ಭರಿಸುವ ಶಕ್ತಿಯನ್ನು ನಮ್ಮ ಮ್ಯಾನೇಜಿಂಗ್ ಡೈರೆಕ್ಟರ್‌ಗೆ ಆ ಭಗವಂತ ಕೊಡಲಿ ಎಂದು ದೇವರಲ್ಲಿ ಪ್ರಾರ್ಥಿಸೋಣ. ಹಾಗೆ ಅವರಿಗೆ ಮತ್ತು ಅವರೊಂದಿಗೆ ದೈವಾಧೀನರಾದ ಅವರ ಕುಟುಂಬಕ್ಕೆ ಆತ್ಮಶಾಂತಿ ಸಿಗಲಿ ಎಂದು ಪ್ರಾರ್ಥಿಸುತ್ತ, ಈಗ ಐದು ನಿಮಿಷ ಮೌನವನ್ನು ಆಚರಿಸೋಣ...''

ಸದಾಶಿವ ಪಿಳ್ಳೆಗೆ 'ಹಾಗಾದರೆ ಆಕ್ಸಿಡೆಂಟು ಸೈಟಿನಲ್ಲಿ ಆದದ್ದಲ್ಲ' ಎಂದು ದಿನಪತ್ರಿಕೆಯಲ್ಲಿ ಓದಿದ ವಿಮಾನ ದುರಂತದ ಸುದ್ದಿ ನೆನಪಿಗೆ ಬಂತು.

ರವಿಕಿರಣ್‌ನೊಂದಿಗೆ ಸದಾಶಿವ ಪಿಳ್ಳೆ ಅಂತಿಮ ದರ್ಶನಕ್ಕೆಂದು ವಿದ್ಯುತ್ ಚಿತಾಗಾರಕ್ಕೆ ಬಂದಾಗ ದೊಡ್ಡ ದೊಡ್ಡ ಕಾರುಗಳಲ್ಲಿ ಬಂದಿಳಿದ ಶ್ರೀಮಂತರ ದಂಡೇ ಅಲ್ಲಿ ನೆರೆದಿತ್ತು. ಸ್ಫುರದ್ರೂಪಿಯಾದ ಗಂಡ ಅವನಿಗೆ ತಕ್ಕ ಅನುರೂಪವತಿ ಹೆಂಡತಿ – ಇವರೀರ್ವರ ಮಧ್ಯೆ ಗೊಂಬೆಯಂತಿದ್ದ ಮುದ್ದಾದ ಪುಟ್ಟ ಕಂದ ನಿದ್ರಿಸುತ್ತಿದ್ದಂತೆ ಕಾಣುತ್ತಿದ್ದರು. ಮ್ಲಾನವದನರಾದ ಅಲ್ಲಿದ್ದವರಾರೂ ಕಣ್ಣೀರು ಹಾಕದೆ ಸುಮ್ಮನೆ ಕೈಕಟ್ಟಿ ನಿಂತಿದ್ದರು. ಆದರೆ ಮಲಗಿಸಿದ್ದ ಆ ಮೂವರನ್ನು ನೋಡುತ್ತಲೇ ಸದಾಶಿವ ಪಿಳ್ಳೆಗೆ ಕರುಳು ಕಿವಿಚಿದಂತಾಗಿ ಕಣ್ತುಂಬಿಕೊಂಡು ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದ.

ಸಂಬಂಧವಿಲ್ಲದ ಅಪರಿಚಿತನೊಬ್ಬ ಗೋಳಾಡುವುದನ್ನು ಕಂಡು ಅಲ್ಲಿದ್ದವರ ಮುಖದಲ್ಲಿ ಪ್ರಶ್ನಾರ್ಥಕ, ಆಶ್ಚರ್ಯ ಸೂಚಕ ಚಿಹ್ನೆಗಳು ಮೂಡಿದ್ದನ್ನು ಕಂಡ ರವಿಕಿರಣ್ ಸದಾಶಿವ ಪಿಳ್ಳೆಯನ್ನು ಸಂತೈಸುತ್ತ ಹೊರಗೆ ಕರೆತಂದ.

ಸಮಾಧಾನಗೊಂಡ ಮೇಲೆ, ''ಸದಾಶಿವ್, ಗಂಡ ಹೆಂಡತಿಯರನ್ನು ಇಲ್ಲೆ ಕ್ರಿಮೆಟೋರಿಯಂನಲ್ಲಿ ಸಂಸ್ಕಾರ ಮಾಡ್ತಾರೆ. ಆದ್ರೆ ಇನ್ನೂ ಹಲ್ಲು ಹುಟ್ಟದ ಮಗೂನ, ಪದ್ಧತಿ ಪ್ರಕಾರ ಮಣ್ಣು ಮಾಡ್ಬೇಕು. ನೀವೊಂದು ಕೆಲ್ಸ ಮಾಡಿ. ಹಿಂದೆ ಇರೋ ಸ್ಮಶಾನದಲ್ಲಿ ಹೂಳೋದಿಕ್ಕೆ ಚೆನ್ನಾಗಿರೋ ಜಾಗಾನ ನೋಡಿ, ಗುಂಡಿ ತೋಡ್ಸಿ ಎಲ್ಲಾ ವ್ಯವಸ್ಥೆ ಮಾಡಿ. ಅಷ್ಟರಲ್ಲಿ ಇಲ್ಲಿಯ ಕಾರ್ಯಗಳೆಲ್ಲ ಮುಗ್ಸಿ ಅಲ್ಲಿಗೆ - ಬರ್ತೇವೆ'' ಎಂದ.

ಸ್ಮಶಾನಕ್ಕೆ ಬಂದರೆ ಕಾಲಿಡಲು ಜಾಗವಿಲ್ಲದಂತೆ ಎಲ್ಲಿ ನೋಡಿದರಲ್ಲಿ ಸಮಾಧಿಗಳಿಂದ ತುಂಬಿಹೋಗಿತ್ತು. ಮಣ್ಣು ಸೇರಿದವರ ಮೇಲಿದ್ದ ಪ್ರೀತಿ, ವಿಶ್ವಾಸಕ್ಕೆ ಮತ್ತು ಸಂಬಂಧಿಕರ ಹಣದ ಯೋಗ್ಯತೆಗೆ ತಕ್ಕಂತೆ ಅಲ್ಲಿದ್ದ ಸಮಾಧಿಗಳು

# ಸಾರ್ಥಕ ಬದುಕು


**ಎ. ಗಣೇಶ**
ವಿಶ್ರಾಂತ ಪ್ರಾಂಶುಪಾಲರು, ನಂ. ೫೬
ಚಾಮರಾಜಪೇಟೆ, ಸಾಗರ - ೫೭೭೪೦೧




**ನ**ಮ್ಮ ಅಂಚೆಕಛೇರಿಯ ಎದುರುಭಾಗದಲ್ಲಿ
ಮಹಿಳಾ ಸಮಾಜದ ಕಾಂಪೌಂಡಿನಲ್ಲಿ ಬೆಳೆದಿದ್ದ
ಭಾರೀ ಮರವೊಂದು ಬೇರುಸಹಿತ ಉರುಳಿಬಿದ್ದು
ಊರಿನ ಮಂದಿಯನ್ನೆಲ್ಲಾ ಆಕರ್ಷಿಸಿಬಿಟ್ಟಿತ್ತು.

ಗುಡುಗು ಸಿಡಿಲು ಹಾಗೂ ಭಾರೀ ಬಿರುಗಾಳಿಗೆ
ಬಿದ್ದ ಧಾರಾಕಾರ ಮಳೆಗೆ ತತ್ತರಿಸಿ, ನಿಂತಿದ್ದ
ಸುಮಾರು ನೂರು ವರ್ಷಗಳ ಈ ಹಳೇಮರ
ಬೇರು ಸಹಿತ ನೆಲಕ್ಕೊರಗಿ ನಿದ್ದೆ ಮಾಡತೊಡಗಿತ್ತು.

ಸಾವಿರಾರು ಜನರಿಂದ ತುಂಬಿ ತುಳುಕುತ್ತಿದ್ದ
ಅಂಚೆ ಕಛೇರಿಯ ಕಡೆಗೆ ವಾಲಿ ನೆರಳಾಗಿದ್ದು
ಬಿರುಗಾಳಿಯ ಹೊಡೆತಕ್ಕೆ ಮಣಿದು ನಡುಗುತ್ತ
ವಿರುದ್ಧ ದಿಕ್ಕಿನಲ್ಲಿ ಬಿದ್ದು ತನ್ನತನವನ್ನು ಮೆರೆಯಿತು

ಈ ಹಳೆ ಮರ ನೂರಾರು ತಳ್ಳು ಅಂಗಡಿಗಳ,
ವಾಹನಗಳ, ನಿರಾಶ್ರಿತರ ತಂಗುದಾಣವಾಗಿತ್ತು.
ಪ್ರತಿದಿನ ಸಾವಿರಸಾವಿರ ಪಾದಚಾರಿಗಳು ಈ
ಮರದಡಿಯಲ್ಲಿ ಬಿಡುವಿಲ್ಲದೆ ಚಲಿಸುತ್ತಿದ್ದರು

ನಿಂತ ದಿಕ್ಕಿನಲ್ಲೇ ಏನಾದರೂ ನೆಲಕ್ಕುರುಳಿದ್ದರೆ
ಜೊತೆಯಲ್ಲಿ ಜನರನ್ನೂ ಬಲಿ ತೆಗಿದುಕೊಳ್ಳುತ್ತಿತ್ತು
ಯಾರನ್ನೂ ನೋಯಿಸದೆ, ಯಾರನ್ನೂ ಕಾಡದೆ
ವಿರುದ್ಧ ದಿಕ್ಕಿನಲ್ಲಿ ಬಿದ್ದು ತಣ್ಣನೆ ಮಲಗಿತ್ತು.

ಆನೆ ಇದ್ದರೂ ಸಾವಿರ ಸತ್ತರೂ ಸಾವಿರ ಎಂಬಂತೆ
ಈ ಮರದ ಬದುಕೂ ಕೂಡಾ ಸಾರ್ಥಕವಾಯಿತು
ಬಿದ್ದ ಕ್ಷಣಾರ್ಧದಲ್ಲೇ ನುಗ್ಗಿನುಗ್ಗಿ ಬಂದ ಮಂದಿ
ಕತ್ತಿ ಕೊಡಲಿಗಳಿಂದ ಕೊಚ್ಚಿ ಕಡಿಯತೊಡಗಿದರು.

ಅರಣ್ಯ ಇಲಾಖೆಯವರು ದಿಮ್ಮಿಗಳ ಕತ್ತರಿಸಿ
ಸರ್ಕಾರಿ ಡಿಪೋಗಳತ್ತ ನಾಟ ಸಾಗಿಸುತ್ತಿದ್ದರೆ
ಒಪ್ಪೊತ್ತಿನ ಗಂಜಿಗಾಯಿತೆಂದು ಹಸಿದವರು
ಸಿಕ್ಕಷ್ಟು ಕಟ್ಟಿಗೆಗಳನ್ನು ಹೊತ್ತು ನಡೆಯುತ್ತಿದ್ದರು.

ಎರಡೇ ಎರಡು ದಿನಗಳಲ್ಲಿ ಎರಡು ಲೋಡ್ ನಾಟ
ಎರಡು ಲೋಡ್ ಕಟ್ಟಿಗೆ ಎರಡು ಲೋಡ್ ಸೊಪ್ಪು
ಮಾಯವಾಗುವುದರ ಜೊತೆಗೆ ತಂಪಾದ ನೆರಳನ್ನು
ತನ್ನ ಜೊತೆಯಲ್ಲಿಯೇ ಕೊಚ್ಚಿಕೊಂಡುಹೋಯಿತು

ತನ್ನ ಸಂತತಿಯೇ ಮಾನವನಿಂದ ನಾಶವಾಗುತ್ತಿದ್ದರೂ
ಸತ್ತ ನಂತರವೂ ತನ್ನ ದೇಹದ ಅಣುಅಣುವೂ ಕೂಡಾ
ಮನುಕುಲದ ಒಳಿತಿಗೇ ಮೀಸಲಾದುದ ಕಂಡು
ತನ್ನ ಬದುಕಿನ ಸಾರ್ಥಕತೆಯ ಕಂಡು ಹೆಮ್ಮೆಪಡುತ್ತಿತ್ತು.

ವಿಧವಿಧವಾಗಿ ಕಟ್ಟಲ್ಪಟ್ಟಿದ್ದವು. ಕೆಲವು ಕೇವಲ ಮಣ್ಣುಗುಡ್ಡೆಯಾದರೆ, ಇನ್ನು ಕೆಲವು ಇಟ್ಟಿಗೆಯಲ್ಲಿ ಕಟ್ಟಿ ಸಿಮೆಂಟ್ ಪ್ಲಾಸ್ಟರಿಂಗ್ ಭಾಗ್ಯ ಪಡೆದಿದ್ದವು. ಮತ್ತೂ ಕೆಲವನ್ನು ಹೊಳೆಯುವ ಗ್ರಾನೈಟ್ ಕಲ್ಲಿನಿಂದ ದೇಹದ ಅಳತೆಗೂ ಮೀರಿ ದೊಡ್ಡದಾಗಿ ಕಟ್ಟಿ, ಅವುಗಳ ಮೇಲೆ ಜನನ ಮರಣದ ದಿನಾಂಕದೊಂದಿಗೆ ಹೆಸರನ್ನು ಕೆತ್ತಿದ್ದರು. ಮಲಗಿದ್ದವನನ್ನು ಎಬ್ಬಿಸಿ ಬೇರೊಬ್ಬನನ್ನು ಮಲಗಿಸಿ ಯಾರೆಂದೋ ಅಥವಾ ಮಲಗಿದ್ದವನು ಎದ್ದು ಬಂದು ತೊಂದರೆ ಕೊಡುತ್ತಾನೆಂದೋ ಮತ್ತೂ ಕೆಲವು ಸಮಾಧಿಗಳ ಸುತ್ತಲೂ ಬೇಲಿ ಹಾಕಿದ್ದರು. ಅಷ್ಟು ವಿಸ್ತಾರವಾದ ಸ್ಮಶಾನದಲ್ಲಿ ಗೋರಿಗಳ ಮಧ್ಯೆ ಸದಾಶಿವ ಪಿಳ್ಳೆಗೆ ಮಗುವಿಗೆಂದು ಮೂರಡಿ ಜಾಗ ಹುಡುಕಿದರೂ ಕಾಣಲಿಲ್ಲ.

ಕೈಯಲ್ಲಿ ಕೋಲು ಹಿಡಿದು ಕೊಳಕಾದ ಪಂಚೆ ಸುತ್ತಿಕೊಂಡ ಕೆದರಿದ ಕೂದಲಿನ ಮುದುಕನೊಬ್ಬ ಬಂದು, ''ಏನ್ ಸೋಮಿ, ಯಾರ್ ಸಮಾಧಿ ಹುಡುಕ್‌ತಿದ್ದೀರಾ ? ಯಾವಾಗ್ ಮಣ್ ಮಾಡಿದ್ದು ಅಂತ ಯೋಳಿ, ಅದೆಲ್ ಐತೆ ಅಂತ ನಾನ್ ತೋರುಸ್ತೀನಿ'' ಎಂದ.

''ಯಾರ ಸಮಾಧೀನೂ ಹುಡುಕ್ತಿಲ್ಲ. ದೊಡ್ಡ ಮನುಷ್ಯರ ಮನೆಯ ಮಗುವೊಂದು ತೀರ್‍ಕೊಂಡಿದೆ. ಮಣ್ ಮಾಡೋಕೆ ಸ್ವಲ್ಪ ಚೆನ್ನಾಗಿರೋ ಜಾಗ ಹುಡುಕ್ತಿದ್ದೆ'' ಎಂದು ಸದಾಶಿವ ಪಿಳ್ಳೆ ಹೇಳಿದ್ದೇ ತಡ, ಹ್ಹ... ಹ್ಹ... ಹ್ಹಾ... ಎಂದು ನಗುತ್ತ, ತನ್ನ ಕಪ್ಪು ಹಿಡಿದ ದಂತಪಂಕ್ತಿಯನ್ನು ಪ್ರದರ್ಶಿಸಿ, ಇಲ್ ಬಂದ್‌ಮ್ಯಾಗೆ ಚೆಂದ ಏನು ಅಂದ ಏನು ? ಯಾವ್ದೋ ಮಣ್ಣಲ್ಲಿ ಒಟ್ಟು ಮಣ್ಣಾಗೋದೇ! ಆದ್ರೂ ಒಂದ್ ಜಾಗ ಇಟ್ಟೀವ್ನಿ. ತೋರ್‍ಸ್ತೀನಿ, ಸುಮ್ಕೆಯಲ್ಲ, ನೂರು ರೂಪಾಯಿ ಕೊಡ್ಬೇಕು ! ಯಾಕಂದ್ರೆ ನನ್ ಹೆಸ್ರು ಹರಿಸ್ಚಂದ್ರ, ಯಾವ್ದೇ ಕೆಲ್ಸನ ಪುಗಸಟ್ಟೆ ಮಾಡಾಲ್ಲ!'' ಎಂದು ಹರಿಶ್ಚಂದ್ರ ಚಂದ್ರಮತಿಗೆ ಹಾಕಿದಂತೆ ಕಂಡೀಷನ್ ಹಾಕಿದ.

ದೂರದಲ್ಲಿದ್ದ ಸ್ಮಶಾನದ ಒಂದು ಮೂಲೆಗೆ ಕರೆತಂದು ಖಾಲಿಜಾಗ ತೋರಿಸಿದ. ಗುಂಡಿ ತೋಡುವ ಒಟ್ಟು ಕೆಲಸವನ್ನೂ ಅವನಿಗೆ ಒಪ್ಪಿಸಿ, ನಾಳೆ ಶನಿವಾರ ಬಟವಾಡೆಯ ದಿನವಾದ್ದರಿಂದ ಕೆಲಸಗಾರರಿಗೆ ಕೊಡಬೇಕಾದ ಕೂಲಿಯ ಬಗ್ಗೆ ಲೆಕ್ಕ ಹಾಕುತ್ತ ಸಮಾಧಿಯೊಂದರ ಮೇಲೆ ಕುಳಿತ. ಅಗೆತ ಮುಗಿಯುವ ಹೊತ್ತಿಗೆ ಬಿಳಿಬಟ್ಟೆ ಸುತ್ತಿದ್ದ ಮಗುವನ್ನೆತ್ತಿಕೊಂಡು ಬಂದ ಜನರು, ಗುಂಡಿಯಲ್ಲಿ ಅದನ್ನು ಮಲಗಿಸಿ ಮೂರು ಹಿಡಿ ಮಣ್ಣಾಕಿ ಹೊರಟರು.

ದಿನ ಕಳೆದಂತೆ, ಕಾರ್ಖಾನೆ ಪ್ರಾರಂಭವಾದರೂ ಕಟ್ಟಡದ ಕೆಲಸ ಆರಂಭಿಸದೇ ಇದ್ದದ್ದು ಏಕೆಂದು ಸದಾಶಿವ ಪಿಳ್ಳೆಗೆ ತಿಳಿಯಲಿಲ್ಲ.

ಬಟವಾಡೆ ದಿನ ಆ ಶನಿವಾರ ಸಂಜೆ ಕೆಲಸಗಾರರ ಜೊತೆ ಸದಾಶಿವ ಪಿಳ್ಳೆ ಸೈಟಿನಲ್ಲಿ ಕಾಯುತ್ತ ಕುಳಿತಾಗ, ತಡಮಾಡಿ ಬಂದ ರವಿಕಿರಣ್ ಫ್ಯಾಕ್ಟರಿ ರಜೆಯ ನೆಪ ಹೇಳಿ ಕೊಡಬೇಕಿದ್ದ ಹಣದಲ್ಲಿ ಅರ್ಧದಷ್ಟು ಮಾತ್ರ ಕೈಗಿಟ್ಟ.

''ವಾರಕ್ಕೊಂದು ದಿನ ದಿನಸಿ ತಂದಿಟ್ಟುಕೊಳ್ಳುವ ಕೂಲಿಕಾರರಿಗೆ ಪೂರ್ತಿ ಸಂಬಳ ಕೊಡದಿದ್ದರೆ ಹೇಗೆ ? ಹೋಗಲಿ ಪ್ರತಿ ವಾರ ಹಿಡಿದಿರುವ ಸೆಕ್ಯುರಿಟಿ ದುಡ್ಡನ್ನಾದರೂ ಕೊಡಿ'' ಎಂದರೆ ಅವನು ಮಾತಿಗೆ ಸಿಗದೆ ಅವಸರದಲ್ಲಿ ಮಾಲೀಕರ ಮನೆಗೆ ಹೋಗಬೇಕೆಂದು ಅಲ್ಲಿಂದ ಜಾಗ ಖಾಲಿಮಾಡಿದ್ದ. ಇರುವುದನ್ನೇ ಎಲ್ಲರಿಗೂ ಚೂರುಪಾರು ಹಂಚುವಾಗ ಕೆಲಸಗಾರರೆಲ್ಲರೂ ಪೂರ್ತಿ ಸಂಬಳ ಬೇಕೆಂದು ದುಂಬಾಲು ಬಿದ್ದರು. ಮನೆಯಲ್ಲಿ ಸಮಯಕ್ಕಿರಲಿ ಎಂದು ಇಟ್ಟಿದ್ದ ಹಣದಿಂದ ಸಂಬಳ ಕೊಟ್ಟು ಬರಿಗೈಯನ್ನು ಹಣೆಗಂಟಿಸಿ, ಮಾಲೀಕರ ಮನೆಯಲ್ಲಿ ಬಂದು ಕೂತ ದುರ್ವಿಧಿ ತನ್ನ ಕಬಂಧ ಬಾಹುವನ್ನು ತನ್ನತ್ತಲೂ ಚಾಚಿದೆಯೋ ಅಥವಾ ಘಟನೆಗಳೆಲ್ಲ ಇನ್ನೂ ತನ್ನ ಬುದ್ಧಿಯ ನಿಯಂತ್ರಣದಲ್ಲಿದೆಯೇ ಎಂಬ ಚಿಂತನೆಯಲ್ಲಿ ಮುಳುಗಿದ.

ಸಿಡಿಲಿನಂತೆ ಬಂದೆರಗಿದ ಮಗನ ಸಾವಿನಿಂದ ಮಾಲೀಕರು ತತ್ತರಿಸಿಹೋಗಿದ್ದರು. ವಯಸ್ಸಾದ ಕಾಲದಲ್ಲಿ ಅನಾರೋಗ್ಯದಿಂದ ಕಾರ್ಖಾನೆಯ ನಿರ್ವಹಣೆ ಕಷ್ಟವಾದಾಗ, ಮಗ ಸ್ವದೇಶಕ್ಕೆ ಬರಲು ಹೇಗೋ ಒಪ್ಪಿದ್ದ. ಅವನ ಇಷ್ಟದಂತೆ ಲಕ್ಷಾಂತರ ರೂಪಾಯಿ ಚೆಲ್ಲಿ ಕಟ್ಟಿಸುತ್ತಿದ್ದ ಹೊಸ ಕಟ್ಟಡ, ಈಗ ಅವನೇ ಇಲ್ಲದಿರುವಾಗ ಅದನ್ನು ಮುಂದುವರಿಸುವುದರಲ್ಲಿ ಯಾವುದೇ ಸಾರ್ಥಕತೆ ಕಾಣಲಿಲ್ಲ. ಆಡಳಿತವರ್ಗದೊಂದಿಗೆ ಸಮಾಲೋಚಿಸಿದವರು ಸದ್ಯಕ್ಕೆ ಹೊಸ ಕಟ್ಟಡದ ನಿರ್ಮಾಣವನ್ನು ನಿಲ್ಲಿಸಲು ನಿರ್ಧರಿಸಿದರು. ಆಗಿರುವಷ್ಟು ಕೆಲಸಕ್ಕೆ ಗುತ್ತಿಗೆದಾರ ರವಿಕಿರಣ್‌ಗೆ ಅಂತಿಮ ಬಿಲ್ಲು ಪಾವತಿಸಿ ಆ ವಿಷಯಕ್ಕೆ ತತ್ಕಾಲಕ್ಕೆ ತೆರೆ ಎಳೆಯಲು ಆದೇಶಿಸಿದರು.

ಆ ದಿನ ಕೆಲಸದ ಬಗ್ಗೆ ಮಾತನಾಡಬೇಕೆಂದು ರವಿಕಿರಣ್ ಕರೆದಾಗ - ಸದಾಶಿವ ಪಿಳ್ಳೆ ಮತ್ತೆ ಕೆಲಸ ಪುನಾರಂಭವಾಗುವುದೆಂದು ಖುಷಿಯಿಂದ ಸೈಟಿಗೆ ಬಂದ. ಆದರೆ ಕಟ್ಟಡದ ಕೆಲಸ ನಿಲ್ಲಿಸಬೇಕೆಂಬ ಮಾಲೀಕರ ನಿರ್ಧಾರ ತಿಳಿದು ಕಂಗಾಲಾದ.

''ಏನೋ, ನಮ್ಮ ಹಣೆಬರಹ ಚೆನ್ನಾಗಿಲ್ಲ!'' ಎಂದು, ಬರಬೇಕಿದ್ದ ಬಾಕಿ ಹಣದ ಬಗ್ಗೆ ಕೇಳಿದ.

''ನಿಮ್ ದುಡ್ಡು ಎಲ್ಲಿಯೂ ಹೋಗಲ್ಲ, ಸದಾಶಿವ್ ! ನಂದೇ ಫೈನಲ್ ಬಿಲ್ಲಿನ ಹಣ ಬರ್‍ಬೇಕಲ್ವ ? ಬಂದ ಕೂಡ್ಲೇ ಕೊಟ್‌ಬಿಡ್ತೀನಿ'' ಎಂದು ಫೈಲಿನೊಳಗಿಂದ ನೀಲಿನಕ್ಷೆಯೊಂದನ್ನು ತೆಗೆದು ಸದಾಶಿವ ಪಿಳ್ಳೆಗೆ ಕೊಟ್ಟ.

''ಏನ್ಸಾರ್ ಇದು ? ಹೊಸ ಕೆಲ್ಸ ಸಿಕ್ತಾ!''

''ಅಲ್ಲ! ಇದು ಓನರ್ ಮೊಮ್ಮಗುವಿನ ಸಮಾಧಿಯ ಡ್ರಾಯಿಂಗ್. ಪೂರ್ತಿಯಾಗಿ ಇಟಾಲಿಯನ್ ಮಾರ್ಬಲ್ ನಲ್ಲೇ ಆಗ್ಬೇಕು. ನಾಳೆಯಿಂದ್ಲೇ ಕೆಲ್ಸ ಶುರು ಮಾಡ್ಬಿಡಿ.''

''ಸಮಾಧಿ ಕಟ್ಟೋದಿಕ್ಕೂ ಡ್ರಾಯಿಂಗೇ! ದುಡ್ಡಿದ್ದೋರು ಏನನ್ನು ಮಾಡಿದರೂ ದೊಡ್ಡದೇ!'' ಅಂದುಕೊಂಡು, ಪೂರ್ತಿ ಬಿಡಿಸಿ ನೋಡಿದರೆ ನಿಖರ ಅಳತೆಗಳೊಂದಿಗೆ ಸುಂದರವಾದ ಕೆತ್ತನೆಗಳಿಂದ ಅಚ್ಚುಕಟ್ಟಾಗಿ ಬಿಡಿಸಿದ್ದ ಸಮಾಧಿಯ ಚಿತ್ರ. ಚಿತ್ರವನ್ನು ನೋಡಿ ಮನದಲ್ಲೇ ತಲೆದೂಗಿದ ಸದಾಶಿವ ಪಿಳ್ಳೆ, ಅಂಥ ಕಲಾಕೃತಿಯನ್ನು ವಿವರಗಳಿಲ್ಲದೆ ಹಾಗೆ ಮಾಡಲು ಸಾಧ್ಯವಿಲ್ಲವೆಂದು ಡ್ರಾಯಿಂಗ್‌ನ ಅಗತ್ಯತೆಯನ್ನು ಒಪ್ಪಿದ.

''ಇರೋ ದುಡ್ನೆಲ್ಲ ಲೇಬರ್ ಪೇಮೆಂಟ್‌ಗೆ ಅಂತ ಕೊಟ್ಟ ಮೇಲೆ ಒಂದ್ ರೂಪಾಯಿ ಕೂಡ ಇಲ್ಲ! ಇಷ್ಟು ಡಿಟೈಲ್ಸ್ ಇರೋ ಸಮಾಧೀನ ಹ್ಯಾಗ್ ಮಾಡ್ಲಿ, ಸಾರ್ ?''

''ಸದಾಶಿವ್, ಹೇಗಾದ್ರು ಅಡ್ಜೆಸ್ಟ್ ಮಾಡ್ಕೊಂಡು ಈ ಕೆಲ್ಸ ಮುಗ್ಸಿ. ಮಗನನ್ನ ಕಳಕೊಂಡು ಟೆನ್‌ಷನ್‌ಲ್ಲಿರೋರ್‌ರ ಹತ್ರ ಹೋಗಿ ಸಮಾಧಿ ಕಟ್ಟೋಕ್ಕೆ ದುಡ್ ಕೊಡಿ ಅಂತ ಹ್ಯಾಗ್ ಕೇಳೊದು ? ಅಲ್ದೆ ಇದು ಅವ್ರಿಗೆ ಸೆಂಟಿಮೆಂಟಿನ ವಿಷ್ಯ. ಈ ಕೆಲ್ಸ ಮುಗಿಸ್ದೆ ಫೈನಲ್ ಬಿಲ್ನ ಕೇಳೋಕ್ಕಾಗಲ್ಲ. ಮಾರ್ಬಲ್ ಬಗ್ಗೆ ಯೋಚ್ನೆ ಬೇಡ. ನನ್ನ ಬೇರೆ ಬಿಲ್ಡಿಂಗುಗೆಲ್ಲಾ ಗ್ರಾನೈಟ್, ಮಾರ್ಬಲ್ನ ಮಾರ್ವಾಡಿ ಸತೀಶ್ ಷಾ ಹತ್ರನೇ ತಗೊಳ್ಳೋದು. ನಾನ್ ಹೇಳಿದ್ರೆ ಸಾಲ ಕೊಡ್ತಾನೆ.''

''ಆಯಿತು ಸಾರ್, ಮಾಡ್ತೀನಿ. ಆದ್ರೆ ನನ್ನ ಹಳೇ ಕೆಟ್ಟ ಪರಿಸ್ಥಿತಿಯೆಲ್ಲ ನಿಮ್ಗೆ ತಿಳಿದದ್ದೆ! ಬಾಕಿ ಹಣ ಬೇಗ ಕೊಟ್ರೆ, ಬೇರೆ ಕಡೆ ಕೆಲ್ಸ ಹುಡ್ಕೊಳ್ಳಬಹುದು.''

''ಏನೂ ಯೋಚ್ನೆ ಮಾಡ್ಬೇಡಿ. ತಿಥಿಯೊಳಗೆ ರೆಡಿ ಮಾಡ್ಬಿಡಿ. ಫೈನಲ್ ಬಿಲ್ ಪೇಮೆಂಟ್ ಆಗೋ ಹಂಗೆ ನಾನ್ ನೋಡ್ಕೋತೀನಿ.''

ಸತೀಶ್ ಷಾ ದಾಸ್ತಾನಿಟ್ಟಿದ್ದ ಮಳಿಗೆಗೆ ಹೋದಾಗ ಮಾಲೀಕರು ಆಗಲೇ ಆಯ್ಕೆಮಾಡಿದ್ದ ಮಾರ್ಬಲ್ ಕಲ್ಲುಹಾಸನ್ನು ಹೆಚ್ಚು ಮಾತಾಡದೆ ಕೊಟ್ಟ. ಆದರೆ ಕೆಲಸಕ್ಕೆ ಬೇಕಿದ್ದ ನೂರು ಚದರ ಅಡಿ ಕಲ್ಲುಹಾಸನ್ನು ಕೊಡದೆ ಅರವತ್ತು ಚದರ ಅಡಿಗಳಷ್ಟು ಮಾತ್ರ ಕೊಟ್ಟು, ಬರುವ ಬಾಕಿ ಹಣ ಬಹಳ ಇದೆ. ಅದನ್ನು ಕೊಟ್ಟರೆ ಉಳಿದದ್ದನ್ನು ಕೊಡುವುದಾಗಿ ಕೊಕ್ಕೆ ಇಟ್ಟ.

ಸ್ಮಶಾನದಲ್ಲಿ ದಿನಾ ನಿಂತು ತನ್ಮಯತೆಯಿಂದ ಕೆಲಸ ಮಾಡುವಾಗ, ಮಣ್ಣೊಳಗೆ ಮಲಗಿದ್ದ ಆ ಪುಟ್ಟ ಕಂದ ಎದ್ದುಬಂದು ತನ್ನನ್ನು ಎತ್ತಿಕೊಳ್ಳುವಂತೆ ತನ್ನೆರಡು ಕೈಗಳನ್ನು ಮುಂದೆ ಚಾಚಿ ಕೂಗುವ ಹಾಗೆ ಭಾಸವಾಗುತ್ತಿತ್ತು. ತುಂಬ ಮುತುವರ್ಜಿಯಿಂದ ಸಮಾಧಿಯ ಕಟ್ಟುತ್ತಿದ್ದವನಿಗೆ ತಾನೊಂದು ದೊಡ್ಡ ಸ್ಮಾರಕ ನಿರ್ಮಾಣದಲ್ಲಿ ಭಾಗಿಯಾಗಿದ್ದೇನೆನ್ನುವಂಥ ಸಾರ್ಥಕತೆ ಆವರಿಸಿತ್ತು. ನಾಲ್ಕು ದಿನಗಳಲ್ಲಿ ನೀಲಿನಕ್ಷೆಯಲ್ಲಿದ್ದ ಚಿತ್ರ ನೆಲದ ಮೇಲೆ ಜೀವಂತ ಕಲಾಕೃತಿಯಾಗಿ ಮೂಡಿಬರುತ್ತಿತ್ತು.

ಅಷ್ಟರಲ್ಲಿ ತಂದಿದ್ದ ಮಾರ್ಬಲ್ ಕಲ್ಲುಹಾಸುಗಳೆಲ್ಲ ಖಾಲಿಯಾಗಿ ಮೇಲ್ಮಟ್ಟದ ಹಾಸುಗೆಗೇ ಸಾಲದಾಯಿತು. ವಿಷಯ ತಿಳಿಸಲು ರವಿಕಿರಣ್‌ಗೆ ಫೋನು ಮಾಡಿದರೆ ಅದು ಟ್ರಿನ್ ಟ್ರಿನ್ ಮಾಡುತ್ತಿತ್ತೇ ವಿನಾ ಯಾರೂ ಮಾತಾಡಲಿಲ್ಲ. ಸತೀಶ್ ಷಾ ಮಳಿಗೆಗೆ ಕೈಯಲ್ಲಿ ದುಡ್ಡಿಲ್ಲದೆ ಅಥವಾ ರವಿಕಿರಣ್ ಮಾತಿಲ್ಲದೆ ಹೋಗಿ ವಿನಂತಿಸುವುದು ಪ್ರಯೋಜನವಿಲ್ಲದ ಮಾತು.

ಯೋಚಿಸುತ್ತ ಕೂತು ತಿಥಿ ಕಾರ್ಯದ ದಿನ ಬಂದರೆ ಉಂಟಾಗುವ ಪ್ರಕ್ಷುಬ್ಧ ಚಿತ್ರಣವನ್ನು ನೆನೆದು ಸೀದಾ ಮನೆಗೆ ಬಂದವನೇ, ಹೆಂಡತಿಯ ಚಿನ್ನದ ಬಳೆ, ಸರವನ್ನು ತೆಗೆಸಿಕೊಂಡು ಅದನ್ನು ಶೇಟ್‌ನ ಗಿರವಿ ಅಂಗಡಿಯಲ್ಲಿ ಅಡವಿಟ್ಟ.

ಹಣದೊಂದಿಗೆ ಸತೀಶ್ ಷಾ ಅಂಗಡಿಗೆ ಬಂದರೆ ಅವನು ಮುಖ ಸಿಂಡರಿಸಿಕೊಂಡು, ಎಲ್ರೀ, ನಿಮ್ಮ ಇಂಜಿನಿಯರ್ ಅಡ್ರಸ್ಸೇ ಇಲ್ಲಾ? ಆ ಬಿಲ್ಡಿಂಗ್ ಈ ಬಿಲ್ಡಿಂಗ್ ಅಂತ ಎಲ್ಲಾ ಕಡೆಗೂ ಮೆಟೀರಿಯಲ್ ತಗೊಂಡ ಬಾಕಿ ಲಕ್ಷ ದಾಟಿದೆ. ಈಗ ತಗೊಂಡದ್ದಕ್ಕೆ ಮಾತ್ರ ದುಡ್ಡು ಕೊಟ್ರೆ ಉಳಿದದ್ದನ್ನು ಯಾರು ಕೊಡ್ತಾರೆ ?'' ಎಂದು ತಕರಾರು ತೆಗೆದ. ಸದಾಶಿವ ಪಿಳ್ಳೆ ಸಮಾಧಾನವಾಗಿ ತಾನಿರುವ ಪರಿಸ್ಥಿತಿ, ಹಣ ತಂದ ಬಗೆಯನ್ನು ವಿವರಿಸಿ ಸಹಾಯ ಮಾಡಲು ಕೋರಿದ.

ಆಯ್ತು. ನೀವಿಷ್ಟು ಹೇಳ್ತಿದೀರಂತ ಮೆಟೀರಿಯಲ್

ಕೊಡ್ತೀನಿ. ಆದ್ರೆ ಸಮಾಧಿ ಕೆಲ್ಸ ಮುಗಿಯೋಕೆ ಮೊದ್ಲು ಪೂರ್ತಿ ದುಡ್ಡು ಚುಕ್ತ ಆಗ್ಬೇಕು. ಇಲ್ಲಾಂದ್ರೆ ವಿಷ್ಯ ನೆಟ್ಟಗಿರೋದಿಲ್ಲ!

ಹಾವ್ವದ ಹಿಂದಿನ ದಿನ ಸ್ಮಶಾನದ ಹೊರಗೆ ಕಾರ್ಖಾನೆಯ ಜನರಲ್ ಮ್ಯಾನೇಜರ್‌ನ ಕಾರು ಬಂದು ನಿಂತದ್ದನ್ನು ಸದಾಶಿವ ಪಿಳ್ಳೆ ಗಮನಿಸಿದ. ಡ್ರೈವರ್ ಬಂದವನು, ''ಸಾಹೇಬ್ರು ಕರೀತಿದ್ದಾರೆ, ಅರ್ಜೆಂಟಾಗಿ ಬರ್ಬೇಕಂತೆ!'' ಅಂದ. ಅವರ ಬಳಿ ತನಗೇನು ಕೆಲಸ, ಅದೂ ಕಾರಲ್ಲಿ ಕರೆದುಕೊಂಡು ಹೋಗುವಂಥ ವಿಷಯ! ಸದಾಶಿವ ಪಿಳ್ಳೆಗೆ ಅಚ್ಚರಿಯಾಗಿ ಡ್ರೈವರ್‌ನ ವಿಚಾರಿಸಿದರೆ ಅವನು ತನಗೇನೂ ತಿಳಿದಿಲ್ಲವೆಂದ.

ಗಡಸು ದನಿಯಲ್ಲಿ ಜನರಲ್ ಮ್ಯಾನೇಜರ್, ''ಪ್ರತಿ ಸರ್ತಿ ರನ್ನಿಂಗ್ ಬಿಲ್ ಮಾಡೋವಾಗ ಮೆಷರ್‌ಮೆಂಟ್ನೆಲ್ಲಾ ಯಾರು ತಗೊತ್ತಿದ್ರು ?''

''ಯಾವಾಗ್ಲೂ ನಾನೇ ಅಳತೆ ತೆಗೆದು ರವಿಕಿರಣ್ ಅವ್ರಿಗೆ ಕೊಡ್ತಿದ್ದೆ. ಯಾಕೆ ಸಾರ್ ?''

''ಅಲ್ರೀ ಸದಾಶಿವ್, ಪ್ರತಿ ರನ್ನಿಂಗ್ ಬಿಲ್ಲಲ್ಲೂ ಬಾಯಿಗೆ ಬಂದಂತೆ ಮೆಷರ್‌ಮೆಂಟ್ ಬರ್ದು ಜಾಸ್ತಿ ದುಡ್ಡು ತಗೊಂಡಿದ್ದೀರಲ್ರೀ ?''

ಏಕಾಏಕಿ ಎರಗಿ ಬಂದ ಮಾತಿನಿಂದ ಅಧೀರನಾಗಿ, ತೆಗೆದ ಅಳತೆಯಲ್ಲಿ ವ್ಯತ್ಯಾಸ ಏಕಾಯಿತೆಂದು ಗಲಿಬಿಲಿಗೊಂಡ. ''ಸಾರ್, ಅಳತೆಯಲ್ಲಿ ನಾನು ಯಾವತ್ತೂ ತಪ್ಪು ಮಾಡೋಲ್ಲ! ಬೇಕಾದ್ರೆ ರವಿಕಿರಣ್ ಅವರತ್ರ ನನ್ನ ಬುಕ್ಕಿದೆ. ನೀವೇ ಚೆಕ್ ಮಾಡ್ಕೊಳ್ಳಿ. ಮಿಕ್ಕಂತೆ ಹೆಚ್ಚು ದುಡ್ಡು ತಗೊಂಡಿರೋದು ನಂಗೆ ಗೊತ್ತಿಲ್ಲ. ಅದರ ಬಗ್ಗೆ ಅವರನ್ನೇ ಕೇಳ್ಬೇಕು.''

''ಹೆಂಗ್ರಿ ಕೇಳೋದು. ರವಿ ಕಾಣ್ತಾನೇ ಇಲ್ಲಾ! ಅವರು ಕೊಟ್ಟೀರೊ ಅಡ್ರೆಸ್ಸಿನ ಮನೆಯಲ್ಲಿ ಅವರಿಲ್ಲ! ನಿಮ್ಗೇ ಗೊತ್ತಿರ್ಬೇಕು,ಅಲ್ವ ?''

''ಇಲ್ಲ ಸಾರ್, ನಂಗೆ ಗೊತ್ತಿಲ್ಲ. ಅವರ ಮನೆಗೆ ಹೋಗೋ ಅವಶ್ಯಕತೆ ಇದುವರೆಗೂ ಬಂದಿಲ್ಲ.''

ಅಷ್ಟೂ ಜನ ಒಬ್ಬರಿಗೊಬ್ಬರು ಕಿವಿಕಚ್ಚಿ ಮಾತಾಡತೊಡಗಿದರು. ನಂತರ ಜನರಲ್ ಮ್ಯಾನೇಜರ್, ''ನೋಡಿ ಇದು ಸೀರಿಯಸ್ ಮ್ಯಾಟರ್! ಆರು ಲಕ್ಷಕ್ಕಿಂತ ಜಾಸ್ತಿ ದುಡ್ಡು ತಗೊಂಡಿದ್ದಾರೆ. ಫೈನಲ್ ಬಿಲ್ಲೆಂದು ಚೆಕ್ ಮಾಡ್ತಾ, ಆರ್ಕಿಟೆಕ್ಟ್ ಕಂಡುಹಿಡಿದ್ರು. ರವಿ ಸಿಕ್ಕರೆ ಅರ್ಜೆಂಟ್ ಕಾಣೋದಿಕ್ಕೆ ಹೇಳಿ. ವಿಷ್ಯ ಎಮ್‌ಡಿ ಬಳಿಗೆ ಹೋಗದೆ ನಮ್ಮತ್ರಾನೇ ಇದೆ. ಅವರತ್ರ ಹೋದ್ರೆ ಪೊಲೀಸು, ಕೋರ್ಟ್ ಅಂತ ಆಗುತ್ತೆ...''

ಬರೆದುಕೊಟ್ಟ ಅಳತೆಗಳನ್ನು ತಿರುಚಿ ಹಣ ಲಪಟಾಯಿಸಿರುವ ರವಿಕಿರಣ್ ನಾಪತ್ತೆಯಲ್ಲಿ ಕಟ್ಟಡದ ಕೆಲಸಗಾರರಿಗೆ, ಸಮಾಧಿ ಕೆಲಸದ ಹಿಂದಿ ಹುಡುಗರಿಗೆ ಸಂಬಳವನ್ನು ಎಲ್ಲಿಂದ ತರಲಿ ? ಜೀವನದಲ್ಲಿ ಮತ್ತೊಮ್ಮೆ ಮನುಷ್ಯರನ್ನು ನಂಬಿ ಮೋಸ ಹೋದೆನೋ ಅಥವಾ ವಿಧಿ ತನಗೆ ತಿಳಿಯದಂತೆ ಮತ್ತೆ ತನ್ನಾಟ ಶುರು ಮಾಡಿದೆಯೋ... ಎಂದು ಚಿಂತಿಸುತ್ತ ಫ್ಯಾಕ್ಟರಿಯ ಗೇಟಿಗೆ ಬಂದರೆ ಸ್ಮಶಾನದಲ್ಲಿ ಸಮಾಧಿಯನ್ನು ಸ್ವಚ್ಛಗೊಳಿಸಲು ಬಿಟ್ಟಿದ್ದ ಹುಡುಗ ರಾಮು ಕಾಯುತ್ತ ನಿಂತಿದ್ದ.

''ಸ್ವಾಮಿ, ಬೇಗ ಮಸಣಕ್ಕೆ ಬನ್ನಿ. ಅಲ್ಲಿ ಕಲ್ಲಿನ ಅಂಗಡಿ ಯವರು ಬಂದು ಗಲಾಟೆ ಮಾಡ್ತಾವ್ರೆ!''




ಸತೀಶ್ ಷಾ ಇಬ್ಬರು ಸಹಚರರೊಂದಿಗೆ ಸಮಾಧಿಯ ಮೇಲೆ ಕಾಲು ಮೇಲೆ ಕಾಲಾಕಿ ಬುಸುಗುಡುತ್ತ ಕೂತಿದ್ದ. ''ನೀವು ಹೇಳಿದ್ದೇನು, ಮಾಡಿದ್ದೇನು ? ಆ ಬೋಳಿಮಗ ರವಿ ಬೇರೆ ಕಾಣ್ತಿಲ್ಲ!'' ಎಂದು ಕೂಗಾಡಿದ.

ತನ್ನ ಆತ್ಮದಲ್ಲಿ ಉಳಿದಿದ್ದ ಚೂರುಪಾರು ಶಕ್ತಿಯನ್ನೆಲ್ಲಾ ಕ್ರೋಢೀಕರಿಸಿ ಸದಾಶಿವ ಪಿಳ್ಳೆ ''ನಾಳೆ ಒಂದಿನಾ ಜಿಡಿ. ಪಾಪ! ಓನರ್ ಮಗನ ತಿಥಿಯ ಕಾರ್ಯ ಮುಗೀಲಿ. ಆಮೇಲೆ ನಾನೇ ಓನರ್ ಹತ್ರ ಮಾತಾಡಿ ಏನಾದ್ರು ವ್ಯವಸ್ಥೆ ಮಾಡ್ತೀನಿ'' ಎಂದು ಅಂಗಲಾಚಿದ. ಆ ಮಾತಿಗೆ ಅವನು ಮತ್ತಷ್ಟು ಉರಿದೆದ್ದು ''ನಿಮ್ ಓನರ್ ಹತ್ರ ಮಾತಾಡಿ ನಿಮ್ ಬಿಲ್ಡಿಂಗ್ ದುಡ್ಡು ಕೊಟ್ರೆ, ಬೇರೆ ಕಡೆ ತಗೊಂಡ್ ಹೋಗಿರೋದಿಕ್ಕೆ ಯಾವ್ ನನ್ಮಗ ಕೊಡ್ತಾನೆ. ಅದೆಲ್ಲಾ ಗೊತ್ತಿಲ್ಲ. ಇವತ್ತೇ ನಂಗೆ ದುಡ್ಡು ಬೇಕು. ಇಲ್ಲಾಂದ್ರೆ ಒಂದ್ ದೊಡ್ಡ ಸುತ್ತಿ ತಗೊಂಡು ಬಂದು ಈ ಸಮಾಧೀನ ಒಡೆದು ಚೂರ್ ಚೂರ್ ಮಾಡ್ಬಿಡ್ತೀನಿ!'' ಎಂದು ಸಮಾಧಿಗೆ ಕಾಲಿನಿಂದ ಒದ್ದು ಹೊರಟುಹೋದ.

ಹಣವನ್ನು ಕಳೆದುಕೊಂಡ ಹೊಟ್ಟೆಉರಿಗೆ ಹೇಳಿದಂತೆ ಮಾಡಲು ಹೇಸದ ಉರಿಸಿಂಗಿ ಸತೀಶ್ ಷಾನ ಬೆದರಿಕೆಯನ್ನು ಉದಾಸೀನ ಮಾಡುವಹಾಗಿರಲಿಲ್ಲ. ಸ್ಮಶಾನದ ಕಾವಲುಗಾರ ಹರಿಶ್ಚಂದ್ರನಿಗೆ, ರಾತ್ರಿ ಸಮಾಧಿಯ ಬಳಿ ಇರು ಎಂದು ಹೇಳೋಣವೆಂದರೆ ಕಾಂಚಾಣವಿಲ್ಲದಿದ್ದರೆ ಅವನು ಕ್ಯಾರೇ ಅನ್ನುವವನಲ್ಲ. ಕೊನೆಗೆ ಸದಾಶಿವ ಪಿಳ್ಳೆ ತಾನೇ ರಾತ್ರಿಯೆಲ್ಲ ಸಮಾಧಿಯನ್ನು ಕಾಯುವುದೆಂದು ನಿರ್ಧರಿಸಿದ.

ಆ ದಿನ ಸ್ಮಶಾನಕ್ಕೆ ಮದುವೆಯ ಮನೆಯ ಸಂಭ್ರಮ ಬಂದಿತ್ತು. ಬೆಳಿಗ್ಗಿನಿಂದಲೇ ಒಂದೊಂದಾಗಿ ದೊಡ್ಡದೊಡ್ಡ ಕಾರುಗಳು ಬಂದು ನಿಲ್ಲತೊಡಗಿದವು. ಗರಿಗರಿ ಉಡುಪು ತೊಟ್ಟು, ಕೈಯಲ್ಲಿ ಪ್ಲಾಸ್ಟಿಕ್ ಮುಚ್ಚಿದ್ದ ಬಣ್ಣಬಣ್ಣದ ಹೂಗುಚ್ಛ, ಹಾರಗಳನ್ನು ಹಿಡಿದ ಶ್ರೀಮಂತರು ದಂಡು ಸ್ಮಶಾನಕ್ಕೆ ಬರತೊಡಗಿತು. ಪುರೋಹಿತನೊಬ್ಬ ಮತ್ತೊಂದು ಕಾರಿನಿಂದ ಇಳಿದುಬಂದ.

ಹೊಳೆಯುತ್ತಿದ್ದ ಹಾಲುಬಣ್ಣದ ಮಾರ್ಬಲ್ ಕಲ್ಲಿನ ಚಿತ್ತಾರವ ಸಮಾಧಿಯ ಸುತ್ತ ಶಿಸ್ತಿನಿಂದ ಎಲ್ಲರೂ ನೆರೆಯುತ್ತಿದ್ದಾಗ, ಎಲ್ಲರಲ್ಲೂ ಎಂಥದೋ ಮುಜುಗರ, ಕಸಿವಿಸಿ. ಅದದ್ದೇನೆಂದರೆ ರಾತ್ರಿಯೆಲ್ಲ ಸಮಾಧಿ ಕಾಯುತ್ತ ಸದಾಶಿವ ಪಿಳ್ಳೆ ಹಾಗೆ ಅದರ ಮೇಲೆ ಮಲಗಿ ನಿದ್ರಿಸಿದ್ದ.

ಮಡಿಯುಟ್ಟ ಪುರೋಹಿತ ತನ್ನಗೆಲ್ಲಿ ಮೈಲಿಗೆಯಾಗುವುದೋ ಎಂದು ಹೆದರುತ್ತ ದೂರದಿಂದಲೇ ''ರ್ರೀ... ಯಾರ್ರೀ ಅದು!... ಏಳ್ರೀ! ಮಲಗೋಕ್ಕೆ ಬೇರೆಲ್ಲೂ ಜಾಗ ಸಿಗಲಿಲ್ವ! ಸ್ಮಶಾನ... ಅದೂ ನಮ್ ಸಮಾಧಿನೇ ಬೇಕಾಯ್ತ?... ಎದ್ದೇಳ್ರೀ...'' ಎಂದು ಜೋರಾಗಿ ಕೂಗಿದರೂ, ಅವನು ಜಪ್ಪಯ್ಯ ಅನ್ನಲಿಲ್ಲ. ಅಷ್ಟರಲ್ಲಿ ಡ್ರೈವರ್ ಹೋಗಿ ಹರಿಶ್ಚಂದ್ರನನ್ನು ಕರೆತಂದ. ಅವನು ಹತ್ತಿರ ಬಂದು, ''ಎದ್ದೇಳಪ್ಪೋ, ಬೆಳಗಾಯ್ತು. ರಾತ್ರಿ ಮನೇಲಿ ಹೆಂಡ್ತೀ ಕಾಟ ಅಂತ ಮನೆಗೇ ಹೋಗ್ದೆ ಇಲ್ಲೇ ಮಲಗಿಬಿಡೋದಾ!'' ಎಂದು ಅಲುಗಾಡಿಸಿದ.

ಇಡಿಯಾಗಿ ಸಮಾಧಿಯನ್ನು ತಬ್ಬಿಕೊಂಡಂತೆ ಎರಡು ಕೈಗಳನ್ನು ಎರಡು ಬದಿಯಲ್ಲಿ ನೆಲಕ್ಕೆ ಇಳಿಬಿಟ್ಟು ಮಕಾಡೆ ಮಲಗಿದ್ದವನ ಕೈಯನ್ನು ಮೇಲೆತ್ತಿದರೆ ಅದು ಪುಸಕ್ಕೆಂದು ಮತ್ತೆ ಕೆಳಕ್ಕೆ ಬಿತ್ತು.

ಸುತ್ತಲೂ ನೆರೆದಿದ್ದ ಜನರತ್ತ ತಿರುಗಿದ ಹರಿಚ್ಚಂದ್ರ ಸ್ವಾಮಿ, ಇವ್ನು ಸಿವನ ಪಾದ ಸೇರ್ಕೊಂಡವ್ನೆ! ಅಂದ. ಗಾಬರಿಗೊಂಡ ಜನರ ಪಿಸುಪಿಸು ಮಾತು, ಆ ಸ್ಮಶಾನ ಮೌನವನ್ನು ಮುರಿಯಿತು.

ತನ್ನ ಮೈಲಿಗೆ ಬಗ್ಗೆ ಚಿಂತಿಸುತ್ತಿದ್ದ ಪುರೋಹಿತನಿಗೆ ಈಗ ಮೈಲಿಗೆಯಾದ ಸಮಾಧಿಯ ಪೂಜೆ ತಾನು ಮಾಡಬೇಕಲ್ಲ ಎಂಬ ಸಂಕಟ ಶುರುವಾಯಿತು.

''ಆ ಕಡೆ ದೂರ ಎಳ್ಕೊಂಡು ಹೋಗಿ ಹಾಕಯ್ಯ ಅವ್ನ...''

ಹರಿಶ್ಚಂದ್ರ ಹಲ್ಲುಬಿಡುತ್ತ, ''ಸ್ವಾಮಿ, ಸುಮ್ಕೆ ನಾನು ಕೆಲ್ಸ ಮಾಡಲ್ಲ ಎಂದು ಗರಿಗರಿ ಧಿರಿಸು ಹಾಕಿದವರತ್ತ ಒಮ್ಮೆ ನೋಡಿ, ಕೈಬೆರಳಲ್ಲೇ ಲೆಕ್ಕಮಾಡಿ, ಐನೂರು ಕೊಟ್ರೆ ಮಾಡ್ತೀನಿ'' ಅಂದ.

ನೆರೆದಿದ್ದವರಲ್ಲಿ ಒಬ್ಬರು, ''ಆಯ್ತು, ಬೇಗ ಅವನನ್ನು ಸಾಗಿಸಯ್ಯ, ಪೂಜೆಗೆ ಹೊತ್ತಾಯ್ತು'' ಎಂದಾಗ, ಹರಿಶ್ಚಂದ್ರ ತನ್ನ ಪರಿವಾರವನ್ನು ಕರೆದು, ಸದಾಶಿವ ಪಿಳ್ಳೆಯನ್ನು ಎತ್ತಿ ತಂದು ಅಲ್ಲೇ ಹತ್ತಿರದ ಮರದ ಕೆಳಗೆ ಮಲಗಿಸಿದ.

ಪುರೋಹಿತ ಮೈಲಿಗೆಯಾದ ಸಮಾಧಿಯನ್ನು ನೀರಿನಲ್ಲಿ ತೊಳೆದು, ಶುಚಿ ಮಂತ್ರವನ್ನು ಗೊಣಗುತ್ತ ಪಠಿಸುತ್ತಿದ್ದರೆ, ನೆರೆದ ಜನ ತಾವು ತಂದ ದುಬಾರಿ ಬೆಲೆಯ ಹೂಗುಚ್ಛಗಳು, ಸಮಾಧಿಗೆ ಹಾಕಲು ತಂದೆವೋ ಅಥವಾ ಅದರ ಮೇಲೆ ಮಲಗಿ ಸತ್ತವನಿಗೆ ಹಾಕಲು ತಂದೆವೋ, ಎಂಬ ಗೊಂದಲದಲ್ಲಿ ಕಸಿವಿಸಿಗೊಂಡರು.

ವಿಧಿಯೊಡನೆ ಎದೆಯುಬ್ಬಿಸಿ ಸೆಣಸಾಡಿದ ಸದಾಶಿವ ಪಿಳ್ಳೆ ಕೊನೆಗೆ ಸೋತು ಶರಣಾದನೋ, ಮನುಷ್ಯನ ಸ್ವಾರ್ಥಗಳಿಗೆ ತಿಳಿಯದೆ ಬಲಿಪಶುವಾದನೋ ಏನೋ... ಒಟ್ಟಿನಲ್ಲಿ, ತನ್ನೆರಡು ಕೈಗಳನ್ನು ಎದೆಯ ಮೇಲಿಟ್ಟು ಚಿರನಿದ್ರೆಯಲ್ಲಿದ್ದ ಅವನ ಪ್ರಶಾಂತ ಮುಖವನ್ನು ನೋಡಿದರೆ ಆ ಪುಟ್ಟ ಕಂದನ ಕರೆಗೆ ಓಗೊಟ್ಟು ಅದನ್ನು ಅಪ್ಪಿಕೊಂಡಂತೆ ಕಾಣುತ್ತಿದ್ದ.

ಚಂದ್ರಪ್ರಭ ಕಠಾರಿ
ನಂ. ೧೦೭/ಎ, ೪೬ನೇ ಅಡ್ಡರಸ್ತೆ, ೪ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು -೫೬೦ ೦೧೦

# ಪೆಂಡ್ಯುಲಮ್

ಮೂಲ : ಓ. ಹೆನ್ರಿ

ಭಾವಾನುವಾದ : ಟಿ. ಎಸ್. ಲಲಿತ

''ದಯವಿಟ್ಟು ಅವುಗಳನ್ನು ಹೊರಗೆ ಬಿಡಿ'', ನೀಲಿಯುಡಿಗೆಯ ಕುರುಬ ಕೂಗಿದ. ಕುರಿಗಳ ಮಂದೆಯೊಂದು ಜಗಳವಾಡುತ್ತ ಹೊರಬಂತು. ಮತ್ತೊಂದು ಮೇಲೆ ಹತ್ತಿತು. ಅವುಗಳು ಹತ್ತಿದ್ದ ಮ್ಯಾನ್‌ಹಟ್ಟನ್ ಗಾಡಿ ದಢದಢನೆ ಓಡಿತು. ಜಾನ್ ಪರ್ಕಿನ್ಸ್ ಸ್ಟೇಷನ್ನಿನ ಮೆಟ್ಟಲಿಳಿದು ಹೊರಬಂದ. ಕುರಿಮಂದೆಯನ್ನು ಅಟ್ಟಿಕೊಂಡು ನಡೆದ.

ಜಾನ್ ಮೆಲ್ಲನೆ ತನ್ನ ಫ್ಲಾಟಿನತ್ತ ನಡೆದ, ನಿಧಾನವಾಗಿ. ಕಾರಣ ದಿನನಿತ್ಯದ ಅವನ ಜೀವನದಲ್ಲಿ 'ಬಹುಶಃ' ಎನ್ನುವ ಪದವೇ ಇರಲಿಲ್ಲ. ಎರಡು ವರ್ಷಗಳ ಹಿಂದೆಯೇ ಮದುವೆಯಾಗಿ, ಫ್ಲಾಟ್ ಒಂದರಲ್ಲಿ ವಾಸಿಸುತ್ತಿದ್ದ ಅವನಿಗೆ, ದಿನೇದಿನೇ ಅಚ್ಚರಿಗಳೇನೂ ಕಾದಿರುತ್ತಿರಲಿಲ್ಲ. ಜಾನ್ ಪರ್ಕಿನ್ಸ್ ಮಂಕು ಕವಿದ ದೃಷ್ಟಿಯೊಂದಿಗೆ ಆ ಏಕತಾನತೆಯ ದಿನಗಳ ಭವಿಷ್ಯವನ್ನು ಕಲ್ಪಿಸಿಕೊಂಡು ಹೆಜ್ಜೆ ಹಾಕಿದ.

ಕೇಟಿ ಬಾಗಿಲಲ್ಲೇ ತನ್ನನ್ನು ಸಂಧಿಸಿ ಕೋಲ್ಡ್‌ಕ್ರೀಮ್‌ನ ಸುವಾಸನೆಯೊಂದಿಗೆ ಮುತ್ತಿಟ್ಟು, ಬಟರ್‌ಸ್ಕಾಚ್‌ನೊಂದಿಗೆ ಸ್ವಾಗತಿಸುತ್ತಾಳೆ. ತನ್ನ ಕೋಟು ತೆಗೆದು ಕುರ್ಚಿಯಲ್ಲಿ ಆರಾಮವಾಗಿ ಕಾಲು ಚಾಚಿ ಕುಳಿತು, ಸಂಜೆಯಲ್ಲಿ ಅಚ್ಚಾದ ರಷ್ಯನರು ಹಾಗೂ ಜಪಾನೀಯರ ಕೊಲೆಗಳ ಬಗ್ಗೆ ಓದೋದು. ಊಟಕ್ಕೆ ಪಾಟ್‌ರೋಸ್ಟ್, ಒಗ್ಗರಣೆ ಹಾಕಿದ ಸಲಾಡ್ ರುಬಾರ್ಬ್ ಸ್ಟ್ಯೂ ಹಾಗೂ ತನ್ನ ಶುದ್ಧತೆಯ ಪಟ್ಟಿ ಹಚ್ಚಿಕೊಂಡ ಸ್ಟ್ರಾಬೆರ್ರಿ ಮಾರ್ಮಲೇಡ್ ಬಾಟಲ್ ಇದ್ದದ್ದೇ. ಊಟ ಆದ್ಮೇಲೆ ಕೇಟಿ ತನ್ನ ಕ್ವಿಲ್ಟ್‌ಗೆ ಹಾಕಿದ ಹೊಸ ಪ್ಯಾಚೊಂದನ್ನು ತೋರಿಸ್ತಿದ್ಳು. ಮಹಡಿಯ ಮೇಲಿರೋ ಮನುಷ್ಯ ವ್ಯಾಯಾಮ ಮಾಡೋಕೆ ಶುರು ಮಾಡ್ದಾಗ ಆ ರಭಸಕ್ಕೆ ಉದುರೋ ಛಾವಣಿಯ ಗಾರೆ ತುಂಡುಗಳನ್ನು ಶೇಖರಿಸೋಕ್ಕೆ ಸಂಜೆ ೭.೩೦ಕ್ಕೆ ಮನೆಯ ಮರದ ಸಾಮಾನುಗಳ ಮೇಲೆಲ್ಲಾ ಪತ್ರಿಕೆಗಳನ್ನು ಹರಡ್ತಿದ್ರು. ಕಿಟಕಿ ಬಳಿ ನಿಂತ ವ್ಯಕ್ತಿ ತನ್ನ ಕೊಳಲನ್ನು ಈಚೆ ತೆಗೆಯುತ್ತಿದ್ದ. ಕಾವಲುಗಾರ ತನ್ನ ಟ್ರಾಲಿಯಿಂದ ಜಾರ್ತಿದ್ದ. ಬಾಗಿಲು ತೆಗೆಯುವವನು ಶ್ರೀಮತಿ ಜನೋವಿಟ್ಕಿಯಳ ಐದು ಮಕ್ಕಳನ್ನು ಮತ್ತೊಮ್ಮೆ ಆಚೆ ಓಡಿಸ್ತಿದ್ದ. ನಾಯಿಯ ಸರಪಳಿ ಹಿಡಿದ ಹೆಣ್ಣು ಮಗಳು ಕೆಳಗಿಳಿದು, ತನ್ನ ಹೆಸರನ್ನು ಲೆಟರ್‌ಬಾಕ್ಸ್‌ನ ಮೇಲೆ ಅಂಟಿಸಿದಾಗ ಫ್ರಾಗ್‌ಮೋರ್ ಫ್ಲಾಟ್‌ಗಳ ಸಂಜೆಯ ಕಾರ್ಯಕ್ರಮ ಮಾಮೂಲಿನಂತೆ ನಡೆದಿದೆ ಎಂದರ್ಥ.

ಈ ವಿಷಯಗಳೆಲ್ಲಾ ನಡೆದೇ ನಡೆಯುತ್ತದೆಂದು ಜಾನ್ ಪರ್ಕಿನ್ಸ್‌ಗೆ ಗೊತ್ತು. ೮-೧೫ಕ್ಕೆ ತನ್ನ ಧೈರ್ಯವನ್ನೆಲ್ಲಾ ಒಟ್ಟುಗೂಡ್ಸಿ ಹ್ಯಾಟ್ ಕೈಲಿ ಹಿಡ್ದಾಗ, ಹೆಂಡ್ತಿ ಅದೇ ಸಿಡುಕು ಧ್ವನಿಯೊಂದಿಗೆ ಭಾಷಣ ಮಾಡ್ತಾಳೇಂತಾನೂ ಗೊತ್ತು.

''ಪರ್ಕಿನ್ಸ್, ಈಗ ನೀನೆಲ್ಲಿ ಹೋಗ್ತಿದ್ದೀ ?''

''ಮೆಕ್ಲೋಸ್ಕಿ ಮನೆಗೆ ಹೋಗೋಣಾಂತ ಯೋಚಿಸ್ದೆ. ಹಾಗೇ ಗೆಳೆಯರ ಜೊತೆ ಒಂದೆರ್ಡು ಆಟ ಪೂಲ್ ಆಡ್ಕೊಂಡ್ಬರೋಣಾಂತ.''

ಇತ್ತೀಚ್ಗೆ ಇದೇ ಜಾನ್ ಪರ್ಕಿನ್ಸ್‌ನ ಅಭ್ಯಾಸವಾಗಿಹೋಗಿತ್ತು. ಹತ್ತಕ್ಕೋ ಹನ್ನೊಂದಕ್ಕೋ ವಾಪಸ್ಸಾಗ್ತಿದ್ದ. ಕೆಲವೊಮ್ಮೆ ಕೇಟಿ ಆಗ್ಲೇ ನಿದ್ದೆ ಮಾಡ್ತಿರ್ತಿದ್ಳು, ಇಲ್ಲಾ ಎಚ್ಚರವಾಗಿದ್ದು ಕೋಪದ ಕಡಾಯ್ನಲ್ಲಿ ಕುದೀತಿದ್ಳು.

ಇಂದಿನ ರಾತ್ರಿ ಕೂಡ ಇಂಥದೇ ಒಂದು ಘರ್ಷಣೆಯ ನಿರೀಕ್ಷಣೆಯಲ್ಲಿ ಬಾಗಿಲು ತಟ್ಟಿದ್ದ ಪರ್ಕಿನ್ಸ್. ಪ್ರೀತಿಯಿಂದ ಮುತ್ತು ಕೊಡುವ ಕೇಟಿ ಅಲ್ಲಿರ್ಲಿಲ್ಲ. ಮೂರು ಕೊಠಡಿಗಳೂ ದುಶ್ಶಕುನದಂತೆ ಅಸ್ತವ್ಯಸ್ತವಾಗಿದ್ವು. ಅವಳ ಸಾಮಾನುಗಳೂ ಗೊಂದಲಮಯ. ಷೂಗಳು ರೂಮಿನ ಮಧ್ಯಭಾಗದಲ್ಲಿ. ಮುಂಗುರುಳು ತಿದ್ದುವ ಚಿಮಟ, ಮೇಲುಡುಗೆ, ಪೌಡರ್ ಡಬ್ಬಿ ಡ್ರೆಸಿಂಗ್ ಟೇಬಲ್ ಮೇಲೆ ಹಾಗೂ ಕುರ್ಚಿಗಳ ಮೇಲೆ ಮುದುಡಿಬಿದ್ದದ್ದು ನೋಡಿದ್ರೆ ಇದು ಕೇಟಿಯ ಕೆಲಸದ ರೀತಿಯಂತೂ ಖಂಡಿತಾ ಅಲ್ಲಾ ಅನಿಸ್ತಿತ್ತು. ಕುಸಿಯುತ್ತಿದ್ದ ಹೃದಯದೊಂದಿಗೆ ಬಾಚಣಿಗೆಯಲ್ಲಿ ಸುತ್ಕೊಂಡಿದ್ದ ಕೇಟಿಯ ಕಂದುಬಣ್ಣದ ಕೂದ್ಲ ಸುರುಳಿ ನೋಡ್ದ. ಯಾವ್ದೋ ಅಸಾಮಾನ್ಯವಾದ ಆತುರ, ಗಲಿಬಲಿ ಅವಳಿಗಾಗಿರ್ಬೇಕು. ಕಾರಣ ಕೂದ್ಲನ್ನೆಲ್ಲಾ ಅವ್ಳು ಜೋಪಾನವಾಗಿ ಮುಂದೆಂದೋ ಉಪಯೋಗಕ್ಕೆ ಬರಬಹುದೂಂತ ಪುಟ್ಟ ನೀಲಿಯ ವಾಸ್‌ನಲ್ಲಿ ಜೋಡಿಸಿ ಇಡುತ್ತಿದ್ಳು.

ಎದ್ದು ಕಾಣೋ ಹಾಗೆ ಗ್ಯಾಸ್ ಸಿಲಿಂಡರ್‌ಗೆ ಸಿಕ್ಕಿಸಿದ್ದ ಮಡಚಿದ ಕಾಗ್ದ ಕಾಣ್ತು. ಜಾನ್ ಅದನ್ನು ಕೈಗೆ ತೆಗೆದ್ಕೊಂಡ. ಅದು ಕೇಟಿ ಬರ್ದಿದ್ದ ಕಾಗ್ದ : ''ಡಿಯರ್ ಜಾನ್, ಈಗ್ತಾನೆ ಅಮ್ಮಂಗೆ ತುಂಬಾ ಹುಷಾರಿಲ್ಲಾಂತ ಟೆಲಿಗ್ರಾಂ ಬಂತು. ೪.೩೦ರ ರೈಲಿಗೆ ನಾನು ಹೊರ್ಟಿದ್ದೀನಿ. ನನ್ನಣ್ಣ ಸ್ಯಾಮ್ ಅಲ್ಲಿ ಸ್ಟೇಷನ್‌ಗೆ ಬಂದಿರ್ತಾನೆ. ಐಸ್‌ಬಾಕ್ಸ್‌ನಲ್ಲಿ ಮಟನ್ ಇದೆ. ಇದು ಮಾಮೂಲಿನ ಅವಳ ಗಂಟ್ಲ ತೊಂದ್ರೆ ಅಲ್ಲಾಂದ್ಕೊಂಡಿದ್ದೀನಿ. ಹಾಲಿನವ್ನಿಗೆ ೫೦ ಸೆಂಟ್ಸ್ ಕೊಡು. ಕಳೆದ ಚಳಿಗಾಲ್ದಲ್ಲೂ ಅಮ್ಮಂಗೆ ಹೀಗೇ ಆಗಿತ್ತು. ಗ್ಯಾಸ್ ಮೀಟರ್ ಬಗ್ಗೆ ಕಂಪೆನಿಗೆ



ಜಾನ್‌ನ ಬಲಗೈಯ್ಯ ಬಳಿ ಇದ್ದ ಕುರ್ಚಿಯ ಹಿಂಬದಿಗೆ, ಕೇಟಿಯ ನೀಲಿ ಬಣ್ಣದ ಷರ್ಟನ್ನು ತೂಗಿಹಾಕಲಾಗಿದ್ದು, ಇನ್ನೂ ಅವಳ ಆಕಾರ ಅದ್ರಲ್ಲಿ ಹಾಗೇ ಉಳ್ದು, ತೋಳಿನ ನಡುವಿನ ಸುಕ್ಕುಗಳು ಅವನ ಸುಖಸಂತೋಷಕ್ಕಾಗಿ ದುಡಿದುದರಿಂದ ಆದಂತಿದ್ದು, ಅದು ಪ್ರಚೋದಿಸುವಂಥ ಸೂಕ್ಷ್ಮ ನರುಗಂಪು ಸೂಸುತ್ತಿತ್ತು. ಯಾವುದೇ ಪ್ರತಿಕ್ರಿಯೆ ಇಲ್ಲದ ಆ ಉಡುಪನ್ನು ಹಿಡಿದು ದೀರ್ಘಕಾಲ ಶಾಂತಚಿತ್ತದಿಂದ ಅದನ್ನೇ ನೋಡುತ್ತಿದ್ದ. ಕೇಟಿ ಎಂದೂ ಪ್ರತಿಕ್ರಿಯೆ ತೋರದವಳಾಗಿರಲಿಲ್ಲ. ಕಣ್ಣೀರು – ಹೌದು – ಕಣ್ಣೀರು ಪರ್ಕಿನ್ಸ್‌ನ ಕಣ್ಣಲ್ಲಿ ತುಂಬಿತು.

ಬರಿಯೋದನ್ನ ಮರೀಬೇಡ. ಒಗೆದ ಸಿನ್ನ ಕಾಲ್ಚೀಲಗಳು ಮೇಜಿನ ಡ್ರಾಯರ್‌ನಲ್ಲಿವೆ. ನಾಳೆ ಮತ್ತೆ ಬರೀತೀನಿ. ಎಂದಳು ಆತುರದಿಂದ, ಕೇಟಿ.''

ಎರಡು ವರ್ಷಗಳ ವೈವಾಹಿಕ ಜೀವನ್ದಲ್ಲಿ ಕೇಟಿ ಹಾಗೂ ತಾನು ಒಂದು ರಾತ್ರೀನೂ ಬೇರೆ ಇದ್ದವ್ರಲ್ಲ. ಮೂಕನಂತೆ ಜಾನ್ ಆ ಕಾಗ್ದಾನ ಮತ್ತೆ ಮತ್ತೆ ಓದಿದ. ಬದಲಾಗದ ದಿನಚರೀಲಿ ಇದೊಂದು ಬದಲಾವಣೆ ಅವನ್ನ ದಿಗ್ಭ್ರಮೆಗೊಳ್ಸಿತ್ತು.

ಊಟಕ್ಕೆ ಸಿದ್ಧ ಮಾಡೋವಾಗ ರೆಡಿ ಮಾಡೋವಾಗ ಅವ್ಳು ಹಾಕ್ಕೊಳ್ತಿದ್ದ ಕಪ್ಪು ಚುಕ್ಕೆಗಳ ಕೆಂಪು ಮೇಲುಡಿಗೆ ಖಾಲಿಯಾಗಿ ಆಕಾರವಿಲ್ದೆ ಕುರ್ಚಿಯ ಹಿಂದೆ ತೂಗಾಡ್ತಿತ್ತು. ಆತುರದಲ್ಲಿ ಅವಳ ವಾರದುಡಿಗೆಗಳೂ ಅಲ್ಲಲ್ಲಿ ಬಿಸಾಕಲ್ಪಟ್ಟಿದ್ವು. ಅವಳ ಪ್ರೀತಿಯ ಬಟರ್ ಸ್ಕಾಚ್‌ನ ಪುಟ್ಟ ಪೇಪರ್ ಬ್ಯಾಗ್ ಇನ್ನೂ ಬಿಚ್ಚದೆ ದಾರದಿಂದ ಗಂಟು ಹಾಕ್ಕೊಂಡಿತ್ತು. ರೈಲು, ರಸ್ತೆ ಸಾರಿಗೆಯ ವೇಳಾಪಟ್ಟಿ ಕತ್ತರಿಸಿದ ದಿನಪತ್ರಿಕೆ ಖಾಲಿ ಜಾಗದೊಂದಿಗೆ ನೆಲದ್ಮೇಲೆ ಹರಡಿದೆ. ಇಡೀ ಕೊಠಡಿ ಏನೋ ನಷ್ಟವಾದ, ಕಳೆದುಹೋದ, ಸತ್ತುಹೋದ, ಆತ್ಮ-ಜೀವಗಳೆರಡೂ ಹೊರಟುಹೋದದ್ದನ್ನು ಧ್ವನಿಸುತ್ತಿತ್ತು. ಸತ್ತ ಉಳಿಕೆಗಳ ಮಧ್ಯೆ ಶೂನ್ಯ ತುಂಬಿದ ಹೃದಯದ ವಿಚಿತ್ರ ಭಾವನೆಯೊಂದಿಗೆ ನಿಂತ ಜಾನ್ ಪರ್ಕಿನ್ಸ್.

ತನಗೆ ಸಾಧ್ಯವಾದಷ್ಟು ಮಟ್ಟಿಗೆ ಕೊಠಡಿಯನ್ನು ಓರಣ ಮಾಡತೊಡಗಿದ. ಅವಳ ಬಟ್ಟೆಯನ್ನು ಮುಟ್ಟಿದಾಗ ರೋಮಾಂಚನವಾಗುವುದರೊಂದಿಗೆ ಒಂದು ಬಗೆಯ ಭೀತಿ ಅವ್ನಲ್ಲಿ ಹಾದುಹೋಯ್ತು. ಕೇಟಿ ಇಲ್ಲದ ಅಸ್ತಿತ್ವವೆಂದರೇನು ಎಂದು ಅವ್ನು ಯೋಚಿಸಲಾರದವನಾಗಿದ್ದ. ಎಷ್ಟರಮಟ್ಟಿಗೆ ಅವಳು ಅವನ ಜೀವನದಲ್ಲಿ ಹಾಸುಹೊಕ್ಕಾಗಿದ್ದಳೆಂದರೆ, ಅವಳು ಅವನ ಉಸಿರಾಟದಂತೆ ಅವನ ಜೀವನದ ಭಾಗವಾಗಿ ಬಿಟ್ಟಿದ್ದಳು. ಈಗ ಯಾವುದೇ ಮುನ್ನೆಚ್ಚರಿಕೆ ಇಲ್ದೆ ಅವ್ಳು ಹೊರಟುಹೋಗಿದ್ಲು. ಅವ್ಳು ಇರ್ಲೇ ಇಲ್ವೇನೋ, ಅನ್ನೋ ಹಾಗೆ ಸಂಪೂರ್ಣ ಮರೆಯಾಗಿದ್ಲು. ಅದು ಕೇವಲ ಕೆಲ ದಿನಗಳ ಮಟ್ಟಿಗೆ, ಅಥವಾ ಹೆಚ್ಚಂದ್ರೆ ಒಂದೆರ್ಡು ವಾರ. ಆದ್ರೆ ಅದು ಯಾವ್ದೇ ಘಟನೆಗಳಿಲ್ಲದೆ ಸುಭದ್ರವಾದ ಅವನ ಮನೆಯತ್ತ ಸಾವಿನ ಬೆರಳೊಂದು ತೋರುತ್ತಿದೆಯೇನೋ ಅಂತ ಅವ್ನಿಗನ್ನಿಸ್ತು.

ಜಾನ್ ಐಸ್‌ಬಾಕ್ಸ್‌ನಿಂದ ಚಿಕನ್ ತೆಗೆದ. ಕಾಫಿ ಮಾಡಿ, ಸ್ಟ್ರಾಬೆರ್ರಿ ಮಾರ್ಮಲೇಡ್ ಎದುರಿಗೆ ಕುಳಿತ. ಸದ್ಯ ಪಾಟ್ ರೋಸ್ಟ್ ಆಗ್ಲೀ ಸಲಾಡ್ ಆಗ್ಲೀ ಅವ್ನೆದ್ರಿಗೆ ಇರ್ಲಿಲ್ಲ. ಅವ್ನ ಮನೆ ಎಲ್ಲಾ ಬಿಚ್ಚಿಟ್ಟಂತೆ ಇತ್ತು. ಗಂಟಲು ಬೇನೆಯಿದ್ದ ಅತ್ತೆ ಅವನ ಮನೆಯನ್ನೂ ಮನೆ ದೇವರುಗಳನ್ನೂ ಆಕಾಶಕ್ಕೆ ತೂರಿದಂತಿತ್ತು. ಒಂಟಿಯಾಗಿ ಊಟ ಮಾಡಿದ ಮೇಲೆ ಜಾನ್ ಮುಂದಿನ ಕಿಟಕಿಯ ಬಳಿ ಕುಳಿತ.

ಸಿಗರೇಟು ಸೇದಬೇಕೆನಿಸಲಿಲ್ಲ. ನೃತ್ಯದ ಸಂಭ್ರಮದಲ್ಲಿ ಪಾಲ್ಗೊಳ್ಳುವಂತೆ ನಗರದ ಹೊರಭಾಗ ಕರೆದಂತಾಯ್ತು. ಆ ರಾತ್ರಿ ಅವನದೇ ಆಗಿತ್ತು. ಯಾರಿಂದಲೂ ಪ್ರಶ್ನಿಸಿಕೊಳ್ಳದೆ, ಯಾವುದೇ ಬ್ರಹ್ಮಚಾರಿಯ ಸಂತೋಷ ಹಾಗೂ ಸ್ವಾತಂತ್ರ್ಯದೊಂದಿಗೆ, ತಂತಿ ಮೀಟುತ್ತ ಅಲ್ಲಿನ ಸಂತೋಷದಲ್ಲಿ ಭಾಗಿಯಾಗ್ಬೋದಿತ್ತು. ಬೇಕೆನಿಸಿದ್ರೆ ಬೆಳಗಿನವರ್ಗ್ಗೂ ಕುಡ್ದು ಅಲೆಯಬಹುದಿತ್ತು. ಹಾಗೂ ಅವ್ನಲ್ಲಿ ಸಂತೋಷ ತುಂಬ್ತಿದ್ದ ಆ ಮಧುಪಾತ್ರೆ ಹಿಡಿದು ತನಗಾಗಿ ಕಾಯುತ್ತಿದ್ದ, ಕೋಪಗೊಂಡ ಮುಖದ ಕೇಟಿ ಇಂದಿಲ್ಲ. ಅವ್ನಿಗೆ ಬೇಕಿದ್ರೆ ಮೆಕ್ಲೋಸ್ಕಿಯ ಮನೆಯಲ್ಲಿ ಉತ್ಸಾಹ ತುಂಬಿದ ಅವ್ನ ಗೆಳೆಯರೊಂದಿಗೆ ಅರೋರ ಬಂದು ವಿದ್ಯುದ್ದೀಪ ಆರ್ಸೋವರ್ಗ್ಗೂ ಪೂಲ್ ಆಡ್ಬೋದಿತ್ತು. ನೀರಸವಾಗಿದ್ದ ಫ್ರಾಗ್‌ಮೋರ್ ಮನೆ ಯಾವಾಗ್ಲೂ ಅವ್ನಲ್ಲಿ ಹತ್ತಿಕ್ಕಿದ್ದ, ವಿವಾಹಗೀತೆಗಳನ್ನು ನುಡಿಸುವ ತಂತಿಗಳನ್ನು ಸಡಿಲಗೊಳಿಸಿತ್ತು, ಕೇಟಿ ಹೊರಟುಹೋಗಿದ್ದಳು.

ಜಾನ್ ಪರ್ಕಿನ್ಸ್‌ಗೆ ಅವನ ಮನೋಭಾವನೆಗಳನ್ನು ವಿಶ್ಲೇಷಿಸುವ ಅಭ್ಯಾಸವಿರ್ಲಿಲ್ಲ. ಕೇಟಿ ಇಲ್ಲದ ಕೋಣೆಯಲ್ಲಿ ಕುಳಿತು, ತನ್ನ ಕಿರಿಕಿರಿಯ ಬಗ್ಗೆ ಯೋಚಿಸತೊಡಗಿದ. ತನ್ನ ಸಂತೋಷಕ್ಕೆ ಕೇಟಿ ಅಗತ್ಯವೆನ್ನುವ ವಿಷಯವೀಗ ಅವನಿಗೆ ಮನದಟ್ಟಾಗಿತ್ತು. ಗೃಹಕೃತ್ಯದ ನೀರವತೆ ಅವನ ಮನದಾಳಕ್ಕಿಳಿದು ಕೇಟಿಯ ಬಗೆಗಿನ ಅವನ ಭಾವನೆಗಳು ಅವಳ ಅನುಪಸ್ಥಿತಿಯಿಂದಾಗಿ ತೀವ್ರವಾಗಿ ಕಲಕಲ್ಪಟ್ಟವು. ಮಧುರ ದನಿಯ ಹಕ್ಕಿ ಹಾರಿಹೋಗುವವರೆಗೂ ನಮಗೆ ಸಂಗೀತದ ಬೆಲೆ ತಿಳಿಯುವುದಿಲ್ಲ!

''ಕೇಟೀನ ನಾನ್ಹೇಗೆ ನಡೆಸ್ಕೊಂಡಿದೀನಿ? ನಾನು ನಿಜಕ್ಕೂ ಪಾಪೀನೇ'' ಅಂದುಕೊಂಡ ಜಾನ್. ಮನೇಲಿ ಅವ್ಳ ಜೊತೆ ಇರೋ ಬದ್ಲಿಗೆ ಎಲ್ಲಾ ಹುಡುಗ್ರ ಜೊತೆ ಸೇರಿ ಪೂಲ್ ಆಡ್ಕೊಂಡು ಮಜಾ ಮಾಡ್ತೀನಿ. ಆ ಬಡಪಾಯಿ ಹುಡ್ಗಿ ಒಂಟಿಯಾಗಿ ಯಾವ ಮನರಂಜನೇನೂ ಇಲ್ದೆ ಮನೇಲಿ ಕೂತಿದ್ರೆ, ನಾನು ಹೀಗೆ ಮಾಡ್ತೀನಲ್ಲಾ! ಜಾನ್, ನೀನು ತೀರಾ ಸ್ವಾರ್ಥಿ. ಆ ಪುಟ್ಟ ಹುಡ್ಗಿ ಬಗ್ಗೆ ನಾನೀಗ ಎಲ್ಲವನ್ನೂ ಸರಿಪಡಿಸ್ತೀನಿ. ಇನ್ಮೇಲೆ ನಾನವ್ಳನ್ನ ಹೊರಗೆ ಕರೆದೊಯ್ದು ಸ್ವಲ್ಪ ಮನರಂಜನೆ ಸಿಗೋ ಹಾಗೆ ಮಾಡ್ತೀನಿ. ಆ ಮೆಕ್ಲೋನ್ನಿ ಗುಂಪನ್ನ ಈ ನಿಮಿಷದಿಂದ್ಲೇ ಬಿಟ್ಟುಬಿಡ್ತೀನಿ'' ಎಂದೆಲ್ಲಾ ಬಡಬಡಿಸಿಕೊಂಡ.

ಆದ್ರೂ ಜಾನ್ ಪರ್ಕಿನ್ಸ್‌ಗೆ ಹೊರಗೆ ಗದ್ದಲವೆಬ್ಬಿಸ್ತಿದ್ದ ನಗರ ಆಹ್ವಾನಿಸುವಂತಿತ್ತು. ಮೆಕ್ಲೋಸ್ಕಿಯ ಮನೆಯಲ್ಲಿ ರಾತ್ರಿಯ ಆಟದವರೆಗೂ ಕಾಲ ಕಳೆಯಲು ಹುಡುಗರು ಚೆಂಡನ್ನು ಬಿಲಿಯರ್ಡ್ಸ್ ಮೇಜಿನ ಚೀಲಕ್ಕೆಸೆಯುತ್ತಿದ್ದರು. ಅಗಲಿಕೆಯಿಂದ ದುಃಖತಪ್ತನಾಗಿದ್ದ ಪರ್ಕಿನ್ಸ್‌ನನ್ನು ಈ ಯಾವ ಸೂಚನೆಗಳೂ ರಮಿಸುವಂತಿರಲಿಲ್ಲ. ಅವನಿಂದ ಕಸಿದುಕೊಳ್ಳಲಾಗಿದ್ದ, ಅವನದಾಗಿದ್ದ ವಸ್ತು ಅವನಿಗೆ ಪುನಃ ಬೇಕಾಗಿತ್ತು.

ಜಾನ್‌ನ ಬಲಗೈಯ್ಯ ಬಳಿ ಇದ್ದ ಕುರ್ಚಿಯ ಹಿಂಬದಿಗೆ, ಕೇಟಿಯ ನೀಲಿ ಬಣ್ಣದ ಷರ್ಟನ್ನು ತೂಗಿಹಾಕಲಾಗಿದ್ದು, ಇನ್ನೂ ಅವಳ ಆಕಾರ ಅದ್ರಲ್ಲಿ ಹಾಗೇ ಉಳ್ದು, ತೋಳಿನ ನಡುವಿನ ಸುಕ್ಕುಗಳು ಅವನ ಸುಖಸಂತೋಷಕ್ಕಾಗಿ ದುಡಿದುದರಿಂದ ಆದಂತಿದ್ದು, ಅದು ಪ್ರಚೋದಿಸುವಂಥ ಸೂಕ್ಷ್ಮ ನರುಗಂಪು ಸೂಸುತ್ತಿತ್ತು. ಯಾವುದೇ ಪ್ರತಿಕ್ರಿಯೆ ಇಲ್ಲದ ಆ ಉಡುಪನ್ನು ಹಿಡಿದು ದೀರ್ಘಕಾಲ ಶಾಂತಚಿತ್ತದಿಂದ ಅದನ್ನೇ ನೋಡುತ್ತಿದ್ದ. ಕೇಟಿ ಎಂದೂ ಪ್ರತಿಕ್ರಿಯೆ ತೋರದವಳಾಗಿರಲಿಲ್ಲ. ಕಣ್ಣೀರು – ಹೌದು – ಕಣ್ಣೀರು ಪರ್ಕಿನ್ಸ್‌ನ ಕಣ್ಣಲ್ಲಿ ತುಂಬಿತು. ''ಅವ್ಳು ಹಿಂತಿರ್ಗಿ ಬಂದ್ಮೇಲೆ ವಿಷಯಗಳೇ ಬೇರೆಯಾಗತ್ವೆ. ಇದುವರೆಗೂ ತೋರಿದ ಅಲಕ್ಷ್ಯವನ್ನೆಲ್ಲಾ ಸರಿಪಡಿಸ್ತೀನಿ. ಅವಳಿಲ್ಲದೆ ಜೀವನದಲ್ಲೇನಿದೆ!'' ಎಂದು ಮನಸ್ಸು ಬಡಬಡಿಸಿತು.

ಬಾಗ್ಲು ತೆಗೀತು. ಪುಟ್ಟ ಕೈಚೀಲವೊಂದನ್ನು ಹಿಡಿದ ಕೇಟಿ ಒಳ ಬಂದ್ಲು. ಜಾನ್ ಮೂರ್ಖನಂತೆ ಅವಳನ್ನು ದಿಟ್ಟಿಸಿ ನೋಡ್ದ.

''ಅಬ್ಬ, ವಾಪಸ್ಸು ಬಂದಿದ್ದು ನಂಗೆ ಸಂತೋಷವಾಗಿದೆ'' ಅಂದ್ಲು ಕೇಟಿ. ''ಅಮ್ಮಂಗೆ ಅಂಥಾ ಅನಾರೋಗ್ಯವೇನೂ ಆಗಿರ್ಲಿಲ್ಲ. ಸ್ಯಾಮ್ ಡಿಪೋಗೆ ಬಂದಿದ್ದ. ಸ್ವಲ್ಪ ಇರಸುಮುರಸಾಗಿದ್ದು, ಅವ್ಳು ನಂಗೆ ಸಮಾಚಾರ ತಿಳ್ಸಿದಮೇಲೆ ಸರಿ ಹೋಗಿದ್ಲು. ಹಾಗಾಗಿ ನಾನು ಮುಂದಿನ ರೈಲಿಗೇ ಹೊರಟುಬಿಟ್ಟೆ. ಸದ್ಯ ಪ್ರಾಣ ಹೋಗ್ತಿದೆ. ಒಂದ್ಲೋಟ ಕಾಫಿ ಕುಡಿದ್ರೆ ಸಾಕಾಗಿದೆ'' ಎನ್ನುತ್ತಾ ಒಳಗೆ ಹೋದಳು.

ಫ್ಲಾನ್‌ಮೋರ್ ಮನೆಗಳ ದಿನನಿತ್ಯದ ವಸ್ತುಸ್ಥಿತಿಗೆ ಮರಳಿದ ಕಾರ್ಯಕ್ರಮಗಳ, ವಾಹನಗಳ ಗಡಗಡ ಸದ್ದನ್ನು ಯಾರೂ ಕೇಳಿರಲಿಲ್ಲ. ವಾದ್ಯತಂಡ ನುಸುಳಿತು, ವಸಂತ ಮೂಡಿತು. ಗೇರ್ ಸರಿಪಡಿಸಿದ ಚಕ್ರಗಳು ತಮ್ಮ ಹಳೆಯ ಕಕ್ಷೆಯಲ್ಲೇ ಸುತ್ತಿದವು.

ಜಾನ್ ಪರ್ಕಿನ್ಸ್ ಗಡಿಯಾರದತ್ತ ನೋಡಿದ. ೮-೧೫ ಆಗಿತ್ತು. ಹ್ಯಾಟ್ ಹಿಡಿದು ಬಾಗಿಲತ್ತ ನಡೆದ.

''ಈಗೆಲ್ಲಿ ಹೋಗ್ತಿದೀ, ಅಂತ ನಾನು ತಿಳ್ಕೋಬೇಕು ಜಾನ್'', ಎಂದಳು ಕೇಟಿ ಜಗಳ ಕಾಯುವ ಧ್ವನಿಯಲ್ಲಿ.

''ಮೆಕ್ಲೋಸ್ಕಿ ಮನೆಗೆ ಹೋಗಿ, ಗೆಳೆಯರೊಂದಿಗ ಒಂದೆರ್ಡು ಆಟ ಪೂಲ್ ಆಡ್ಕೊಂಬರೋಣ ಅದ್ಕೊಂಡೆ'' ಎಂದ ಜಾನ್!

ಮೂಲ : ಓ. ಹೆನ್ರಿಯ ಇಂಗ್ಲಿಷ್ ಕಥೆ : 'ಪೆಂಡ್ಯುಲಮ್'
ಭಾವಾನುವಾದ : ಟಿ. ಎಸ್. ಲಲಿತ
ನಂ. ೭೦೨, ಮೊದಲನೇ ಮಹಡಿ, ೧೭ನೇ ಮುಖ್ಯರಸ್ತೆ
ಸರಸ್ವತಿಪುರಂ, ಮೈಸೂರು - ೫೭೦ ೦೦೯

## ವೈಶಾಲಿ ಕಾಸರವಳ್ಳಿ ಒಂದು ನೆನಪು



ಪ್ರತಿಭಾವಂತ ನಟಿ, ಟಿವಿ ಧಾರಾವಾಹಿಗಳ ನಿರ್ದೇಶಕಿ ಮತ್ತು ವಸ್ತ್ರವಿನ್ಯಾಸ ಕಲೆಯಲ್ಲಿ ವಿಶೇಷ ಪರಿಣತಿ ಹೊಂದಿದ್ದ ವೈಶಾಲಿ ಕಾಸರವಳ್ಳಿ ೨೭-೦೯-೨೦೧೦ರಂದು ಬೆಂಗಳೂರಿನಲ್ಲಿ ನಿಧನರಾದರು. ಅವರು ಗುಲಬರ್ಗಾದ ಖ್ಯಾತ ವೈದ್ಯರೂ, ಚಲನಚಿತ್ರ ತಯಾರಕರೂ, ನಿರ್ದೇಶಕರೂ ಆಗಿದ್ದ ದಿವಂಗತ ಡಾ॥ ಚಿಟಗೋಪಿ ಅವರ ಮಗಳು. ಶಾಲಾ ದಿನಗಳಿಂದಲೇ ರಂಗಭೂಮಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡ ವೈಶಾಲಿಯವರು ಅನೇಕ ನಾಟಕಗಳಲ್ಲಿ, ನೂರಕ್ಕೂ ಹೆಚ್ಚಿನ ಚಿತ್ರಗಳಲ್ಲಿ ನಟಿಸಿದ್ದಾರೆ. ತಮ್ಮ ಬಾಳ ಸಂಗಾತಿ ಹಾಗೂ ನಾಡಿನ ಸುಪ್ರಸಿದ್ಧ ನಿರ್ದೇಶಕರಾದ ಗಿರೀಶ್ ಕಾಸರವಳ್ಳಿ ಅವರು ನಿರ್ದೇಶಿಸಿರುವ 'ಆಕ್ರಮಣ' ಚಿತ್ರದಲ್ಲಿನ ಅದ್ಭುತ ನಟನೆಗಾಗಿ ರಾಜ್ಯ ಸರ್ಕಾರ ನೀಡುವ 'ಅತ್ಯುತ್ತಮ ನಟಿ' ಪ್ರಶಸ್ತಿ ಗಳಿಸಿದ್ದಾರೆ. ಗಿರೀಶರ ನಿರ್ದೇಶನದ 'ತಾಯಿ ಸಾಹೇಬ' ಚಿತ್ರದಲ್ಲಿನ ವಿಶಿಷ್ಟ ವಸ್ತ್ರವಿನ್ಯಾಸಕ್ಕಾಗಿ ೧೯೯೮-೯೯ರ ಸಾಲಿನ ರಾಷ್ಟ್ರ ಪ್ರಶಸ್ತಿಗೆ ಭಾಜನರು. ಇಂತಹ ಬಹುಮುಖ ಪ್ರತಿಭೆಯ ವೈಶಾಲಿಯವರು ಕಣ್ಮರೆಯಾದುದು ಅತ್ಯಂತ ದುಃಖದ ಸಂಗತಿ. ದಿವಂಗತರಿಗೆ 'ಹೊಸತು'ವಿನ ನಮನಗಳು.



# ಹೆಂಗಸರು ಬಾಳೆಗಿಡ ಕಡಿಯಬಾರದೆ ?

ನಮ್ಮ ಹಿತ್ತಲಿನಲ್ಲಿ ಒಂದು ವರ್ಷದ ಹಿಂದೆ ನನ್ನ ಕೈಯಾರೆ ಒಂದು ನೇಂದ್ರ ಬಾಳೆಗಿಡ ನೆಟ್ಟಿದ್ದೆ. ನಮ್ಮ ಪರಿಚಿತರು ಅದನ್ನು ನಮಗೆ ಕೊಟ್ಟಿದ್ದರು. ನನಗೆ ಬಾಳೆಗಿಡ ನೆಡುವುದೆಂದರೆ ಬಲು ಪ್ರೀತಿ. ಅದು ನಮಗೆ ಎಷ್ಟು ಪ್ರಯೋಜನಕಾರಿ ಎಂದರೆ ಎಲೆಯಲ್ಲಿ ತಿಂಡಿ ಊಟ ಮಾಡಬಹುದು, ಹಣ್ಣು ನೀಡುತ್ತದೆ, ಹೂವಿನಿಂದ, ಕಾಯಿಯಿಂದ, ಬಾಳೆದಿಂಡಿನಿಂದ ಅಡುಗೆ ಮಾಡಬಹುದು. ಇಷ್ಟೆಲ್ಲ ಪ್ರಯೋಜನಕಾರಿಯಾದ ಬಾಳೆಗಿಡ ನೆಡದಿದ್ದರೆ ಅದೊಂದು ಮನೆಯೇ ಅಲ್ಲ ಎಂದು ನನ್ನ ಸ್ವಂತ ಅಭಿಪ್ರಾಯ! ಹಳ್ಳಿಯಲ್ಲಿ ಬೆಳೆದವಳಾದ ಕಾರಣದಿಂದಲೋ ಅಥವಾ ಗಿಡ ನೆಡುವ, ಕೃಷಿ ಮಾಡುವ ಸಂತೋಷದಿಂದಲೋ ಏನೋ ಬಾಳೆಗಿಡ ನೆಡುವುದೆಂದರೆ ನನಗೆ ಬಹಳ ಖುಷಿ ನೀಡುವ ಕೆಲಸ. ಹೂವಿನ ಗಿಡ ನೆಡುವುದಕ್ಕಿಂಥ ಹೆಚ್ಚು ಸಂತೋಷ ನನಗೆ ಬಾಳೆಗಿಡ ನೆಡುವುದರಿಂದ ಸಿಗುತ್ತದೆ.

ಕಾಲಕ್ರಮೇಣ ನೇಂದ್ರ ಗಿಡ ದೊಡ್ಡದಾಗಿ ಬೆಳೆದು ಒಂದು ಗೊನೆ ಬಿಟ್ಟಿತು. ಪ್ರತಿದಿನ ಅದನ್ನು ನೋಡಿ ಸಂತೋಷಪಡುತ್ತಿದ್ದೆ. ನಮ್ಮ ಪೂರ್ವಜರೂ ಆಗಾಗ ಬಂದು ಬೆಳೆದಿದಾ ಎಂದು ನೋಡಿ ಹೋಗುತ್ತಿದ್ದುವು. ಒಂದು ದಿನ ನಾನು ಹೀಗೆ ನೋಡುತ್ತಿರುವಾಗ ಅರೆ, ಒಂದು ಕಾಯಿ ಹಣ್ಣಾಗಿರುವುದು ಕಂಡಿತು. ಸದ್ಯ ಪೂರ್ವಜರು ಬಂದಿಲ್ಲವಲ್ಲ ಎಂದು ಸಂತೋಷ ವಾಯಿತು. ಅದು ನಮಗೆ ಸೂಚನೆ ಕೊಟ್ಟದ್ದು ಬಾಳೆಗೊನೆ ಬೆಳೆದಿದೆ, ಇನ್ನು ಕಡಿಯಬಹುದು ಎಂದು. ನಮ್ಮ ಕೆಲಸದಾಕೆ ಚಿಕ್ಕತಾಯಿಗೆ ಹೇಳಿದೆ. ಸಹಾಯಕ್ಕೆ ಬರುತ್ತೇನೆ ಕಡಿಯುವ ಎಂದಳು.

ಕತ್ತಿ ಹಿಡಿದು ತಯಾರಾದೆ. ಚಿಕ್ಕತಾಯಿ ಗೊನೆ ಹಿಡಿದು ನಿಂತಳು. ಒಂದೇಟು ಹಾಕಿದೆ ಗಿಡಕ್ಕೆ. ಚಿಕ್ಕತಾಯಿಯ ಕೈಯಿಂದ ಜಾರಿ ಗೊನೆ ನೆಲಕ್ಕೆ ಬಿತ್ತು. ಅದರ ಭಾರ ಅವಳಿಂದ ತಡೆದುಕೊಳ್ಳಲಾಗಲಿಲ್ಲ. ಒಂದೆರಡು ಕಾಯಿಗೆ ಏಟಾಯಿತು. ನಮ್ಮ ಕೆಲಸವನ್ನು ಹಿಂದಿನ ಮನೆಯ ಹೆಂಗಸರು ಮಹಡಿಯಿಂದ ನೋಡುತ್ತಿದ್ದರು. ಅವರು ನೋಡಿ ತಡೆಯಲಾರದೆ, ''ನೀವೇಕೆ ಕಡಿಯುತ್ತೀರಿ? ಯಾರಿಗಾದರೂ ಹುಡುಗರಿಗೆ ಹೇಳಬಾರದೆ?'' ಎಂಬ ಪ್ರಶ್ನೆ ಎಸೆದರು. ನನಗೆ ಅವಮಾನವಾಯಿತು. ಯಃಕಶ್ಚಿತ್ ಒಂದು ಬಾಳೆಗಿಡ ಕಡಿಯಲು ನನ್ನ ಕೈಯಲ್ಲಿ ಸಾಧ್ಯವಿಲ್ಲ ಎನ್ನುವಂತೆ ಮಾತಾಡುತ್ತಾರಲ್ಲ ಇವರು ಎಂದು, ''ನನಗೆಲ್ಲ ಅಭ್ಯಾಸವಿದೆ. ಇಂಥ ಕೆಲಸವನ್ನೆಲ್ಲ ನಾವೇ ಮಾಡುವುದು. ಅಂಥ ಕಷ್ಟದ ಕೆಲಸವಲ್ಲ ಇದು'', ಎಂದೆ ಸ್ವಲ್ಪ ಬಿಗುವಿನಿಂದ. ಗೊನೆ ಕಡಿದದ್ದಾಯಿತು. ೬೮ ಕಾಯಿಗಳು ಇದ್ದುವು. ಪ್ರಕೃತಿ ನಮಗೆ ಎಷ್ಟು ನೀಡುತ್ತದೆ ಎಂಬ ಕೃತಜ್ಞತಾಭಾವ ಮೂಡಿತು. ದಿಂಡು ಬೇರ್ಪಡಿಸಿದೆ. ಆಗ ಹಿಂದಿನ ಮನೆಯಾಕೆ ''ದಿಂಡು ಬಹಳ ಒಳ್ಳೆಯದಂತೆ ಅಲ್ಲವೆ? ಟಿವಿಯಲ್ಲಿ ತೋರಿಸಿದ್ದರು. ವರ್ಷಕ್ಕೊಮ್ಮೆಯಾದರೂ ತಿನ್ನಬೇಕಂತಲ್ಲ'' ಎಂದು ಪೀಠಿಕೆ ಹಾಕಿದರು. ನನಗೆ ಗೊತ್ತಾಯಿತು ಅವರಿಗೆ ದಿಂಡು ಬೇಕಾಗಿದೆ ಎಂದು. ''ನಿಮಗೆ ಬೇಕಾ'' ಎಂದೆ. ''ಬೇಕು, ನಿಮಗೆ?'' ಎಂದರು. ''ನಮಗಿನ್ನೂ ಇದೆ'' ಎಂದೆ. ಮಹಡಿ ಇಳಿದುಬಂದರು ದಿಂಡು ಪಡೆಯಲು.

''ಅಲ್ಲ ಬಾಳೆಗಿಡ ನೀವು ಏಕೆ ಕಡಿದಿರಿ? ಹೆಂಗಸರು ಬಾಳೆಗಿಡ ಕಡಿಯಬಾರದು'' ಎಂದು ಒಂದು ಹೊಸ ವಿಷಯ ತಿಳಿಸಿದರು. ಈ ವಿಷಯ ನನಗೆ ಗೊತ್ತಿರಲಿಲ್ಲ. ಅವರು ಹೇಳಿದ್ದು ಕೇಳಿ ನಗಬೇಕೊ ಅಳಬೇಕೊ ಗೊತ್ತಾಗದೆ, ''ಅದೇನು ಹಾಗೆ?'' ಎಂದೆ ಅತಿ ವಿಸ್ಮಯದಿಂದ. ಅದಕ್ಕೆ ಅವರು, ''ಅದು ನಮ್ಮಂತೆಯೆ ಹೆಣ್ಣು. ಗೊನೆ ಕೊಡುತ್ತಲ್ಲ. ಹಾಗಾಗಿ ಹೆಂಗಸರು ಕಡಿಯುವಂತಿಲ್ಲ. ಗಂಡಸರು ಮಾತ್ರ ಕಡಿಯಬಹುದು. ನಮ್ಮಲ್ಲಿ ಹೆಂಗಸರ್ಯಾರು ಬಾಳೆಗೊನೆ ಕಡಿಯುವುದಿಲ್ಲ. ಅದಕ್ಕೆ ನಿಮಗೆ ಹೇಳಿದೆ'' ಎಂದರು. ''ಓ ಹೌದಾ. ನಮ್ಮಲ್ಲಿ ಹಾಗೆಲ್ಲ ಇಲ್ಲ. ಹೆಂಗಸರೂ ಕಡಿಯುತ್ತಾರೆ'' ಎಂದೆ. ಅವರು ಆ ಮನೆಗೆ ಬಂದು ಕೆಲವೇ ತಿಂಗಳು ಆಗಿತ್ತಷ್ಟೆ. ಮಾತಾಡಿದ್ದು ಮಾತ್ರ ಅದೇ ಮೊದಲು! ಯಾವ ಊರು ಆಗಿರಬಹುದಪ್ಪ ಇವರದು ಎಂಬ ಕುತೂಹಲ ಹುಟ್ಟಿ, ''ಯಾವೂರು ತಮ್ಮದು?'' ಎಂದು ಕೇಳಿದೆ. ''ಶಿವಮೊಗ್ಗ'' ಎಂದರು.

ಹೀಗೊಂದು ಕಲ್ಪನೆ ಕೂಡ ನನಗಿರಲಿಲ್ಲ. ಇವತ್ತು ಅವರಿಂದ ನನಗೊಂದು ಹೊಸ ವಿಷಯ ಗೊತ್ತಾದ ಹಾಗಾಯಿತು. ನನ್ನ ಜ್ಞಾನ ಭಂಡಾರ ಬೆಳೆಯಿತೆಂದು ಸಂತೋಷಿಸಿದೆ. ಹಾಗೂ ಅಂಥ ಮೂಢನಂಬಿಕೆಯಿಂದ ನಾನು ಬೆಳೆಯಲಿಲ್ಲವಲ್ಲ, ನನ್ನನ್ನು ಹಾಗೆ ಹಿರಿಯರು ಬೆಳೆಸಲಿಲ್ಲವಲ್ಲ ಎಂದು ಹೆಮ್ಮೆಪಟ್ಟೆ. ನಮ್ಮ ಹಿರಿಯರಿಗಿದೊ ಕೃತಜ್ಞತೆಗಳು. ನಿಮ್ಮೂರಲ್ಲು ಇಂಥ ಒಂದು ಪದ್ಧತಿ ಇದೆಯಾ? ತಿಳಿಸಿ.

**ರುಕ್ಮಿಣಿಮಾಲಾ**
ಮನೆ ಸಂಖ್ಯೆ : ೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು - ೫೭೦ ೦೦೯

# ತಲೆ ತರತಮ

ಆ ಚಟಾಕಿ ಹಳೆಯದಾದರೂ ತೀಕ್ಷ್ಣವಾಗಿಯೆ ಇಂದಿಗೂ ಸ್ಫೋಟಿಸೀತು. ಯಮರಾಜ ಚಿತ್ರಗುಪ್ತರಿಗೆ, ''ಭೂಲೋಕದಲ್ಲಿನ ತಾಜಾ ತಲೆಯೊಂದನ್ನು ತನ್ನಿ, ಅಲ್ಲಿ ಮಾನವರು ಬಲು ಮೇಧಾವಿಗಳಂತೆ'', ಅಂತ ಆದೇಶಿಸುತ್ತಾನೆ. ಚಿತ್ರಗುಪ್ತರು ಒಡನೆಯೆ ಆಜ್ಞೆಯನ್ನು ಪಾಲಿಸುತ್ತಾರೆ. ಯಮನ ಆಸ್ಥಾನದಲ್ಲಿ 'ತಲೆ'ಯೊಂದು ಕಂಡಾಗ ಕೇಳಬೇಕೆ ಹರ್ಷಕರ ಉದ್ಗಾರ! ''ಚಿತ್ರಗುಪ್ತರೆ, ಬಹಳ ಸಂತೋಷ. ಇದು ಯಾರ ತಲೆ?'' ಎಂದು ಯಮರಾಜ ವಿಚಾರಿಸಲು, ''ಪ್ರಭು, ಇದು ರಾಜಕಾರಣಿಯೊಬ್ಬರ ತಲೆ. ಇದಕ್ಕಿಂತ ತಾಜಾ ಬೇರೊಂದಿಲ್ಲ'', ಎನ್ನುವ ಉತ್ತರ. ಅದು ಹೇಗೆ ಸಾಧ್ಯ? ಭೂಲೋಕದಲ್ಲಿ ರಾಜಕಾರಣಿಗಳನ್ನು ಬಿಟ್ಟರೆ ಬುದ್ಧಿಶಾಲಿಗಳೇ ಇಲ್ಲವೆ ಹಾಗಾದರೆ,'' ಅಂತ ಯಮನ ಪ್ರಶ್ನೆ. ಅದಕ್ಕೆ, ''ಖಂಡಿತವಾಗಿ ಇಲ್ಲ. ಏಕೆಂದರೆ ಇದರೊಳಗಿರುವ ಮಿದುಳನ್ನು ಸವಕಲು ಅಂತ ಹೇಗೆ ಹೇಳುವಿರಿ? ರಾಜಕಾರಣಿ ಅದನ್ನು ಒಮ್ಮೆಯೂ ಬಳಸಿಯೆ ಇಲ್ಲವಲ್ಲ!'' ಎಂದು ಚಿತ್ರಗುಪ್ತರು ವ್ಯಾಖ್ಯಾನಿಸುತ್ತಾರೆ! ಯಾವುದೇ ಜೀವಿಗೆ ತಲೆ ಅತ್ಯಂತ ಪ್ರಮುಖ ಅಂಗ. 'ತಲೆ' ಎಂಬ ಪದಕ್ಕೆ



ಬುದ್ಧಿ, ಸಾಮರ್ಥ್ಯ, ದಕ್ಷತೆ ಎಂಬ ಅರ್ಥವೂ ಇದೆ. ಇಷ್ಟಾದರೂ ತಲೆ ಅನಾದರಕ್ಕೊಳಗಾಗಿದೆ. ಕಾರಣ ನಿನ್ನ ತಲೆ, ತಲೆ ತಿರುಗುತ್ತಾ ನಿನಗೆ, ತಲೆ ತುಂಬ ಹೇನು ... ಹೀಗೆಲ್ಲ ಅವರ ಮೂದಲಿಕೆಗಳು.

ನಮ್ಮ ಮನೆ ಬಳಿ ಒಂದು ಟೆಂಟ್ ಸಿನಿಮಾ ಇದೆ. ಅಲ್ಲಿ ಚಲನಚಿತ್ರಗಳು ಈಗ ಓಡುತ್ತಿಲ್ಲ. ಕಂಪೆನಿಯೊಂದು ಆಗಿಂದಾಗ್ಗೆ ಬಿಡಾರ ಹೂಡಿ ನಾಟಕಗಳನ್ನು ಪ್ರದರ್ಶಿಸುತ್ತದೆ. ನಿನ್ನೆ 'ತಲೆಗೆ ಹನ್ನೆರಡು ರೂಪಾಯಿ' ಅಂತ 'ಅರ್ಜುನ ವಿಜಯ' ನಾಟಕದ ಪ್ರಚಾರ ಪತ್ರದ ಒಕ್ಕಣೆ ಗಮನಿಸಿದೆ. 'ಮಾಲೀಕ ಸೀನಪ್ಪ ಗುಂಡೇಲಿಯ ಕಿರಾಣಿ ಹೋಟೆಲು ಹತ್ತಿರ ಸಿಕ್ಕಿದ. ಇದೇನಪ್ಪ ಹಾಗೆಂದರೆ ಅಂತ ಕೇಳಿದೆ. ''ಚಿಕ್ಕವರು, ದೊಡ್ಡವರು ಎಲ್ಲರಿಗೂ ಒಂದೇ ರೇಟು. ಸರಳವಾಗಿ ಹಾಗೆ ಹಾಕಿದ್ದೇನೆ, ಅಷ್ಟೆ' ಅಂದ. ನನ್ನ ಕೊಂಕುತನ ಎಲ್ಲಿ ಹೋಗುತ್ತೆ? ''ಅಲ್ಲಪ್ಪ, ಒಂದು ವೇಳೆ ಯಾರಾದರೂ ತಮಗೆ ತಲೆಯೇ ಇಲ್ಲ ಅಂದರೆ ಅವರಿಗೆ ಉಚಿತ ಪ್ರವೇಶವೆ?'' ಅಂತ ಕೆಣಕಿದಾಗ ಸೀನಪ್ಪ, ''ಸುಮ್ನಿರಿ ಸಾರ್, ಯಾರು ತಾನೆ, ಆ ತರಹ ತಾವು ದಡ್ಡರು ಅಂತ ಹೇಳ್ಕೊತಾರೆ'', ಎಂದು ತಿರುಗೇಟು ನೀಡಿದ್ದ. 'ನಮ್ಮ ವಿಷಯದಲ್ಲಿ ನೀನು ತಲೆ ಹಾಕ್ಬೇಡ', 'ತಲೆಯೆಲ್ಲ ಮಾತಾಡ್ಬೇಡ,' 'ತಲೆ ತಿನ್ನಬೇಡ'... ಮುಂತಾದ ಪದಪ್ರಯೋಗಗಳು ಅಯಾಚಿತವಾಗಿ ನಮ್ಮ ಸಂಭಾಷಣೆಯಲ್ಲಿ ತೂರಿಬಂದುಬಿಡುತ್ತವೆ. ಅಂತೆಯೆ ವಿಪರೀತ ಮಾನಸಿಕ ಒತ್ತಡ ತಲೆಗೆ ಬೇನೆಯನ್ನು ತರುತ್ತದೆ. ಇದಕ್ಕೆ ತಲೆಬಿಸಿ ಎನ್ನುತ್ತೇವೆ. ತರಗತಿಯಲ್ಲಿ ಅದರಲ್ಲೂ ವಿಶೇಷವಾಗಿ ಗಣಿತ ಕಲಿಸುವಾಗ ವಿದ್ಯಾರ್ಥಿಗಳು ಸ್ವಲ್ಪ ತಲೆ ಬಳಸಿಕೊಂಡರೂ ಸಾಕು, ಮಾಸ್ತರರ ಕೆಲಸ ಅದೆಷ್ಟೊ ಹಗುರವಾಗುತ್ತದೆ. ಅರ್ಥಾತ್ ಅವರ ತಲೆಬಿಸಿ ಅಷ್ಟರಮಟ್ಟಿಗೆ ಶಮನವಾದೀತಲ್ಲವೆ? ತಲೆ ಕೆರೆದುಕೊಳ್ಳುವುದು ಯಾವುದೋ ಗಹನವಾದ ಸಮಸ್ಯೆ, ಸವಾಲಿಗೆ ಪರಿಹಾರ ತಡಕಾಡುತ್ತಿರುವ ಸೂಚನೆ ಎಂಬುದನ್ನು ಒಪ್ಪೋಣ. ಕಗ್ಗಂಟಿಗೆ ಉತ್ತರ ದೊರಕಲಿ ಬಿಡಲಿ ರವಷ್ಟು ತಲೆಕಡಿತ ಕಡಿಮೆ ಯಾಗುವುದಂತೂ ದಿಟ. ಹೇನು ವಗೈರೆಗೆ ಅಲ್ಪವಾದರೂ ನಿಯಂತ್ರಣ.

ಸರ್ಕಾರ ಹಾಗೂ ದ್ವಿಚಕ್ರ ವಾಹನ ಸವಾರರು ಆಗಿಂದಾಗ್ಗೆ ಹೆಲ್ಮೆಟ್ ಧಾರಣೆ ಕುರಿತು ಸಂಘರ್ಷಕ್ಕಿಳಿಯುವುದುಂಟು. ನನ್ನನ್ನು ಮೂರ್ಖ ಎಂದು ನನ್ನ ಮಿತ್ರ ಬಣ್ಣಿಸುತ್ತ, ''Your head is the cotton in the helmet'' ಎಂದಿದ್ದ! ನಮ್ಮ ಮನೆಯ ನಾಯಿಯ ಹೆಸರು 'ಮರಿ'. ವಾರದ ಹಿಂದೆ ವೆರಾಂಡಾದಲ್ಲಿ ಪತ್ರಿಕೆ ತಿರುವುತ್ತಿದ್ದೆ. ಮರಿ ಹಠಾತ್ತಾಗಿ ನನ್ನತ್ತ ಜೋರಾಗಿ ಬೊಗಳತೊಡಗಿತು. ಅರೆ! ಎಂದೂ ಬೊಗಳದೇ ಇರೋದು, ಅದೂ ನನ್ನತ್ತ!? ಆಶ್ಚರ್ಯಿಯಾಗಿ ಪ್ರಾಣಿ ಮನೋವೈದ್ಯರಲ್ಲಿಗೆ ಅದನ್ನು ಒಯ್ಯೋಣವೆಂದುಕೊಂಡೆ. ತಲೆಮೇಲೆ ಕೈಹೊತ್ತಾಗ ಪವಾಡವೆ ನಡೆದಿತ್ತು. ತಲೆಗೆ ಸುತ್ತಿದ್ದ ಟವೆಲ್ ಜಾರಿ ಕೆಳಗೆ ಬಿದ್ದಿತ್ತು. ಮರಿ ಬೊಗಳುವುದನ್ನು ನಿಲ್ಲಿಸಿತ್ತು. ಶೇಷು ಅಂಕಲ್, ''ನಿನ್ನ ನಾಯಿ ಎಷ್ಟೋ ವಾಸಿ, ನಮ್ಮನೆ ಡಾಲಿಗೆ ನಾನು ಎರಡು ದಿನ ಮುಖಕ್ಷೌರ ಮಾಡಿಕೊಳ್ಳದಿದ್ರೂ ಸಾಕು, ಗುರುತು ಹಿಡಿಯದೆ ಬೊಗಳುತ್ತೆ'' ಅಂದರು.

ಅಪ್ಪ! ನಿದ್ದೆಗೂ ತಲೆಗೂ ಅದೆಂಥ ಅವಿನಾಭಾವ ಸಂಬಂಧ ನೋಡಿ, ವಾಸ್ತವವಾಗಿ ಎಲ್ಲ ಅಂಗಗಳಿಗಿಂತಲೂ ತಲೆಗೆ ನಿದ್ದೆಯಿಂದ ಹೆಚ್ಚಿನ ವಿಶ್ರಾಂತಿ, ಲವಲವಿಕೆ ಲಭಿಸುವುದೆನ್ನೋಣ. ಅವರ ಮನೆ ಕಡೆ ಹೋಗುವುದಿರಲಿ, ''ಅತ್ತ ತಲೆಹಾಕಿ ಕೂಡ ಮಲಗುವುದಿಲ್ಲ, ಅಂತ ವೈರಿಗಳ ವಿರುದ್ಧ ಬಡಬಡಿಸುವವರನ್ನು ಕೇಳಿಲ್ಲವೆ? ಮರೆತಿದ್ದೆ, ಪ್ರಾಥಮಿಕ ಶಾಲೆಯಲ್ಲಿ ನಮಗೆ ಭೂಗೋಳ ಹೇಳುತ್ತಿದ್ದ ಮಾಸ್ತರರು ಸತತವಾಗಿ ಎರಡು ಎರಡೂವರೆ ತಾಸು ಪಾಠ ಹೇಳಿ ನಮಗೆಲ್ಲ ತಲೆ ಚಿಟ್ಟು ಹಿಡಿಸುತ್ತಿದ್ದರು. ಕೊನೆಗೆ ತಾವೇ ಕುರ್ಚಿಗೊರಗಿ ಮಂಕಾಗಿಬಿಡುತ್ತಿದ್ದರು. ಹೆಡ್‌ಮಾಸ್ಟರರೇ ಬಂದು ಅವರಿಗೆ ಗುಳಿಗೆ ನುಂಗಿಸಿ ಎಬ್ಬಿಸಿ ಇನ್ನೊಂದು ತರಗತಿಗೆ ಒಯ್ಯುತ್ತಿದ್ದರು. ತಮಾಷೆಯೆಂದರೆ, ಲಂಗುಲಗಾಮಿಲ್ಲದೆ ಹರಟುವುದು ಬಾಯಿಯೆ ಆದರೂ ಆಸಾಮಿಯನ್ನು ಕರೆಯುವುದು ತಲೆಹರಟೆ ಎಂದೇ! ವಿಪರೀತ ಹರಟುವ ಸ್ವಭಾವದ ಗೆಳೆಯರನ್ನು ದೂರದಿಂದಲೆ ಗಮನಿಸಿ, ತಲೆಮರೆಸಿಕೊಳ್ಳುವುದೂ ಒಂದು ಕಲೆಯೆ. ಈಚೆಗೆ ಅಪರೂಪಕ್ಕೆ ನನಗೊಂದು ಸತ್ಕಾರ ನಮ್ಮ ಏರಿಯಾದಲ್ಲಿ, ತಲೆಗೆ ಮೈಸೂರು ಪೇಟ ಹಾಕುವಾಗಲೆ ಎಡವಟ್ಟು. ಕೊಂಚ ದೊಡ್ಡ ತಲೆಯಾದ್ದರಿಂದ ಸಂಘದವರು ಖರೀದಿಸಿದ್ದ ಪೇಟ ನನ್ನ ತಲೆಗೆ ಹೊಂದಲಿಲ್ಲ. ಕಾರ್ಯಕರ್ತನೊಬ್ಬ, ''ಏನ್ಸಾರ್... ಎರಡು ದಿನ ಮೊದಲೆ ಬಂದು ಸೈಜ್ ಹೇಳಿದ್ದಿದ್ರೆ ನಿಮ್ಮ ಗಂಟೇನು ಹೋಗ್ತಿತ್ತು'', ಅಂತ ಕಿಚಾಯಿಸಿದ. ಅಧ್ಯಕ್ಷರು ಪೇಟ ಸುರುಳಿ ಬಿಚ್ಚಿ ಅಂತೂ ಹೇಗೋ ಮತ್ತೆ ತಲೆಗೆ ಯದ್ವಾತದ್ವಾ ಸುತ್ತಿದ್ದರು. ಬಕ್ಕತಲೆ ಮರೆಮಾಚಲು ತಲೆಗೆ ಧರಿಸುವ ಪರಿಕರಗಳಾದ ಟೋಪಿ, ರುಮಾಲು, ಪೇಟ ವೈವಿಧ್ಯಮಯ. ಅದಿರಲಿ ಟೋಫನ್ ಯಾರಿಗಾದರೂ ತಿಳಿದೀತೆಂದು ಅದರ ಮೇಲೆಯೇ ಆ ರಕ್ಷಣಾ ಪರಿಕರ ಧರಿಸುವವರಿಗೆ ಏನೆನ್ನೋಣ?

**ಬಿಂಡಿಗನವಿಲೆ ಭಗವಾನ್**
ನಂ. ೬೬೩, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು - ೫೬೦ ೦೫೦

# ಒಂದಿಷ್ಟು ಅರ್ಥಶಾಸ್ತ್ರ

# ಸುಖಿ ಎವರುಡಾ...?

**ಜಿ**ಡಿಪಿ ಅಂದರೆ ಯಾರಿಗೆ ತಾನೆ ಗೊತ್ತಿಲ್ಲ. ಜಿಡಿಪಿ- ಜೇಡಿಮಣ್ಣಿನ ಪಕ್ಷದ ವಿಷಯವಲ್ಲ ನಾವು ಹೇಳಿದ್ದು. 'ಗ್ರಾಸ್ ಡೊಮೆಸ್ಟಿಕ್ ಪ್ರಾಡ್ಯೂಸ್' ಅಂತ. ಕಿವಿಗಡಚಿಕ್ಕುವಂತೆ ದಿನವೆಲ್ಲಾ ಎಲ್ಲ ಮಾಧ್ಯಮಗಳೂ ಜಿಡಿಪಿ ಮಂತ್ರವನ್ನು ದೀಕ್ಷಾಮಂತ್ರದಂತೆ ಕಲಿಸಿ ಅನಕ್ಷರಸ್ಥರಿಗೂ ತಿಳಿದುಬಿಟ್ಟಿದೆ ಆ ಪದ – ಜಿಡಿಪಿ ಅಂದರೆ ತಿಳಿದೀತು. ವಿಸ್ತರಿಸಿದರೂ, ಕನ್ನಡದಲ್ಲಿ ವಿವರಿಸಿದರೂ ತಿಳಿಯದೆ ಹೋಗಬಹುದು. ಜಿಡಿಪಿಯೇ ಕನ್ನಡ ಪದ ಅಂದರೂ ಸರಿಯೆ, ಆದರೂ ಇದರ ಅರ್ಥವನ್ನ ತಿಳಿಯುವುದು ಅಗತ್ಯ. ಕಾರಣ ೭-೧೦%ರಷ್ಟು ಜಿಡಿಪಿ ಬೆಳವಣಿಗೆಯ ದರ ಆಗಿಬಿಟ್ಟರೆ ಈ ದೇಶದ ಬಡತನಕ್ಕೆ ಮೋಕ್ಷ ಸಿಗುತ್ತದೆಂದು ನಾಯಕರೆಲ್ಲಾ ಹೇಳುತ್ತಿದ್ದಾರಾಗಿ, ನಮ್ಮೆಲ್ಲರ ಭವಿಷ್ಯ ನಿಜವಾಗಿಯೂ ಇದನ್ನು ಅವಲಂಬಿಸಿದೆಯೇ ಎನ್ನುವುದೇ ವಿಷಯ.

ದೇಶ- ದೇಶಗಳ ಆರ್ಥಿಕ ವ್ಯವಸ್ಥೆಗಳನ್ನು ಪರಸ್ಪರ ಹೋಲಿಸಲು ಹಾಗೂ ನಮ್ಮದೆ ವ್ಯವಸ್ಥೆ ನಿಜವಾಗಿಯೂ ಅಭಿವೃದ್ಧಿ ಆಗುತ್ತಿದೆಯೇ ಎಂದು ತಿಳಿಯಲು ಕೆಲವು ಮಾಪಕಗಳು, ಸೂಚ್ಯಂಕಗಳು ಬೇಕಾಗುತ್ತದೆ. ಕಳೆದ ಮಹಾಯುದ್ಧದ ನಂತರ ಬಳಸುತ್ತ ಬಂದಿರುವ ಇಂಥ ಒಂದು ಸೂಚ್ಯಂಕವೆಂದರೆ ಜಿಡಿಪಿ **ಒಂದು ದೇಶ ತನ್ನ ಜನರ ಬಳಕೆಗಾಗಿ, ಉಪಭೋಗಕ್ಕಾಗಿ, ಹಾಗೂ ಬೇರೆಯವರಿಗೆ ಮಾರಲು ಒಂದು ವರ್ಷದಲ್ಲಿ ಉತ್ಪಾದಿಸುವ ಎಲ್ಲ ಸರಕುಗಳ ಸೇವೆಗಳ ಒಟ್ಟು ಮೊತ್ತ ಮಾರುಕಟ್ಟೆಯ ಬೆಲೆಯಲ್ಲಿ, ಹಣದ ರೂಪದಲ್ಲಿ - ಇದು ಜಿಡಿಪಿ.** ಯಾವ ದೇಶ ಹೆಚ್ಚು ಉತ್ಪಾದಿಸುತ್ತದೋ ಅದು ಹೆಚ್ಚು ಶ್ರೀಮಂತ. ನಾವು ಪ್ರತಿವರ್ಷವೂ ಈ ಉತ್ಪಾದನೆಯ ದರವನ್ನು ಶೇಕಡ ೧೦ರಷ್ಟು ಹೆಚ್ಚಿಸುತ್ತಾ ಹೋದರೆ, ಸುಮಾರು ಐವತ್ತು ವರ್ಷಗಳಲ್ಲಿ ಇಂದಿನ ಅಮೆರಿಕ ಸಂಯುಕ್ತ ಸಂಸ್ಥಾನದ ಮಟ್ಟಕ್ಕೆ ಭಾರತದ ಸಂಪತ್ತು ಏರಬಹುದು ಎನ್ನಿ. ಆದರೂ ಆಗಲೂ ಸರಾಸರಿ ಒಬ್ಬ ಪೌರನ ಪಾಲು ಅವರ ಮಟ್ಟಕ್ಕೆ ಏರುವುದಿಲ್ಲ. ನಮ್ಮ ಜನಸಂಖ್ಯೆ ಹೆಚ್ಚು. ಆದರೂ ಒಂದು ಹಂತದಲ್ಲಿ ಹೀಗೊಂದು ಅಂದಾಜಿನಲ್ಲಿ ನಮ್ಮ ಆರ್ಥಿಕತೆಯನ್ನು ಬೆಳೆಸುವುದರ ಅಗತ್ಯವನ್ನು ತಳ್ಳಿಹಾಕುವಂತಿಲ್ಲ. ಆದರೆ ಇದಿಷ್ಟೇ ನಮ್ಮ ಬಡತನವನ್ನು ನೀಗಲು ಸಾಕೆ ? ಇದೊಂದೆ ಮಾರ್ಗವೆ ? ಹೀಗೆ ನಿರಂತರ ವಿಕಾಸದ ದರ ಹೆಚ್ಚುತ್ತಾ ಹೋಗುವುದು ಸಾಧ್ಯವೆ ? ಎಲ್ಲ ಸಂಪತ್ತಿನ ಸೃಷ್ಟಿಯೂ, ಒಟ್ಟಾರೆ ಜಗತ್ತಿನ ಪ್ರಕೃತಿ ಸಂಪತ್ತನ್ನು ಆಧರಿಸಿದ್ದು. ಅದನ್ನು ರೂಢಿಸಿ ಸಂಪತ್ತಿನ ಬೆಳೆಯನ್ನು ತೆಗೆಯುವಾಗ ಗುರುತಿಸಬೇಕಾದ್ದು : ಪ್ರಕೃತಿ ಸಂಪತ್ತು ಒಂದು ಮಿತಿಯುಳ್ಳದ್ದು ; ಅನಂತವಾಗಿ ಬರಿದಾಗದ ಪ್ರಮಾಣದ್ದಲ್ಲ. ನೀರು, ಖನಿಜ, ಇಂಧನ, ಭೂಮಿಯ ವಿಸ್ತಾರ, ಕಾಡು ಇವೆಲ್ಲ ಎಷ್ಟಿವೆಯೋ ಅಷ್ಟೇ; ಅದರಿಂದ ನಾವು ಹೆಚ್ಚು ಹೆಚ್ಚು ತೆಗೆಯುತ್ತಾ ಹೋದರೆ ಅದು ಖಾಲಿಯಾಗುತ್ತ ಹೋಗುತ್ತದೆ; ಅದು ಅಕ್ಷೋಭ್ಯ ಅಲ್ಲ. ಬಂಡವಾಳ ವ್ಯವಸ್ಥೆ ಉಚ್ಛ್ರಾಯ ಸ್ಥಿತಿಗೆ ತಲಪುತ್ತಿದ್ದಂತೆಯೇ, ಪ್ರಕೃತಿಯನ್ನು ಉತ್ಪಾದನೆಗೆ ಮತ್ತಷ್ಟು ಲಾಭಕ್ಕೆ ಶೋಷಿಸುವ ದರ ಭೂಭಾರವಾಗುವ ಮಟ್ಟಕ್ಕೆ ಏರಿದೆ. ಹಾಗೂ ಭೂಮಿಯ ಫಲವತ್ತತೆಯನ್ನು ಹೀರುವಾಗ ಆ ಫಲವತ್ತತೆಯನ್ನು ಅದೇ ಪ್ರಮಾಣದಲ್ಲಿ ಉಳಿಸುವ, ಹಿಂದಿರುಗಿಸುವ, ಬೆಳೆಸುವ ಅಗತ್ಯವನ್ನು ಇತ್ತೀಚಿನವರೆಗೂ ನಾವು ತಿಳಿಯಲೇ ಇಲ್ಲ. ನೀರು ಗಾಳಿ ಬಿಟ್ಟಿ, ಬೇಕಾದಷ್ಟು ದೊರೆಯುತ್ತದೆ, ಬೇಕಾದಷ್ಟು, ಸಿಕ್ಕಾಪಟ್ಟೆ ಬಳಸಬಹುದು ಎಂದುಕೊಂಡಿದ್ದೆವಲ್ಲ! ಅಂದರೆ, ಮಾರ್ಗ ಏನಾದರೂ ಸರಿ, ಅದಕ್ಕೆ ಲಕ್ಷ್ಯ ನೀಡದೆ, ಜಿಡಿಪಿಯನ್ನು ನಿರಂತರವಾಗಿ ಅವ್ಯಾಹತವಾಗಿ, ನಿರ್ಭಿಡೆಯಿಂದ ಹೆಚ್ಚಿಸಿಕೊಳ್ಳುತ್ತ, ಯಾರೊಡನೆಯೋ ಪೈಪೋಟಿಗೆ ನಿಲ್ಲುವುದು ಹುಂಬತನ. ಹಾಗೂ ಈ ಮಾರ್ಗದಲ್ಲಿ ಬಡತನ – ಜಗತ್ತಿನ ಬಡತನ – ನಿವಾರಣೆ ಆಗುವುದು ಸಾಧ್ಯವಿಲ್ಲ ಎಂದು ಯಾವ ಹಳ್ಳಿಯ ಅಜ್ಜಿಯನ್ನು ಕೇಳಿದರೂ ಹೇಳಿಯಾಳು. ಪಶ್ಚಿಮದ ಬಂಡವಳಿಗ ರಾಷ್ಟ್ರಗಳು ವಸಾಹತುಶಾಹಿಯ ಮತ್ತು ಯುದ್ಧದ ಮಾರ್ಗಗಳಿಂದ ಕೆಲವು ಶತಮಾನಗಳಷ್ಟು ಕಾಲ ಹಿಂದುಳಿದ ಪ್ರದೇಶಗಳಿಗೆ ಲಗ್ಗೆ ಇಟ್ಟು, ಅವರ ಸಂಪತ್ತನ್ನು ಶೋಷಿಸಿ, ಜಿಡಿಪಿಯೇ ಬೆಳೆಯುವ ಸೂಚ್ಯಂಕವೆಂದು ಸಾರುವ ಅರ್ಥಶಾಸ್ತ್ರ ರಚಿಸಿ, ನಾವೆಲ್ಲ ಈಗಷ್ಟೆ ಎಚ್ಚತ್ತು... ಅಥವಾ ಎಚ್ಚತ್ತಿದ್ದೇವೆಯೇ ? ಯಾಕೆಂದರೆ ಈಗಲೂ ಕುರುಡರಂತೆ ಅವರದೇ ಶಾಸ್ತ್ರದ ಹಾದಿಯನ್ನು ಹಿಡಿದಿಲ್ಲವೇ ? ಈಗಷ್ಟೆ ಹೊಸ ಪೀಳಿಗೆಯ ಅರ್ಥಶಾಸ್ತ್ರಿಗಳು ಬೆಳವಣಿಗೆಯನ್ನು ಅಳೆಯಲು ಹೊಸಹೊಸ ಕಲ್ಪನೆಗಳನ್ನು ಚರ್ಚಿಸುತ್ತಿದ್ದಾರೆ. ನಾವು ಅವನ್ನು ಒಂದಿಷ್ಟು ತಿಳಿಯುವ ಅಗತ್ಯವಿದೆ. ಆಗ ನಮ್ಮ ಸರ್ಕಾರವನ್ನು ಒತ್ತಾಯಿಸಬಹುದು, ಈ ಮಾರ್ಗ ಬಿಡಿ ಅಂತ. ಜಿಡಿಪಿ ಯಾಕೆ ಸಮರ್ಪಕವಲ್ಲವೆನ್ನುವುದಕ್ಕೆ ಈ ಕೆಳಗಿನ ಕಾರಣಗಳನ್ನು ಪಟ್ಟಿ ಮಾಡಬಹುದು :

ಜಿಡಿಪಿ ಲೆಕ್ಕ ಅಷ್ಟು ಸಮರ್ಪಕವಲ್ಲ. ಕಾರಣ :

೧. ಕಪ್ಪು ಹಣದ ಲೆಕ್ಕ ಇದರಲ್ಲಿಲ್ಲ. ಒಂದಿಷ್ಟಾದರೂ ಕಪ್ಪು ಹಣವಿಲ್ಲದ ಅರ್ಥವ್ಯವಸ್ಥೆಯೇ ಇಲ್ಲ. ಕಪ್ಪು ಹಣವೇ ಬಿಳಿ ಹಣಕ್ಕಿಂತ ಹೆಚ್ಚೆನಿಸುವ ಹಿಂದುಳಿದ ವ್ಯವಸ್ಥೆಯಲ್ಲಂತೂ ಹೇಳಲೇಬೇಕಿಲ್ಲ.

೨. ಎಲ್ಲವನ್ನೂ ಹಣದ ಲೆಕ್ಕದಲ್ಲೇ ಹೇಳದಂತಹ ಆರ್ಥಿಕ ವ್ಯವಹಾರಗಳು ಹಲವಾರು ಇದ್ದು, ಅವು ಸೃಷ್ಟಿಸುವ ಸಂಪತ್ತಿನ ಲೆಕ್ಕ ಇದರಲ್ಲಿಲ್ಲ.

೩. ಜೀವನದ ಗುಣಮಟ್ಟ ಎಂಬುದು ಕೇವಲ ಹಣದ ಲೆಕ್ಕ ಅಲ್ಲ. ಬೇರೊಂದು ಲೆಕ್ಕದಲ್ಲಿ, ಕೇರಳದ ಬಡ ಅರ್ಥವ್ಯವಸ್ಥೆಯಲ್ಲಿ ಉದಾಹರಣೆಗೆ, ಅದರ ಜಿಡಿಪಿ ಕಮ್ಮಿಯಾದರೂ, ಜೀವನದ ಗುಣಮಟ್ಟ ಹೆಚ್ಚಿನದು ಎಂದು ಹೇಳಲಾಗಿದೆ.

೪. ಬಡದೇಶಗಳಲ್ಲಿ ಬೆಲೆಗಳೂ ಕೆಳಮಟ್ಟದವಾಗಿದ್ದು, ಅಲ್ಲಿಯ ಸಂಪತ್ತಿನ ಹಣರೂಪದ ಮೌಲ್ಯೀಕರಣ ವಾಸ್ತವಕ್ಕಿಂತ ಕಡಿಮೆಯಂತೆ ತೋರಿ ಅದರ ಜಿಡಿಪಿ ಕಡಿಮೆ ಎಂದೇ ತೋರಿಸುತ್ತದೆ.

೫. ಕೆಲಸಕ್ಕೆ ಬಾರದ ಗುಣಮಟ್ಟದ ಕಳಪೆ ಸಾಮಗ್ರಿಗಳನ್ನು ಉತ್ಪಾದಿಸಿದರೆ ಅವನ್ನು ಪದೇಪದೇ ಕೊಳ್ಳಬೇಕಾಗುತ್ತದೆ. ಲೆಕ್ಕಕ್ಕೆ ಮಾತ್ರ ಅದು ಜಿಡಿಪಿಯನ್ನು ಹೆಚ್ಚಿಸುತ್ತದೆ. ವಾಸ್ತವದಲ್ಲಿ ಅದು ದುರ್ಬಲ ಅರ್ಥವ್ಯವಸ್ಥೆಯಷ್ಟೆ.

೬. ನಮ್ಮ ಸಂಪತ್ತನ್ನು ಹೊರ ದೇಶದಲ್ಲಿ ಹೂಡಿ, ಕೇವಲ ಲಾಭವನ್ನು ಒಳ ತಂದಾಗ, ಅದು ಜಿಡಿಪಿ ಲೆಕ್ಕಕ್ಕೆ ಬರುವುದಿಲ್ಲ. ಆದರೆ ಅಮೆರಿಕದಂತೆ, ಯಾರೋ ಬಂದು ಹೂಡಿ ನಮ್ಮದೇ ದೇಶದೊಳಗೆ ಉತ್ಪಾದಿಸಿದರೆ, ಜಿಡಿಪಿ ಹೆಚ್ಚಾಗುತ್ತದೆ. ಆದರೂ ಅದು ನಮ್ಮದೇನೂ ಅಲ್ಲ. ಹೀಗಾಗಿ ಇಲ್ಲಿನ ಜಿಡಿಪಿ ವಾಸ್ತವಕ್ಕೆ ದೂರವಾಗುತ್ತದೆ.

೭. ಕೇವಲ ಜಿಡಿಪಿ ದೇಶದ ಭದ್ರವಾದ ವ್ಯವಸ್ಥೆಯ ಸೂಚಕವಲ್ಲ. ಇರುವ ಮೂಲ ವಸ್ತುಗಳನ್ನೆಲ್ಲ ಹಿಂದುಮುಂದು ನೋಡದೆ ಶೋಷಿಸಿ, ಕೆಲವು ವರ್ಷ ಅತಿ ಹೆಚ್ಚು ಜಿಡಿಪಿ ತೋರಿಸಬಹುದು. ಅದರ ಮುಂದಿನ ದೆಶೆಯಲ್ಲಿ ಪರಿಸರ ಕೆಟ್ಟು ಉತ್ಪಾದನೆ ತಗ್ಗಿ, ಜಿಡಿಪಿ ತಗ್ಗುತ್ತದೆ. ಇಂಥ ವ್ಯವಸ್ಥೆಯಲ್ಲಿ ಜಿಡಿಪಿ ಸಾಧಿಸಿ ಏನು ಪ್ರಯೋಜನ ?

೮. ಮಾರುಕಟ್ಟೆಯ ಬೆಲೆಯನ್ನು ಅವಲಂಬಿಸಿದ ಜಿಡಿಪಿ ಲೆಕ್ಕ, ವಾಸ್ತವ ಮೌಲ್ಯಾಧಾರಿತವಲ್ಲ. ವಾಸ್ತವ ಮೌಲ್ಯದಲ್ಲಿ ವ್ಯವಸ್ಥೆಯಲ್ಲಿ ಉಂಟಾಗುವ ನಿವ್ವಳ ಲಾಭದ ಶೇಖರಣೆ ಲೆಕ್ಕಕ್ಕೆ ಸಿಗುವುದಿಲ್ಲ.

೯. ಯುದ್ಧ ಕಾಲದಲ್ಲಿ ಹಲವು ಉತ್ಪಾದನೆಗಳ, ಮದ್ದು ಗುಂಡುಗಳ ಉತ್ಪಾದನೆಯೂ ಹೆಚ್ಚು ; ಅದೂ ಲೆಕ್ಕಕ್ಕೆ ಬಂದು ಜಿಡಿಪಿ ವಿಪರೀತ ಹೆಚ್ಚುತ್ತದೆ. ವಾಸ್ತವದಲ್ಲಿ ಜೀವನಮಟ್ಟ ಸೊರಗಿರುತ್ತದೆ.

೧೦. ಸಮಾಜದೊಳಗೆ ಅಡಗಿರುವ ಆರ್ಥಿಕ ಅಸಮಾನತೆ ಕುರಿತು ಜಿಡಿಪಿ ಲೆಕ್ಕ ಹೇಳುವುದಿಲ್ಲ. ಸದಾಶಿವನಗರದ ಶ್ರೀಮಂತರು ಕೊಬ್ಬಿದರೂ ಜಿಡಿಪಿ ಹೆಚ್ಚುತ್ತದೆ. ಸರಾಸರಿಯೂ ಹೆಚ್ಚುತ್ತದೆ. ಅದರ ಹಿಂದೆ ಆರ್ಥಿಕ ಅಸಮಾನತೆ ಹೆಚ್ಚಿಸುವ ವಿಷಮತೆ ಹುದುಗಿರುತ್ತದೆ. ಆದ್ದರಿಂದ ಕೇವಲ ಜಿಡಿಪಿಯ ಬೆನ್ನುಹತ್ತಿದರೆ ಬಡವನಿಗೇನು ಬಂತು ಭಾಗ್ಯ ?

೧೧. ಜಿಡಿಪಿಗೆ ಒತ್ತುಕೊಡುವವರು ಅದರ ನ್ಯಾಯಯುತ ಹಂಚಿಕೆಯ ವಿಷಯವನ್ನು ಚರ್ಚಿಸುತ್ತಲೇ ಇಲ್ಲ. ಕೆಲವು ಆರ್ಥಿಕ ತಜ್ಞರು ಜಿಡಿಪಿಯ ಬದಲು **ಜಿಪಿಐ** ಎನ್ನುವ ಒಂದು ಪರಿಕಲ್ಪನೆಯನ್ನು ಚರ್ಚಿಸಿದ್ದಾರೆ. **ಜೆನುಯಿನ್ ಪ್ರೋಗ್ರೆಸ್ ಇಂಡಿಕೇಟರ್**, **ವಿಶ್ವಾಸಾರ್ಹ ಪ್ರಗತಿ ಸೂಚಕಾಂಕ** ಎನ್ನುವುದು ಅದು. ಈ ಮೇಲಿನ ಟೀಕೆಗಳಿಗೆ ಇದು ಪರಿಹಾರೋಪಾಯ ಎನ್ನುತ್ತಾರೆ ಅವರು. ದೇಶದ ಎಲ್ಲ ಸ್ಥಿರಾಸ್ತಿಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಹೇಗೆ,

**ಕೆ. ಎಸ್. ಪಾರ್ಥಸಾರಥಿ**

ಎನ್ನುತ್ತದೆ ಆ ಮಾರ್ಗ. ಆದರೆ ಸ್ಥಿರತೆ ಎಲ್ಲಿ ಬಂತು? ಇಂದಿನ ಪರಿಸರದ ಅವಸ್ಥತಿಯನ್ನು ನೋಡಿದರೆ ಇಂದು ಸ್ಥಿರ ಎನ್ನುವುದು, ನಾಳೆಯೇ ಶೂನ್ಯವಾದೀತು. ನೀರು, ವಿದ್ಯುತ್ ಇಲ್ಲದಿದ್ದರೆ, ಪಟ್ಟಣದ ಸ್ಥಿರಾಸ್ತಿ ಬೆಲೆ ಕಳೆದುಕೊಳ್ಳುವಂತೆ. ಭೂತಾನ ದೇಶ **ಗ್ರಾಸ್ ನ್ಯಾಷನಲ್ ಹ್ಯಾಪಿನೆಸ್** ಎನ್ನುವ ತತ್ವದಂತೆ ಬಡರಾಷ್ಟ್ರವಾದರೂ, ಜಗತ್ತಿನ ಅತಿ ಸುಖೀ ರಾಷ್ಟ್ರವೆನಿಸಿದೆ! ಅದು **ಒಟ್ಟಾರೆ ರಾಷ್ಟ್ರೀಯ ಸುಖ ಸಂತೋಷ**. ಇದನ್ನು ಹೇಗಪ್ಪ ಸಮರ್ಪಕವಾಗಿ ಅಳೆಯುವುದು ಎನ್ನುವ ಸಮಸ್ಯೆ ಇದೆ. **ಹ್ಯಾಪಿ ಪ್ಲಾನೆಟ್ ಇಂಡೆಕ್ಸ್** ಲೆಕ್ಕದಲ್ಲಿ ವಿಶ್ವದ ಬಡರಾಷ್ಟ್ರಗಳೆಲ್ಲಾ ಸಂತೋಷವಾಗಿಯೇ ಇವೆ! ನಮ್ಮ ಸ್ವಾಮೀಜಿಗಳು ತಮ್ಮ ಬೋಧನೆಗೆ ಇದನ್ನು ಬಳಸಬಹುದು. ಬಡವಾ, ನೀ ಮಡಗಿದ್ಹಾಂಗಿರು ಅಂತ. ಏನಾದರೂ ಜಿಡಿಪಿ ಮಾತ್ರ ಇನ್ನುಮುಂದೆ ತನ್ನ ಸ್ಥಾನ ಉಳಿಸಿಕೊಳ್ಳಲಾರದು. ಜಿಡಿಪಿ ಸಾಧಿಸುವ ಈ ಹುಚ್ಚು ಪೈಪೋಟಿಗೆ ನಮ್ಮನ್ನು ಹಚ್ಚಿದ ಪಶ್ಚಿಮದ ಬಂಡವಾಳ ರಾಷ್ಟ್ರಗಳದ್ದು ನಮ್ಮನ್ನು ದಾರಿ ತಪ್ಪಿಸುವ ಸಂಚಿರಲಾರದೆ? ಅಥವಾ ಈಗಷ್ಟೆ ಒಂದಿಷ್ಟು ಜಿಡಿಪಿ ಸಾಧಿಸಲು ಸಾಧ್ಯವಾಗಿರುವ ನಮ್ಮನ್ನು, ಅದೇನೂ ಅಷ್ಟು ಮುಖ್ಯ ಅಲ್ಲ ಅಂತ ಹೇಳಿ ಪುನಃ ದಾರಿ ತಪ್ಪಿಸಲು ಹೊಸ ಹೊಸ ಸೂಚ್ಯಂಕಗಳನ್ನು ಪತ್ತೆ ಮಾಡುತ್ತಿದ್ದಾರೋ?

ಕೇವಲ ಜಿಡಿಪಿಯ ವೃದ್ಧಿ ದೇಶದ ಏಕೈಕ ಕ್ಷೇಮಾಭಿವೃದ್ಧಿಯ ಸೂಚ್ಯಂಕವಾಗಲಾರದು. ಹೊಳೆ ಹಾಯಲು ಸರಾಸರಿ ತಿಳಿದರೆ ಸಾಕೆ? ರಿಲೈಯನ್ಸ್‌ನ ಅಂಬಾನಿ ಪ್ರಪಂಚದಲ್ಲೇ ಅತಿ ಹೆಚ್ಚು ಶ್ರೀಮಂತನಾಗುತ್ತಾನಂತೆ, ೨೦೧೩ರಲ್ಲಿ. ಆಗ ಬಡ ಬೋರೇಗೌಡನ ಸರಾಸರಿ ಪಾಲು ಹೆಚ್ಚುತ್ತದೆ ಎಂದರೆ ಅದೆಷ್ಟು ಸಮಾಧಾನ ತಂದೀತೋ ಅಷ್ಟೇ ಜಿಡಿಪಿಯ ವೃದ್ಧಿಯ ವಿಷಯ. ನಮ್ಮ ಸರ್ಕಾರ ತೆರಿಗೆ ಸಂಗ್ರಹಿಸುವಾಗ ಜಿಡಿಪಿಯ ಶೇಕಡ ಇಷ್ಟು ಎಂದು ನಿಗದಿಮಾಡುತ್ತಿಲ್ಲ. ಈ ದರವೂ ಇತ್ತೀಚೆಗೆ ಜಿಡಿಪಿ ಏರಿದಂತೆ ಏರುತ್ತಿಲ್ಲ. ಅಂದರೆ ಹಂಚಿಕೆ ಹಿಂದೆ ಬಿದ್ದು ಸಂಪತ್ತಿನ ಕೇಂದ್ರೀಕರಣ ಹೆಚ್ಚುತ್ತಿದೆ. ಅದರ ಸಾಮಾಜಿಕ ಪರಿಣಾಮ ನಮಗೆಲ್ಲಾ ಗೊತ್ತು.

ಇತ್ತೀಚೆಗೆ ಚರ್ಚಿತವಾಗುತ್ತಿರುವ ಕೆಲವು ಹೊಸ ಮಾಪಕ ಸೂಚ್ಯಂಕಗಳ ವಿಷಯ ಮತ್ತಷ್ಟು ತಿಳಿಯೋಣ. ಮುಂದುವರಿದ ರಾಷ್ಟ್ರಗಳಲ್ಲಿ ಜಿಡಿಪಿ ಹೆಚ್ಚಿದ್ದರೂ, ಜೀವನಮಟ್ಟ ಆರ್ಥಿಕವಾಗಿ ಸಮರ್ಪಕವೆಂಬಂತೆ ಕಂಡರೂ,

## ಜಿಡಿಪಿ ಮತ್ತು ಗಣಿಗಾರಿಕೆ: ಚೀನಾ – ಭಾರತ ಹೇಗೆ ಮುಂದುವರಿದಿವೆ ಎಂಬುದರ ಕುರಿತು ಒಂದು ಟಿಪ್ಪಣಿ

ನಮ್ಮ ಕಬ್ಬಿಣದ ಅದಿರನ್ನೆಲ್ಲಾ ಬಗೆದು ತೆಗೆದು ರಫ್ತು ಮಾಡುತ್ತಿದ್ದೇವಲ್ಲ. ನಕ್ಸಲ್ ಗಲಾಟೆ ಎಂದು ಹೇಳುವ ನಾಲ್ಕು ರಾಜ್ಯಗಳ ವಿಸ್ತಾರ ಪ್ರದೇಶದಲ್ಲಿ ಬೆಲೆ ಬಾಳುವ ಹಲವಾರು ಖನಿಜಗಳ ನಿಕ್ಷೇಪಗಳಿವೆ. ಈ ಪ್ರದೇಶ ನಮಗೆ ಅಳಿದುಳಿದಿರುವ ಅಮೂಲ್ಯವಾದ ನಿಸರ್ಗ ಪ್ರದೇಶವೂ ಹೌದು. ಈ ಕಾಡುಗಳು ಹಾಳಾಗುವುದು, ಇಲ್ಲಿಯ ಮೂಲ ನಿವಾಸಿಗಳು – ದೇಶದ ಜನಸಂಖ್ಯೆಯ ಗಣನೀಯವಾದವರು – ಅವರನ್ನೆಲ್ಲಾ ಒಕ್ಕಲೆಬ್ಬಿಸುವುದು – ಅಂದರೆ ಎಬ್ಬಿಸುವುದು, ಅಷ್ಟೆ. ಅವರು ಬೇರೆಲ್ಲಿಗೆ ಹೇಗೆ ಹೋಗಬೇಕು, ಎಲ್ಲಿ ನೆಲಸಬೇಕು, ಹೇಗೆ ಬದುಕಬೇಕು – ಅದೆಲ್ಲ ಅಂಥ ಮಹತ್ವದ ವಿಷಯವೇನೂ ಅಲ್ಲ ಬಿಡಿ – ಅವರು ಹೇಗೂ ಅಲೆಮಾರಿಗಳು, ಬದುಕಬಲ್ಲವರು – ಇಲ್ಲಿಯ ಮುಖ್ಯ ವಿಷಯ ಅಂದರೆ ಈ ಖನಿಜಗಳನ್ನು ಬಗೆದು, ಅಗೆದು ತೆಗೆದು ಮೂರು ಕಾಸಿಗೆ ಯಾವುದೋ ದೇಶಕ್ಕೆ ಕಳುಹಿಸಿಬಿಡುವುದು ನಮ್ಮ ಜಿಡಿಪಿಯನ್ನು ಒಂದೇ ಏಟಿಗೆ ಏರಿಸಿಬಿಡುತ್ತದೆ!

ಚೀನಾ ನಮ್ಮ ಕಬ್ಬಿಣದ ಅದುರನ್ನು ಅಪಾರ ಪ್ರಮಾಣ ದಲ್ಲಿ ಆಮದು ಮಾಡಿಕೊಂಡಿತು. ನಮ್ಮ ಗಣಿದಣಿಗಳೇ ಅಲ್ಲದೆ ಸಣ್ಣಪುಟ್ಟ ಮರಿಗಳೂ ಒಂದಿಷ್ಟು ರಫ್ತು ಮಾಡಿದರು. ನನ್ನ ಪರಿಚಿತ ವ್ಯಕ್ತಿಯೊಬ್ಬ ಕುದುರೆಮುಖ ಗಣಿಯಲ್ಲಿ ರಫ್ತು ಇಲಾಖೆಯ ಸಣ್ಣ ಅಧಿಕಾರಿಯಾಗಿದ್ದವ ಮೊನ್ನೆ ಮೊನ್ನೆ ಕೆಲಸಕ್ಕೆ ರಾಜಿನಾಮೆ ಇತ್ತು, ದೊಡ್ಡ ದಣಿಗಳಿಗೆ, ಕಂಟ್ರಾಕ್ಟರ್‌ಗಳಿಗೆ ಮರಿ ಕಂಟ್ರಾಕ್ಟರ್ ಆಗಿ ಒಂದಿಷ್ಟು ಅದಿರು ಸಾಗಿಸಿ, ರಾತ್ರೋರಾತ್ರಿ ಕೋಟ್ಯಧೀಶ ಆಗಿಬಿಟ್ಟ. ಚೀನಾ ಇಂದು ಜಗತ್ತಿನಲ್ಲೇ ಅತಿಹೆಚ್ಚು ಉಕ್ಕು ತಯಾರಿಸುತ್ತದೆ. ಆಮದು ಮಾಡಿಕೊಂಡ ಅದಿರಿನ ರಾಶಿ ಹತ್ತಾರು ವರ್ಷಗಳಿಗೆ ಸಾಕಾಗುವಷ್ಟು ಬೆಟ್ಟದಷ್ಟು ಶೇಖರವಾಗಿದೆ ಅವರಲ್ಲಿ. ಅವರು ನಮ್ಮ ಅದಿರನ್ನು ಈಗ ಕೇಳುತ್ತಿಲ್ಲ. ಬೆಲೆ ಬಿದ್ದಿದೆ.

ಉಕ್ಕಿನ ತಯಾರಿಕೆಗೆ ಬೇಕಾದ ಹಲವಾರು ಮೂಲದ್ರವ್ಯಗಳು ಚೀನಾದಲ್ಲಿ ಜಾಸ್ತಿ ಇವೆ. ಬಾಕ್ಸೈಟ್, ಫ್ಲೂರೋಸ್ಪಾರ್, ಮೆಗ್ನೀಷಿಯಂ, ಮ್ಯಾಂಗನೀಸ್, ಸಿಲಿಕಾನ್ ಮೆಟಲ್, ಸಿಲಿಕಾನ್ ಕಾರ್ಬೈಡ್, ಹಳದಿ ರಂಜಕ, ಸತು – ಮುಂತಾದುವು. ಜಗತ್ತಿನಾದ್ಯಂತ ಉಕ್ಕಿನ ತಯಾರಕರು ಹಾಗೂ ಅಲ್ಯುಮಿನಿಯಂ ಮತ್ತು ಹಲವು ರಾಸಾಯನಿಕ ಉತ್ಪಾದನೆಗಳಿಗಾಗಿ ಚೀನಾದಿಂದ ಹಾಗೂ ಇನ್ನಿತರ ಮೂಲಗಳಿಂದ ಇವುಗಳನ್ನು ಕೊಳ್ಳುತ್ತಾರೆ. ಈ ವಸ್ತುಗಳ ಮಾರುಕಟ್ಟೆ, ಅಂದರೆ ಸರಕುಗಳ – ಕಮಾಡಿಟೀಸ್ ಮಾರುಕಟ್ಟೆಯನ್ನು ನಿಯಂತ್ರಿಸಬಲ್ಲ ಶಕ್ತಿ ಚೀನಾಕ್ಕೆ ಇದೆ. ಕಳೆದ ವರ್ಷ ಚೀನಾ ೩೩೬ ದಶಲಕ್ಷ ಟನ್‌ಗಳಷ್ಟು ಈ ವಿಶಿಷ್ಟ ಖನಿಜಗಳನ್ನು ಉತ್ಪಾದಿಸುತ್ತಿತ್ತು. ಹೆಚ್ಚು ರಫ್ತು ಮಾಡುತ್ತಿತ್ತು. ಆದರೆ ಈ ಬಾರಿ ಕೇವಲ ೧೨ ದಶಲಕ್ಷ ಟನ್ ಮಾತ್ರ ರಫ್ತಾಯಿತು. ಹೀಗಾಗಿ ಒಂದು ಲೆಕ್ಕದಲ್ಲಿ ಈ ವಸ್ತುಗಳ ಕೊರತೆಯಿಂದಾಗಿ ಜಾಗತಿಕವಾಗಿ ಬೇರೆಡೆ ಉತ್ಪಾದಿಸಿದ ಉಕ್ಕಿನ ಬೆಲೆ ಹೆಚ್ಚಾಯಿತು. ಚೀನಾದ ಉಕ್ಕು ಟನ್ನಿಗೆ ೨೬೮ ಡಾಲರಿನಷ್ಟು ಕಡಿಮೆ ಬೆಲೆಯಲ್ಲಿ ಉತ್ಪಾದಿತವಾಗುತ್ತಿದೆ. ಉಕ್ಕಿನ ವ್ಯಾಪಾರದ ಪೈಪೋಟಿಯಲ್ಲಿ ಚೀನದ ಕೈ ಮೇಲಾಗಿದೆ. ಈಗ ಪಶ್ಚಿಮದ ದೇಶಗಳು ವಿಶ್ವವ್ಯಾಪಾರ ಸಂಸ್ಥೆಯ ಮುಂದೆ ಚೀನಾದ ವಿರುದ್ಧ ಪುಕಾರು ನೀಡಿವೆ. ಈ ವಸ್ತುಗಳ ರಫ್ತಿನ ಮೇಲೆ ಚೀನಾ ಅಪಾರವಾದ ತೆರಿಗೆ ವಿಧಿಸಿದೆಯಂತೆ. ಚೀನಾ ಹೇಳುತ್ತೆ ''ಹಾಗಲ್ಲ, ನಮ್ಮ ಪರಿಸರವನ್ನು ರಕ್ಷಿಸಿಕೊಳ್ಳಬೇಕು, ಮುಂಚಿನಷ್ಟೆ ಈಗ ಈ ಖನಿಜವನ್ನು ತೆಗೆಯುತ್ತಿಲ್ಲ'' ಎನ್ನುತ್ತದೆ.

ಚೀನಾ ಏಕೆ ಇಂದು ವಿಶ್ವದ ಅಗ್ರ ಅರ್ಥವ್ಯವಸ್ಥೆಯಾಗುವತ್ತ ಧಾವಿಸುತ್ತಿದೆ ಎಂದು ತಿಳಿಯಲು ಇದು ಒಂದು ಉದಾಹರಣೆ. ''ಮನೆಗೆ ಬೆಂಕಿ ಹಾಕಿ ಪುರಿ ಆರಿಸಿಕೊಂಡರು'' ಎನ್ನುವ ಗಾದೆಯೊಂದಿದೆ. ಸದ್ಯದ ಲಾಭಕ್ಕೋಸ್ಕರ ಮುಂದಿನ ಪೀಳಿಗೆಯ ಹಿತವನ್ನು ಕಡೆಗಣಿಸಿ ನಮ್ಮ ಅಮೂಲ್ಯ ಸರಕುಗಳನ್ನೆಲ್ಲ ಕ್ಷಿಪ್ರಗತಿಯಲ್ಲಿ ಶೋಷಿಸುವ ನಮ್ಮ ಉದ್ಯಮಿಗಳು ಮತ್ತು ಅವರಿಂದ ಅವರು ನಿಯಂತ್ರಿಸಲ್ಪಡುವ ಸರ್ಕಾರಕ್ಕೆ ಈ ಗಾದೆ ಒಪ್ಪುತ್ತದೆಯಲ್ಲವೆ? ಇಷ್ಟಕ್ಕೂ ನೆನಪಿಸಿಕೊಳ್ಳಿ. ಚೀನಕ್ಕಿಂತ ಮುಂಚೆಯೇ ನಮ್ಮ ಉಕ್ಕಿನ ಕಾರ್ಖಾನೆಗಳು ಅಸ್ತಿತ್ವಕ್ಕೆ ಬಂದುವು. ಇದರ ಅತ್ಯುತ್ತಮ ತಂತ್ರಜ್ಞಾನ ನಮ್ಮಲ್ಲಿ ಲಭ್ಯ. ಆದರೆ ದೇಶೀ ಭಾವನೆಯ ದಸ್ತೂರ್ ಅಂಥ ಕಂಪನಿಗಳನ್ನು ಮೂಲೆಗೆಡವಿದ ನಮ್ಮ ನೀತಿಗಳು, ಸ್ವಯಂ ನಿರ್ಭರ ಸ್ವತಂತ್ರ ರಾಷ್ಟ್ರವನ್ನಾಗಿ ನಮ್ಮನ್ನು ಉಳಿಸಿಕೊಳ್ಳಬಲ್ಲವೆ? ಈ ಕುರಿತು ಹೆಕ್ಕಿದಷ್ಟೂ ಸಿಗುವ ಮಾಹಿತಿ ಇದೆ. ಯುವಕರು ಕುಳಿತು ಚರ್ಚಿಸಬೇಕು. ನಾವು ಇನ್ನೂ ಮೂಲ ಕಚ್ಚಾವಸ್ತುಗಳನ್ನು ರಫ್ತುಮಾಡುವ ಹಿಂದುಳಿದ ರಾಷ್ಟ್ರವಾಗಿಯೇ ಮುಂದುವರಿಯಬೇಕೆ?

ಎಚ್‌ಡಿಐ ಅಂದರೆ ಮಾನವ ಅಭಿವೃದ್ಧಿ ಸೂಚ್ಯಂಕ. ಈ ಪರಿಕಲ್ಪನೆಯನ್ನು ಪಾಕಿಸ್ತಾನದ ಅರ್ಥಶಾಸ್ತ್ರಿ ಮಹಬೂಬ್ ಉಲ್‌ಹಕ್ ಮತ್ತು ಭಾರತದ ಅರ್ಥಶಾಸ್ತ್ರಿ ಅಮರ್ತ್ಯ ಸೇನ್ ಸಿದ್ಧಪಡಿಸಿದರು. ಆರ್ಥಿಕ ಪ್ರಗತಿ ಎಲ್ಲ ಸ್ತರವನ್ನು ತಲುಪಿದ್ದರೆ ಹಲವಾರು ಒಳ್ಳೆಯ ಪರಿಣಾಮಗಳು ಆಗಬೇಕು. ಅಂಥವು ಆಗಿದ್ದರೆ ಅವನ್ನು ಗಮನಿಸಿ, ಅಳೆದು, ಸಮ್ಮಿಳಿತಗೊಳಿಸಿ, ಇಂಥದೊಂದು ಸೂಚ್ಯಂಕ ಮಾಡಿದರೆ, ಆಗ ಒಂದು ದೇಶವನ್ನು 'ಅಭಿವೃದ್ಧಿಯಾಗಿರುವ, ಅಭಿವೃದ್ಧಿಶೀಲ, ಹಿಂದುಳಿದ, ತೀರ ಹಿಂದುಳಿದ ದೇಶ' ಎಂದು ವಿಂಗಡಿಸುವುದು ಸಾಧ್ಯ. ಅಂದರೆ ಕೇವಲ ಸರಾಸರಿ ತಲಾ ಜಿಡಿಪಿಗಿಂತ ಬಹಳ ಉತ್ತಮವಾದ ಸೂಚ್ಯಂಕ ದೊರೆಯುತ್ತದೆ. ಎಚ್‌ಡಿಐ ಲೆಕ್ಕದಲ್ಲಿ ಆಯುಷ್ಯ ಅಭಿವೃದ್ಧಿ (ಲೈಫ್ ಎಕ್ಸ್‌ಪೆಕ್ಟೆನ್ಸಿ), ಸಾಕ್ಷರತೆ, ಶಿಕ್ಷಣ, ಆರೋಗ್ಯ, ಜೀವನಮಟ್ಟ ಇವುಗಳನ್ನು ಲೆಕ್ಕ ಹಾಕುತ್ತಾರೆ. ಸೌಖ್ಯಜೀವನದ, ಅದರಲ್ಲೂ ಮಗುವಿನ ಆರೋಗ್ಯ ಜೀವನದ ಮಟ್ಟವನ್ನು ಈ ಸಂಖ್ಯೆ ಸೂಚಿಸುತ್ತದೆ. ಸಂಪೂರ್ಣ ತೃಪ್ತಿಕರವಾದ ಎಚ್‌ಡಿಐ ಎಂದರೆ ಒಂದು ಪೂರ್ಣ ಅಂಕ. ಕೋಷ್ಟಕದಲ್ಲಿ ಯಾರೂ ಸಂಪೂರ್ಣ ಅಂಕ ಪಡೆದಿಲ್ಲ! ಯಾರೂ ಈ ಲೆಕ್ಕದಲ್ಲಿ ಸಂಪೂರ್ಣ ಸುಖಿ ಅಲ್ಲ ಅನ್ನಬಹುದೇನೋ!

**ಕೋಷ್ಟಕ**

**ಕೆಲವು ದೇಶಗಳ ಜಿಡಿಪಿ, ಎಚ್‌ಡಿಐ ಹೋಲಿಕೆ**

| | ಜಿಡಿಪಿ | | ಎಚ್‌ಡಿಐ | |
|---|---|---|---|---|
| ದೇಶ | ತಲಾ ಡಾಲರ್ ಆದಾಯ ಪಿಪಿಪಿಯಲ್ಲಿ | ಶ್ರೇಯಾಂಕ | ಶ್ರೇಯಾಂಕ | ಸೂಚ್ಯಂಕ |
| ಭಾರತ | ೩೧೦೦ | ೧೬೪ | ೧೩೪ | ೦.೬೧೨ |
| ಅಮೆರಿಕ ಸಂ.ಸಂ. | ೪೬೦೦೦ | ೧೧ | ೧೩ | ೦.೯೫೬ |
| ಫ್ರಾನ್ಸ್ | ೩೨೬೦೦ | ೪೧ | ೮ | ೦.೯೬೧ |
| ಇಂಗ್ಲೆಂಡ್ | ೩೪೮೦೦ | ೩೫ | ೨೧ | ೦.೯೪೭ |
| ಜರ್ಮನಿ | ೩೪೧೦೦ | ೩೭ | ೨೨ | ೦.೯೪೭ |
| ಜಪಾನ್ | ೩೨೭೦೦ | ೪೦ | ೧೦ | ೦.೯೬೦ |
| ಬ್ರೆಜಿಲ್ | ೧೦೧೦೦ | ೧೦೭ | ೭೫ | ೦.೮೧೩ |
| ನೆದರ್‌ಲ್ಯಾಂಡ್ಸ್ | ೩೯೫೦೦ | ೨೧ | ೬ | ೦.೯೬೪ |
| ಪಾಕಿಸ್ತಾನ | ೨೫೦೦ | ೧೭೧ | ೧೪೧ | ೦.೫೭೨ |
| ಶ್ರೀಲಂಕಾ | ೪೫೦೦ | ೧೫೦ | ೧೦೨ | ೦.೭೫೯ |
| ಬಂಗ್ಲಾದೇಶ | ೧೫೦೦ | ೧೯೮ | ೧೪೬ | ೦.೫೪೩ |
| ಭೂತಾನ | ೪೭೦೦ | ೧೪೫ | ೧೩೨ | ೦.೬೧೯ |
| ಚೀನಾ | ೬೬೦೦ | ೧೨೮ | ೯೨ | ೦.೭೭೨ |
| ದಕ್ಷಿಣ ಆಫ್ರಿಕಾ | ೧೦೩೦೦ | ೧೦೪ | ೧೨೯ | ೦.೬೮೩ |
| ಕೆನಡ | ೩೮೨೦೦ | ೨೭ | ೪ | ೦.೯೬೬ |
| ಆಸ್ಟ್ರೇಲಿಯ | ೪೦೦೦೦ | ೧೯ | ೨ | ೦.೯೭೦ |
| ಮಾರಿಷಸ್ | ೧೩೦೦೦ | ೮೪ | ೮೧ | ೦.೮೦೪ |
| ರಷ್ಯಾ | ೧೫೧೦೦ | ೭೨ | ೭೧ | ೦.೮೧೭ |
| ಇಂಡೊನೇಷಿಯ | ೪೦೦೦ | ೧೫೫ | ೧೧೧ | ೦.೭೩೪ |
| ಮಲೇಷಿಯ | ೧೪೯೦೦ | ೭೪ | ೬೬ | ೦.೮೨೯ |
| ಸಿಂಗಪೂರ | ೫೨೨೦೦ | ೮ | ೨೩ | ೦.೯೪೪ |
| ನೇಪಾಳ | ೫೫೩ | ೧೪೪ | ೧೪೪ | ೦.೫೫೩ |
| ಬರ್ಮ | ೫೮೬ | ೧೩೮ | ೧೩೮ | ೦.೫೮೬ |
| ಯೂರೋಪಿಯನ್ ಯೂನಿಯನ್ | ೩೨೫೦೦ | ೪೨ | - | - |
| ಜಗತ್ತು | ೧೦೪೦೦ | ೧೦೧ | - | - |

ಗಮನಿಸಿ :

(೧) ಇಲ್ಲಿಯ ಜಿಡಿಪಿ ೨೦೦೯ರ ಅಂದಾಜು. ಪಿಪಿಪಿಯಲ್ಲಿ, ಅಮೆರಿಕಾದ ಡಾಲರಿನಲ್ಲಿ, ಸಿಐಎ ವರ್ಲ್ಡ್ ಫ್ಯಾಕ್ಟ್‌ಬುಕ್‌ನಿಂದ

(೨) (ಅ) ಎಚ್‌ಡಿಐ - ೨೦೦೭ರ ಅಂದಾಜು, ೨೦೦೯ರಲ್ಲಿ ಪ್ರಕಟಿತ, ವಿಶ್ವಸಂಸ್ಥೆಯ ಲೆಕ್ಕ (ಆ) ಪಿಪಿಪಿ ಎಂದರೆ ಏನು ಎಂದು ಹಿಂದಿನ ಲೇಖನದಲ್ಲಿ ವಿವರಿಸಿದೆ. ಒಂದು ಡಾಲರಿಗೆ ವಿದೇಶಿ ವಿನಿಮಯ ಮಾರುಕಟ್ಟೆಯಲ್ಲಿ ೫೦ ರೂ. ಎನ್ನಿ. ೫೦ ರೂಪಾಯಿಗೆ ನಮ್ಮೂರಲ್ಲಿ ಒಂದು ಊಟ ಸಿಗುತ್ತೆ. ಒಂದು ಊಟಕ್ಕೆ ಅಮೆರಿಕದಲ್ಲಿ ೧೦ ಡಾಲರು ಎನ್ನಿ ಅಥವಾ ಅದು ೫೦೦ ರೂ. ಆಗ ಪಿಪಿಪಿಯಲ್ಲಿ ಒಂದು ಡಾಲರಿಗೆ ಐದು ರೂಪಾಯಿ ಆಗುತ್ತೆ. ವಾಸ್ತವದಲ್ಲಿ ಹತ್ತಾರು ಸರಕುಗಳ ಬೆಲೆಯನ್ನು ಗಣನೆಗೆ ತೆಗೆದುಕೊಂಡು ಒಂದು ಸರಾಸರಿಯನ್ನು ಪಿಪಿಪಿ ಎಂದು ನಿಗದಿ ಮಾಡಲಾಗುತ್ತದೆ. ಆದ್ದರಿಂದಲೇ ಅಮೆರಿಕದಲ್ಲಿ ೫೦೦೦ ಡಾಲರ್ ಪಡೆಯುವವ ಭಾರತಕ್ಕೆ ವರ್ಗವಾದರೆ ಅವನಿಗೆ ೫೦೦೦ x ೫೦ ರೂಪಾಯಿ ಕೊಡುವುದಿಲ್ಲ. ಪಿಪಿಪಿ ಅಲ್ಲಿ ೫೦೦೦ x ೫ ರೂಪಾಯಿ ಕೊಡುತ್ತಾರೆ. ವಾಸ್ತವ ಜೀವನಮಟ್ಟದ ಬೆಲೆ ಅದು. ಪರ್ಚೇಸ್ ಪವರ್ ಪ್ಯಾರಿಟಿ-ಕೊಳ್ಳುವ ಶಕ್ತಿಯ ಸಮೀಕರಣ. ಎಚ್‌ಡಿಐ ಇದನ್ನು ಹೊರಗೆಡವುತ್ತದೆ. (ಇಲ್ಲಿಯ ಲೆಕ್ಕ ವಾಸ್ತವದಲ್ಲಿ ಕೇವಲ ಚರ್ಚೆಗಾಗಿ) (ಇ) ನಮ್ಮ ರಿಸರ್ವ್ ಬ್ಯಾಂಕ್ ರೂಪಾಯಿ-ಡಾಲರ್ ಮಾರುಕಟ್ಟೆಯ ಬೆಲೆಯನ್ನು ೪೦ರಿಂದ ೫೫ ರೂ. ಮಧ್ಯೆ ತಾರಾಡುವಂತೆ ನಿಯಂತ್ರಿಸುತ್ತಿದೆ. ಈ ನಿಯಂತ್ರಣ ತೆಗೆದುಬಿಟ್ಟರೆ ಅದು ೯೫ರಿಂದ ೧೧೦ ರೂ.ಗಳಲ್ಲಿ ಪತನವಾಗಬಹುದು. ಈ ಎರಡನೆಯ ಲೆಕ್ಕವನ್ನು REER ರಿಯಲ್ ಎಕ್ಸ್‌ಛೇಂಜ್ ರೇಟ್ – ಎಂದು ಹೇಳುತ್ತಾರೆ. ಚೀನಾ ತನ್ನ ಕರೆನ್ಸಿಗೆ ಸಂಬಂಧಪಟ್ಟಂತೆ ಸಂಪೂರ್ಣವಾಗಿ ಈ ಬೆಲೆಯನ್ನು ನಿಯಂತ್ರಿಸಿ, ಅಂದರೆ ತಾರಾಡಲು ಬಿಡದೆ ಚೀನದ ಹಣದ ಬೆಲೆಯನ್ನು ತಗ್ಗಿಸಿ, ಜಗತ್ತಿನಾದ್ಯಂತ ಅದರ ವಿರುದ್ಧ ಅಸಮಾಧಾನ ಉಂಟಾಗಿದೆ.

(೩) ಜಿಡಿಪಿ ಹೆಚ್ಚಿದ್ದರೂ ಎಚ್‌ಡಿಐ ಕಡಿಮೆ ಇರುವ ದೇಶಗಳಲ್ಲಿ ಸೌಖ್ಯ ಜೀವನದ ಕೊರತೆ ಕಂಡುಬರುತ್ತದೆ. ಹಾಗೆಯೇ ತೀರ ಕಡಿಮೆ ಜಿಡಿಪಿಯ ಜತೆ ಜತೆಗೆ ತೀರ ಕಡಿಮೆ ಎಚ್‌ಡಿಐ ಅನ್ನೂ ಕಾಣಬಹುದು. ಅಂದರೆ ಒಂದು ಸಾಧಾರಣ ಮಟ್ಟದ ಜಿಡಿಪಿ, ಒಂದಿಷ್ಟು ಸೌಖ್ಯಜೀವನಕ್ಕೆ ಅಗತ್ಯವೆಂದು ಹೇಳಬಹುದು. ನೀವು ಸುಖಿಯೇ ಎಂಬ ಪ್ರಶ್ನೆಗೆ ಉತ್ತರ ಕೇವಲ ಭಾವುಕವಲ್ಲ. ಅದನ್ನು ಒಂದಿಷ್ಟು ಅಳೆಯುವುದೂ ಸಾಧ್ಯವಿದೆ.

(೪) ಈ ಪಟ್ಟಿಯಲ್ಲಿ ನಮ್ಮ ಪರಿಸ್ಥಿತಿ ಈ ಎರಡೂ ಅಳತೆಯಲ್ಲೂ ಕೇವಲ ಪಾಕಿಸ್ತಾನ, ನೇಪಾಳ, ಬರ್ಮಾ ದೇಶಗಳಿಗಿಂತ ಉತ್ತಮ ಅಷ್ಟೆ. ವಿಶ್ವದಲ್ಲೆ ಮೂರನೆಯ ಪ್ರಮಾಣದ ಆರ್ಥಿಕತೆ ಎಂದು ಹೇಳಿಕೊಳ್ಳಲಾರಂಭಿಸಿದ್ದೇವಲ್ಲವೆ? ಒಂದು ಮುಖ್ಯ ಕಾರಣ ಜನಸಂಖ್ಯೆ ಹಿರಿದು. ಸರಾಸರಿ ಕಿರಿದಾಗುತ್ತದೆ. ಈ ಜನಸಂಖ್ಯೆಗೆ ತಕ್ಕಷ್ಟು ಪ್ರಕೃತಿ ಸಂಪತ್ತು ನಮ್ಮಲ್ಲಿ ಲಭ್ಯವೆ? ಬಡತನವನ್ನು ಪರಿಹರಿಸುವ ನಮ್ಮ ಸಮಸ್ಯೆಯ ಅಗಾಧತೆಯನ್ನು, ಗಾಂಭೀರ್ಯತೆಯನ್ನು ಈ ಕೋಷ್ಟಕ ತಿಳಿಸುತ್ತದೆ. ಇರುವ ಸಂಪತ್ತಿನಲ್ಲೂ ಎಚ್‌ಡಿಐ ಹೆಚ್ಚಿಸುವ ಬಗೆ ಹುಡುಕಬೇಕು.

ಅಲ್ಲಿಯ ಒಟ್ಟಾರೆ ಸಾಮಾಜಿಕ ಸಮಾಧಾನ, ಸುಖ ಸಂತೋಷಗಳ ಲೆಕ್ಕದಲ್ಲಿ, ಅಳೆಯುವುದಕ್ಕೆ ಕಷ್ಟವಾದರೂ, ಅಸಮರ್ಪಕತೆ ತಲೆದೋರಿದೆ. ಬರೇ ಡಾಲರಿನ ರಾಶಿಯಲ್ಲದ ಪರ್ಯಾಯ ಅಳತೆ ಮಾಡಬೇಕು ಎನ್ನುತ್ತಾರೆ ಡೇವಿಡ್ ಬ್ಲಾಂಚ್ ಪ್ಲವರ್ ಮತ್ತು ಆಂಡ್ರ್ಯೂ ಓಸ್ವಾಲ್, **ಸೌಖ್ಯ ಮತ್ತು ಮಾನವ ಅಭಿವೃದ್ಧಿ ಸೂಚ್ಯಂಕದ ವಿರೋಧಾಭಾಸ** ಎಂಬ ಲೇಖನದಲ್ಲಿ ಸಾಕಷ್ಟು ಸಂಪತ್ತು ಇದ್ದೂ ಸೌಖ್ಯವಿಲ್ಲದಿದ್ದರೆ, ಬೇರಾವುದಾದರೂ ಮಾರ್ಗದಲ್ಲಿ ಅದನ್ನು ಹುಡುಕಬೇಕು ಮುಂದುವರಿದ ರಾಷ್ಟ್ರಗಳು. ಅದೇ ಬಡತನ, ರೋಗರುಜಿನ ಬಾಧಿತ ಹಿಂದುಳಿದ ರಾಷ್ಟ್ರಗಳು ಇನ್ನೂ ಸ್ವಲ್ಪಕಾಲ ಆರ್ಥಿಕ ಬೆಳವಣಿಗೆಯ ಸೂಚ್ಯಂಕಕ್ಕೆ ಒತ್ತುಕೊಡಬೇಕು ಎನ್ನುತ್ತಾರೆ. ವಿಶ್ವಸಂಸ್ಥೆ ಈಗ 'ಹ್ಯೂಮನ್ ಡೆವಲಪ್‌ಮೆಂಟ್ ಇಂಡೆಕ್ಸ್' ಎನ್ನುವ **ಹೆಚ್‌ಡಿಐ**ಯನ್ನು ಪರ್ಯಾಯವಾಗಿ ಸೂಚಿಸಿದೆ. ಇದರ ಲೆಕ್ಕದಲ್ಲಿ ಒಂದು ಸಮಾಜದಲ್ಲಿನ ವ್ಯಕ್ತಿಯ ಶಿಕ್ಷಣದ ಮಟ್ಟ, ಎಷ್ಟು ವರ್ಷ

ಬದುಕುತ್ತಾನೆ – ಜೀವಾವಧಿ – ಲೈಫ್‌ಸ್ಪ್ಯಾನ್ ಮತ್ತು ಪರಿಷ್ಕೃತ ವಾಸ್ತವಿಕ ತಲಾ ಆದಾಯ ಇವು ಮೂರನ್ನು ಒಟ್ಟಿಗೆ ಸೇರಿಸಿದ ಒಂದು ಲೆಕ್ಕ. ಅದೇ ಹ್ಯೂಮನ್ ಡೆವಲಪ್‌ಮೆಂಟ್ ಇಂಡೆಕ್ಸ್ - ಮಾನವ ಅಭಿವೃದ್ಧಿ ಸೂಚ್ಯಂಕ. ಇದನ್ನು ಪ್ರಗತಿಯ ಅಳತೆಗೋಲಾಗಿ ವಿಶ್ವಸಂಸ್ಥೆ ಸ್ವೀಕರಿಸಿದೆ.

ಹೀಗೊಂದು ಮಾತು : ಶ್ರೀಮಂತ ರಾಷ್ಟ್ರವೆನಿಸಿರುವ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಹೆಚ್ಚು ಸಂಖ್ಯೆಯ ಮಾನಸಿಕ ಖಿನ್ನತೆಯ ರೋಗಿಗಳಿದ್ದಾರೆ. ಆದರೂ ಅಲ್ಲಿಯ ಸೌಖ್ಯದ ಸೂಚ್ಯಂಕ ಚೆನ್ನಾಗಿದೆ. ಕಾರಣ ಅಲ್ಲಿ ಬೇಕಾದಷ್ಟು ಖಿನ್ನತೆಯನ್ನು ಸುಧಾರಿಸುವ ಔಷಧಿಗಳು ಲಭ್ಯ! ಚೀನಾದಲ್ಲೂ ಖಿನ್ನತೆ ಹೆಚ್ಚಿದೆಯಂತೆ. ಅಲ್ಲಿ ಜನರಿಗೆ ಕೋಳಿ ಕಾಳಗ ನೋಡುವ ಚಟ, ಅದರಲ್ಲಿ ಅವರಿಗೆ ಸೌಖ್ಯ ದೊರೆಯುತ್ತದೆಯಂತೆ. ಭಾರತದಲ್ಲೂ ಬಡತನದಿಂದ ಬಳಲಿ ದುಃಖಿಸುವವರು ಸುಖದಿಂದ ಇರಬಹುದೇ ಎಂಬ ಗುಮಾನಿ ಇದೆ. ಬಹುಶಃ ಹೌದು ಎನ್ನಬಹುದು. ದುಃಖೀ ರಾಮನ ಜಪವನ್ನು ಬೋಧಿಸುವ ಬಾಬಾಗಳು ಬೀದಿಬೀದಿಗೂ ಕಾಸಿಗೊಂದು ಕೊಸರಿಗೊಂದು ಲಭ್ಯವಿಲ್ಲವೆ ? ಅಂದರೆ ಸೌಖ್ಯವೆಂಬುದು ಆರ್ಥಿಕ ವಿಷಯವೇ ಅಲ್ಲ, ಅದು ಮಾನಸಿಕ ವಿಷಯ ಎನ್ನುವವರ ಗುಂಪೇ ಹುಟ್ಟಿಕೊಂಡಿದೆ. ಆದಷ್ಟೂ ದುಃಖ ಮತ್ತು ಕಾಯಿಲೆ ಇಲ್ಲದೆ ಇರುವ ಮತ್ತು ಹಾಗಾದಾಗ ಅದಕ್ಕೆ ಪರಿಹಾರ ದೊರಕಿಸುವ ಸಮಾಜ ರಚನೆ ನಮಗೆ ಬೇಕು. ಪಶ್ಚಿಮದ ಬಂಡವಾಳ ನಮ್ಮನ್ನು ಬಂಡವಳಿಗ ಮಾರ್ಗದ ಜಿಡಿಪಿ ಬೆನ್ನು ಹತ್ತಿಸಿದಂತೆಯೇ, ಮತಧರ್ಮಿಗಳು ಜಗತ್ತಿನಾದ್ಯಂತ ದುಃಖಿಗಳಿಗೆ ಸೌಖ್ಯದ ಗೇಟ್‌ಪಾಸ್ ನೀಡುವುದು ಹೆಚ್ಚುತ್ತಿದೆ ಎನಿಸುತ್ತದೆ. ಅವರಿಬ್ಬರಿಗೂ ಅಷ್ಟೊಂದು ನಂಟು! ಕಾರ್ಲ್ ಮಾರ್ಕ್ಸ್ ತನ್ನ ಇಡೀ ಸಾಹಿತ್ಯದಲ್ಲೆಲ್ಲೂ ಸುಖಕ್ಕೆ ಸಂಪತ್ತಿನ ಬೆನ್ನು ಬೀಳುವುದು ಏಕೈಕ ಮಾರ್ಗವೆಂದು ಹೇಳಿಲ್ಲ. ಕಾರಣ ಅವನ ಶಾಸ್ತ್ರ ಕೇವಲ ಅರ್ಥಶಾಸ್ತ್ರವಲ್ಲ. ಅದು ಸರ್ವಾಂಗೀಣ ಸಮಾಜಶಾಸ್ತ್ರ.

ಆರ್ಥಿಕ ಪ್ರಗತಿ ಬೇಕು. ಅದರ ಜತೆಗೇ ಸಾಮಾಜಿಕ ನ್ಯಾಯ, ಹಲವು ಹಂತದ ಅಸಮಾನತೆಯ ಪರಿಹಾರ, ಅತಿಹೆಚ್ಚು ಬಡತನ, ಸಿರಿತನ ಅಂತರವಿರದ ಸ್ಥಿತಿ ಇರಬೇಕು. ಎಲ್ಲರಿಗೂ ಬಯಸಿದಷ್ಟು ಶಿಕ್ಷಣ ಅವಕಾಶ, ಎಲ್ಲರಿಗೂ ಸಾಂಸ್ಕೃತಿಕವಾಗಿ ಜೀವನ ನಡೆಸಲು ಅವಕಾಶ, ಸಾಕಷ್ಟು ಉದ್ಯೋಗ, ಸಾಕಷ್ಟು ವಿಶ್ರಾಂತಿ, ಎಲ್ಲರಿಗೂ ಮುಕ್ತವಾದ ಉತ್ತಮ ಆರೋಗ್ಯ ಸೇವೆ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಅಭಿವೃದ್ಧಿಯಾಗಬೇಕು. ಕೇವಲ ಸಂಪತ್ತಿನ ಬೆಳವಣಿಗೆ ಅಭಿವೃದ್ಧಿಯ ಸೂಚ್ಯಂಕವಾಗಲಾರದು. ಆದರೆ ಅದಿಲ್ಲದೆಯೂ ಆಗುವುದಿಲ್ಲ. ಆ ಹಲವಾರು ಕ್ಷೇತ್ರಗಳನ್ನು ಅಭಿವೃದ್ಧಿಪಡಿಸಲು ಈ ಸಂಪತ್ತು ಬೇಕು. ಜಿಡಿಪಿ ಮತ್ತು ಷೇರುಪೇಟೆಯ ಸೂಚ್ಯಂಕದ ಮೇಲೆ ನಿಗಾ ಇಡುತ್ತಾ ನಮ್ಮ ಆಳುವವರ್ಗ ದೇಶಾದ್ಯಂತ ಅರಾಜಕತೆಯ ಪ್ರಕ್ಷೋಭೆಯನ್ನು ಉಂಟುಮಾಡಿ, 'ಮನೆಯೊಳಗೆ ಮನೆಯೊಡನೆಯನಿದ್ದಾನೆಯೋ ಇಲ್ಲವೋ' ಎಂಬ ಸಂದೇಹಕ್ಕೆ ಎಡೆಗೊಟ್ಟಿರುವುದು ಇಂದಿನ ವಾಸ್ತವ. ಜಿಡಿಪಿಯ ಕಿಂದರಜೋಗಿಯ ಪೀಪಿ ಜನರನ್ನು ಇನ್ನು ಮರುಳು ಮಾಡಲಾಗುವುದಿಲ್ಲ.

''ಸುಖಿ ಎವರುಡಾ ಸುಮುಖಿ ಎವರೋ ?...

ಸತ್ಯಮು ತಪ್ಪದ... ಸಕಲ ಲೋಕಕು ಭೃತ್ಯುಡೈ... ದೈವಭೇದಮು ಲೇಕ...

...ಸುಸ್ವರಪು ಗಾನ-ಮುತೋ ನಿರಂತರಮು...

ಕಾನಡ ರಾಗದ ಶ್ರೀ ತ್ಯಾಗರಾಜರ ಈ ಸುಂದರ ಕೃತಿಯಲ್ಲಿ ಅಡಗಿರುವ ಸುಖದ ಕಲ್ಪನೆ ಯಾರಿಗೆ ಬೇಡ ? ಸತ್ಯಸಂಧನಾಗಿರಬೇಕು. ಪ್ರಸನ್ನಮುಖ ತೋರಿಸಬೇಕು, ಎಲ್ಲರಲ್ಲೂ ಕಿಂಕರಭಾವ ಇರಬೇಕು, ಸರ್ವಧರ್ಮ ಸಮಭಾವಿಯಾಗಿರಬೇಕು. ಅಪಶ್ರುತಿಯಿಲ್ಲದೆ ನಿರಂತರ ಹಾಡುತ್ತಿರಬೇಕು! ಅರ್ಥವ್ಯವಸ್ಥೆ ಕೇವಲ ಜಿಡಿಪಿಯ ಬೆಳವಣಿಗೆಯಾಗದೆ ಎಚ್‌ಡಿಐ ಲೆಕ್ಕದಲ್ಲಿ ಆದರೆ ಆಗ ವ್ಯಕ್ತಿ ಹಂಬಲಿಸುವ ವಿರಾಮ, ನಿರಾತಂಕವಾಗಿ ಹಾಡುತ್ತಾ, ಸಾಹಿತ್ಯ ಓದುತ್ತಾ, ಚಿತ್ರ ಬಿಡಿಸುತ್ತಾ, ತಮ್ಮ ತಮ್ಮ ಅಂತಃಸತ್ವಕ್ಕೆ ತಕ್ಕಂತೆ ಪ್ರತಿಯೊಬ್ಬರೂ ಸಾಂಸ್ಕೃತಿಕವಾಗಿ ಜೀವಿಸಬಲ್ಲ ಸ್ವಾತಂತ್ರ್ಯ ದಕ್ಕುತ್ತದೆ ಎನ್ನಬಹುದೆ ? ಇದು ಮಾನವನ ಅನಾದಿಕಾಲದ ಬಯಕೆ. ಪರಿಸರವನ್ನು ನಾಶ ಮಾಡದೆ, ಇಂಥ ಜೀವನಕ್ಕೆ ಅಡಿಪಾಯವಾದ ತೃಪ್ತಿಕರ ಅರ್ಥವ್ಯವಸ್ಥೆ ನಿರ್ಮಿಸುವುದು ಸಾಧ್ಯ ಎನ್ನುತ್ತದೆ ವಿಜ್ಞಾನ ಇಂದು. ''ಪ್ರಕೃತಿ ಎಲ್ಲರ ಅಗತ್ಯವನ್ನೂ ಪರಿಹರಿಸಬಲ್ಲುದು, ಆದರೆ ಎಲ್ಲರೂ ಆಸೆಬುರುಕರಾದರೆ ಅದು ಸಾಧ್ಯವಿಲ್ಲ.'' ಪುರಾತನ ಶೈಶವ ನಾಗರಿಕತೆಯ ಕಾಲದಲ್ಲಿ ಕೂಡುಬಾಳ್ವೆಯ ಪ್ರಿಮಿಟಿವ್ ಕಮ್ಯೂನಿಸಂ ಸಮಾಜ ಇತ್ತೆಂಬುದನ್ನು ಯಾರೂ ಅಲ್ಲಗಳೆದಿಲ್ಲ. ಆದರೆ ಆರ್ಥಿಕ ಪ್ರಗತಿಯಾಗದೆ, ಪ್ರಾಕೃತಿಕ ಮಿತಿಗಳನ್ನು ಪರಿಹರಿಸಿಕೊಳ್ಳದೆ, ಅಂಥ ಸಮಾಜ ಮುಂದುವರಿಯುವುದು ಸಾಧ್ಯವಿರಲಿಲ್ಲ. ಅಷ್ಟಕ್ಕೂ ಅವು ಸಣ್ಣ ಸಣ್ಣ ಗುಂಪುಗಳಷ್ಟೆ. ಉತ್ತುಂಗಮಟ್ಟಕ್ಕೆ ಏರಿರುವ ಬಂಡವಾಳ ವ್ಯವಸ್ಥೆಯಲ್ಲಿ ಇಂದು ಎಲ್ಲರಿಗೂ ಸಮಾಧಾನದ ಜೀವನ ನೀಡಬಲ್ಲಷ್ಟು ಸಂಪತ್ತು ಸೃಷ್ಟಿಯಾಗುತ್ತಿದೆ. ಅದು ಮನುಕುಲದ ಎಲ್ಲರ ಒಟ್ಟಾರೆ ಸಾಧನೆ. ಒಬ್ಬ ಅಂಬಾನಿಯದಲ್ಲ. ಆದರೆ ಅಲ್ಲಿಂದ ಮುಂದುವರಿದು ನ್ಯಾಯಯುತ ಹಂಚಿಕೆಯನ್ನು ನಿರ್ವಹಿಸಲು, ಬಂಡವಾಳ ವ್ಯವಸ್ಥೆ ಸ್ವಭಾವತಃ ಅಂತರ್ಗತ ವೈರುದ್ಧ್ಯಗಳಿಂದಾಗಿ, ದ್ವಂದ್ವಗಳಿಂದಾಗಿ, ವಿಷಮತೆಯಿಂದಾಗಿ ಅಸಮರ್ಥವಾಗಿದೆ. ಮಾನವ ಸಮಾಜ ಈಗ, ಇದನ್ನು ಪರಿಹರಿಸಿಕೊಂಡು ಅದರ ಮುಂದಿನ ಹಂತಕ್ಕೆ ಏರಲು ಪಕ್ವವಾದ ಸಮಯ ಒದಗಿಬಂದಿದೆ. ಖಾಲಿ ಹೊಟ್ಟೆಯಲ್ಲಿ ರಾಮನಾಮ ಜಪದ ಸೌಖ್ಯಜೀವನ ಎಲ್ಲರಿಗೂ ಸಾಧ್ಯವಿಲ್ಲ. ಸಂತರ ಹಾಡು ಎಲ್ಲರ ಪ್ರಾತಿನಿಧಿಕ ಹಂಬಲದ ದನಿ. ಹಂಬಲ ಕೈಗೂಡಬೇಕಾದರೆ ಒಂದಿಷ್ಟು ಕ್ರಾಂತಿಕಾರಿ ಪರಿಶ್ರಮ ಅಗತ್ಯ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

## ಫಿಲಂ ಸೊಸೈಟಿ ಚಳವಳಿ ಹರಿಕಾರ ಎಂ.ವಿ.ಕೆ.



ಖ್ಯಾತ ಚಲನಚಿತ್ರ ನಿರ್ಮಾತೃ, ಚಿತ್ರರಂಗಕ್ಕೆ ಸಲ್ಲಿಸಿದ ಸೇವೆಗಾಗಿ ವಿ. ಶಾಂತಾರಾಮ್ ಪ್ರಶಸ್ತಿ ವಿಜೇತ ಎಂ. ವಿ. ಕೃಷ್ಣಸ್ವಾಮಿಯವರು ಸೆಪ್ಟೆಂಬರ್ ೨೫ರಂದು ನಿಧನರಾದರೆಂದು ತಿಳಿಸಲು ವಿಷಾದಿಸುತ್ತೇವೆ. 'ಹೊಸತು' ಬಳಗ ಅವರಿಗೆ ನಮನ ಸಲ್ಲಿಸುತ್ತದೆ.

ಮೈಸೂರು ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದು ಎಂ.ವಿ.ಕೆ. ಎಂದೇ ಹೆಸರಾಗಿದ್ದ ಇವರಿಗೆ ಮೊದಲಿನಿಂದಲೂ ನಾಟಕ, ಸಿನಿಮಾಗಳಲ್ಲಿ ಆಸಕ್ತಿ. ೧೯೪೯ರಲ್ಲಿ ತೆರೆಕಂಡ 'ಭಾರತಿ' ಚಿತ್ರದಲ್ಲಿ ಅವರು ಪ್ರಮುಖ ಪಾತ್ರದಲ್ಲಿ ನಟಿಸಿದ್ದರು. ಮುಂದೆ ಅವರು ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳಲ್ಲಿ ಅಧ್ಯಯನ ನಡೆಸಿ ಚಲನಚಿತ್ರ ತಯಾರಿಕೆಯಲ್ಲಿ ಪರಿಣತಿ ಪಡೆದರು. ಭಾರತ ಸರಕಾರದ ಫಿಲಂಸ್ ಡಿವಿಜನ್ನಿನಲ್ಲಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿದ ಎಂ.ವಿ.ಕೆ. ಹಲವು ಸಾಕ್ಷ್ಯಚಿತ್ರಗಳನ್ನು ನಿರ್ಮಿಸಿದರು. ೧೯೬೦ರ ದಶಕದಲ್ಲಿ ಬೆಂಗಳೂರಿಗೆ ಬಂದು ನೆಲೆಸಿದ ಅವರು ಇಮೇಜ್ ಇಂಡಿಯಾ ಎಂಬ ಸಂಸ್ಥೆ ಸ್ಥಾಪಿಸಿ ಅನೇಕ ಜಾಹೀರಾತು ಚಿತ್ರಗಳನ್ನು ಹಾಗೂ ಸಾಕ್ಷ್ಯಚಿತ್ರಗಳನ್ನು ನಿರ್ಮಿಸಿದರು. ಬೆಂಗಳೂರಿನಲ್ಲಿ ಫಿಲಂ ಸೊಸೈಟಿ ಚಳವಳಿ ಪ್ರಾರಂಭಿಸಿದ ಮೊದಲಿಗರು.

ಅವರು ತಯಾರಿಸಿದ ಪ್ರಶಸ್ತಿ ವಿಜೇತ ಚಿತ್ರ 'ಸುಬ್ಬಾಶಾಸ್ತ್ರಿ'. ಮುಖ್ಯವಾದ ಸಾಕ್ಷ್ಯಚಿತ್ರಗಳು : ಸರ್ ಎಂ. ವಿಶ್ವೇಶ್ವರಯ್ಯ, ಸಿ. ವಿ. ರಾಮನ್, ವೀಣಾ ದೊರೆಸ್ವಾಮಿ ಐಯ್ಯಂಗಾರ್, ಡಿ. ವಿ. ಗುಂಡಪ್ಪ ಮೊದಲಾದುವು.

# ಮಾಹಿತಿ ಇಷ್ಟೊಂದು ದುಬಾರಿಯೇ ?

ವಿಶ್ವದ ಅತ್ಯಂತ ಬಲಿಷ್ಠವಾದ ಪ್ರಜಾಪ್ರಭುತ್ವದಲ್ಲಿ ನಾಗರಿಕರು ಮಾಹಿತಿ ಕೇಳಿದರೆ ದೈಹಿಕ ಹಲ್ಲೆಗೆ ಒಳಗಾಗುವ ಹಾಗೂ ಜೀವ ಕಳೆದುಕೊಳ್ಳಬೇಕಾದ ಸಂದರ್ಭ ಒದಗಿರುವುದು ವ್ಯವಸ್ಥೆ ಎಷ್ಟರಮಟ್ಟಿಗೆ ಹದಗೆಟ್ಟಿದೆ ಎಂಬುದನ್ನು ತೋರಿಸುತ್ತದೆ. ಸಾಮಾನ್ಯ ನಾಗರಿಕರಿಗೆ ಸರ್ಕಾರಿ ಕಚೇರಿಗಳಿಂದ ಸುಲಭವಾಗಿ, ಶೀಘ್ರವಾಗಿ ಹಾಗೂ ಕಡಿಮೆ ಖರ್ಚಿನಲ್ಲಿ ಮಾಹಿತಿ ದೊರೆಯಲಿ ಎಂಬ ಉದ್ದೇಶದಿಂದ ಮಾಹಿತಿ ಹಕ್ಕು ಕಾಯ್ದೆಯನ್ನು ೨೦೦೫ರಲ್ಲಿ ಜಾರಿಗೊಳಿಸಲಾಗಿದೆ. ಆದರೆ ನಾಗರಿಕರು ಕೇಳಿದ ಮಾಹಿತಿ ನೀಡುವ ಬದಲು ಗೂಂಡಾಗಳನ್ನು ಬಿಟ್ಟು ಅರ್ಜಿದಾರರನ್ನು ಮಾನಸಿಕ ಮತ್ತು ದೈಹಿಕ ಹಿಂಸೆಗೆ ಗುರಿಪಡಿಸುವ ಪ್ರಕರಣಗಳು ಹೆಚ್ಚಾಗುತ್ತಿವೆ. ಕಳೆದ ವರ್ಷ ಕನಿಷ್ಠ ೯ ಜನರನ್ನು ಹತ್ಯೆಮಾಡಲಾಗಿದೆ. ಹತ್ತಾರು ಅರ್ಜಿದಾರರನ್ನು ದೈಹಿಕವಾಗಿ ಥಳಿಸಲಾಗಿದೆ. ವರದಿಯಾಗದ ಪ್ರಕರಣಗಳು ಇನ್ನೆಷ್ಟೋ ? ಇದಕ್ಕೆಲ್ಲ ಕಾರಣವನ್ನು ಹುಡುಕಬೇಕಿಲ್ಲ. ಮಾಹಿತಿ ನೀಡಿದರೆ ಎಲ್ಲಿ ತಮ್ಮ ಅವ್ಯವಹಾರ ಬೆಳಕಿಗೆ ಬರುತ್ತದೋ ಎಂಬ ಶಂಕೆಯಿಂದ ಅರ್ಜಿದಾರರ ವಿರುದ್ಧ ಈ ರೀತಿಯ ಕೃತ್ಯ ನಡೆಸಲಾಗುತ್ತಿದೆ.

ಮಾಹಿತಿ ಹಕ್ಕು ಅರ್ಜಿದಾರರು ಮತ್ತು ಕಾರ್ಯಕರ್ತರ ಮೇಲೆ ನಡೆಯುತ್ತಿರುವ ಹಲ್ಲೆ ಈಗ ಚರ್ಚೆಯ ವಿಷಯವಾಗಿದ್ದರೂ ಆ ರೀತಿಯ ಪ್ರಕರಣ ಮೊದಲು ನಡೆದದ್ದು ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿಯಲ್ಲಿ. ಲೋಕೋಪಯೋಗಿ ಇಲಾಖೆ ಕೈಗೊಂಡಿದ್ದ ರಸ್ತೆ ದುರಸ್ತಿ ಕಾರ್ಯದಲ್ಲಿ ನಡೆಯುತ್ತಿದ್ದ ಅವ್ಯವಹಾರ, ಲಂಚ, ಕಳಪೆ ಗುಣಮಟ್ಟದ ಕಾಮಗಾರಿ ಇತ್ಯಾದಿಯನ್ನು ಬಯಲಿಗೆಳೆಯಲು ಅಲ್ಲಿನ ಶ್ರೀ ಮಂಜುನಾಥ ರೆಡ್ಡಿ ಅವರು ಮಾಹಿತಿ ಹಕ್ಕು ಕಾಯ್ದೆ ಬಳಸಿದರು. ಅನೇಕ ದಾಖಲೆಗಳನ್ನು ಪಡೆದು ರಸ್ತೆಯನ್ನು ಹೇಗೆ ನಿರ್ಮಾಣ ಮಾಡಬೇಕೊ ಅದರಂತೆ ಮಾಡಲು ಒತ್ತಾಯಿಸಿದರು. ಇದನ್ನು ಸಹಿಸದ ಇಲಾಖೆಯ ಅಧಿಕಾರಿಗಳು ಮತ್ತು ಗುತ್ತಿಗೆದಾರರು ಶಾಮೀಲಾಗಿ ಮಂಜುನಾಥ ರೆಡ್ಡಿ ಅವರನ್ನು ದೈಹಿಕವಾಗಿ ಥಳಿಸಿದರು. ನೂರಾರು ಜನರ ಮುಂದೆ ಅವರ ಬಟ್ಟೆ ಕಿತ್ತು, ಹೊಡೆದುದಲ್ಲದೆ ಅವರ ವಿರುದ್ಧ ಸುಳ್ಳು ದೂರು ದಾಖಲಿಸಿದರು. ತಮ್ಮ ಊರಿಗೆ ರಸ್ತೆ ಬಾರದಂತೆ ಮಾಡುತ್ತಿದ್ದಾನೆ ಎಂದು ಹೇಳಿ ರೆಡ್ಡಿ ಅವರ ವಿರುದ್ಧ ಊರಿನ ಜನರನ್ನು ಎತ್ತಿಕಟ್ಟಿದರು. ಕೊಲೆ ಬೆದರಿಕೆಗಳೂ ಬಂದವು. ಆದರೆ ಯಾವುದೇ ಇಲಾಖೆ ಅಥವಾ ಪೊಲೀಸರ ಸಹಾಯವಿಲ್ಲದೆ ರೆಡ್ಡಿ ಹೋರಾಡಿದರು. ಗೆದ್ದರು. ಈಗ ಜನಜಾಗೃತಿ ವೇದಿಕೆ ಎಂಬ ಸಂಸ್ಥೆಯನ್ನು ಕಟ್ಟಿ 'ಅರಿವು' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದಾರೆ. ಒಂದಲ್ಲಾ ಎರಡಲ್ಲಾ ನೂರಾರು ಭ್ರಷ್ಟಾಚಾರದ ಪ್ರಕರಣವನ್ನು ಬಯಲು ಮಾಡಿದ್ದಾರೆ.

ಬೆಂಗಳೂರಿನ ಪ್ರತಿಷ್ಠಿತ ಬಡಾವಣೆ, ಬನಶಂಕರಿಯ ಮುಖ್ಯ ರಸ್ತೆಯೊಂದರಲ್ಲಿ ಪಾರ್ಟಿ ಹಾಲ್ ಮಾಲೀಕರೊಬ್ಬರು ದುಬಾರಿ ಬಾಡಿಗೆ ಪಡೆದು ಹಣ ಮಾಡುತ್ತಿದ್ದರು. ವಾಸದ ಮನೆಗೆ ಪ್ಲಾನ್ ಮಂಜುರಾತಿ ಪಡೆದಿದ್ದರೂ ವಾಣಿಜ್ಯ ಕಟ್ಟಡ ಕಟ್ಟಿದ್ದ ಅಂಶವನ್ನು ಅಲ್ಲಿನ ನಿವಾಸಿ ಶ್ರೀ ರವೀಂದ್ರನಾಥ್‌ಗುರು ಮಾಹಿತಿ ಹಕ್ಕು ಮುಖೇನ ಪಡೆದುಕೊಂಡರು. ವಿಷಯವನ್ನು ಅಲ್ಲಿಗೆ ಬಿಡದೆ ಸತತವಾಗಿ ಹೊಡೆದಾಡಿ ಪಾರ್ಟಿ ಹಾಲ್ ಮುಚ್ಚಿಸುವಲ್ಲಿ ಯಶಸ್ವಿಯಾದರು. ಆದರೆ ಕಟ್ಟಡದ ಮಾಲೀಕರ ಬೆಂಬಲಿಗರಲ್ಲಿ ರಾಜಕಾರಣಿಗಳೂ ಸೇರಿದ್ದರು. ಎಲ್ಲರೂ ಶ್ರೀ ಗುರು ಅವರನ್ನು ಹೆದರಿಸಿದರು. ಅನೇಕ ಅವಾಚ್ಯ ಶಬ್ದಗಳಿಂದ ಕೂಡಿದ ದೂರವಾಣಿ ಕರೆಗಳು ಬಂದವು. ಕೊಲೆಯ ಬೆದರಿಕೆಯೂ ಇದ್ದುವು. ಒಂದು ರಾತ್ರಿ ಅವರ ಮನೆಯ ಮೇಲೆ ಕಲ್ಲುಗಳ ತೂರಾಟವೂ ನಡೆಯಿತು. ಬಾಗಿಲು, ಕಿಟಕಿ, ಇತ್ಯಾದಿ ಪುಡಿಪುಡಿಯಾದವು. ಇಷ್ಟಾದರೂ ಗುರು ಮಾಹಿತಿ ಹಕ್ಕು ಕಾನೂನು ಬಳಸುವುದನ್ನು ಬಿಟ್ಟಿಲ್ಲ. ಅನೇಕ ಅವ್ಯವಹಾರಗಳನ್ನು ಬಹಿರಂಗಗೊಳಿಸಿದ್ದಾರೆ. ಕಲ್ಯಾಣ ಮಂಟಪಗಳಲ್ಲಿರುವ ಲೋಪದೋಷಗಳನ್ನು ದಾಖಲೆಗಳ ಮೂಲಕ ನಗರ ಪಾಲಿಕೆಗೆ ತೋರಿಸಿದ್ದಾರೆ.

ಸಾಮಾನ್ಯ ನಾಗರಿಕರ ಮಾತು ಹಾಗಿರಲಿ, ಒಬ್ಬ ಸರ್ಕಾರಿ ಉದ್ಯೋಗಿ ಆಗಿದ್ದರೂ ಮಾಹಿತಿ ಹಕ್ಕು ಕಾನೂನು ಬಳಸಿ ಅದರ ಮೂಲಕ ಇಲಾಖೆಗಳಲ್ಲಿ ನಡೆಯುತ್ತಿರುವ ದುಂದುವೆಚ್ಚ ಮತ್ತು ಅವ್ಯವಹಾರವನ್ನು ಬಯಲು ಮಾಡುತ್ತಿರುವವರಲ್ಲಿ ಹಾವೇರಿ ಜಿಲ್ಲೆ ರಾಣೆಬೆನ್ನೂರಿನ ಜೆ. ಎಮ್. ರಾಜಶೇಖರ್ ಪ್ರಮುಖರು. ಮಾಹಿತಿ ಹಕ್ಕು ಬಳಸುವುದಲ್ಲದೆ ಅನೇಕ ಲೇಖನ, ಪುಸ್ತಕ ಇತ್ಯಾದಿ ಪ್ರಕಟಿಸಿದ್ದಾರೆ. ನೂರಾರು ಅರ್ಜಿ ಸಲ್ಲಿಸಿ ಮಾಹಿತಿ ಪಡೆದಿದ್ದಾರೆ. ಜೊತೆಗೆ ಸರ್ಕಾರಿ ಅಧಿಕಾರಿಗಳಿಗೆ ಮಾಹಿತಿ ಹಕ್ಕು ಬಗ್ಗೆ ತರಬೇತಿಯನ್ನೂ ನೀಡುತ್ತಿದ್ದಾರೆ. ಆದರೆ ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ಲಭಿಸಿಲ್ಲ. ಬದಲಾಗಿ ಸೇವೆಯಿಂದ ಅವರನ್ನು ಅಮಾನತು ಮಾಡಲಾಗಿತ್ತು. ಸ್ವಾಮಿ ವಿವೇಕಾನಂದರ 'ಏಳಿ ಎದ್ದೇಳಿ' ಎಂಬ ಮಾತುಗಳನ್ನು ಬಳಸಿದ್ದೇ ಅವರ ಅಮಾನತಿಗೆ ಕಾರಣವಂತೆ. ಸರ್ಕಾರಿ ಅಧಿಕಾರಿಗಳು, ಗುತ್ತಿಗೆದಾರರು, ವಕೀಲರು, ರಾಜಕೀಯ ಪುಢಾರಿಗಳಿಂದ ರಾಜಶೇಖರ್ ಅನೇಕ ಕಿರುಕುಳ, ಬೈಗುಳ, ಕೊಲೆ ಬೆದರಿಕೆ ಇತ್ಯಾದಿಯನ್ನು ಎದುರಿಸುತ್ತಿದ್ದಾರೆ.

ಇದು ಕರ್ನಾಟಕ ರಾಜ್ಯದಲ್ಲಿ ಮಾಹಿತಿ ಹಕ್ಕು ಕಾನೂನು ಬಳಸುತ್ತಿರುವವರ ಗೋಳಿನ ಕಥೆ. ಈ ರೀತಿ ಪ್ರಕರಣಗಳು ದೇಶದ ಇತರೆ ಸ್ಥಳಗಳಲ್ಲೂ ನಡೆಯುತ್ತಿದೆ. ಐಎಫ್‌ಎಸ್ ಅಧಿಕಾರಿ ಸುನಿಲ್ ಚತುರ್ವೇದಿ ಹರಿಯಾಣದ ವಿಭಾಗೀಯ ಅರಣ್ಯ



ರಾಜಸ್ಥಾನದ ಗೋವರ್ಧನ್ ಸಿಂಗ್ ಭ್ರಷ್ಟ ಪೊಲೀಸರ ವಿರುದ್ಧ ಹೋರಾಡುತ್ತಿರುವ ವ್ಯಕ್ತಿ. ಮಾಹಿತಿ ಹಕ್ಕು ಅರ್ಜಿ ಸಲ್ಲಿಸಿ ಪೊಲೀಸ್ ಅಧಿಕಾರಿಗಳ ಆಸ್ತಿ ವಿವರ ಕೇಳಿದ್ದರು. ಆದರೆ ಅಧಿಕಾರಿಗಳು ದಾಖಲೆಗಳನ್ನು ತಿದ್ದಿ ತಪ್ಪು ಮಾಹಿತಿ ನೀಡಿದ ಕಾರಣ ರಾಜ್ಯ ಹೈಕೋರ್ಟ್‌ನಲ್ಲಿ ದೂರು ದಾಖಲಿಸಿ ತಮ್ಮ ಪರ ತೀರ್ಪು ಪಡೆದರು. ಇದನ್ನು ಸಹಿಸಲಾಗದ ಪೊಲೀಸ್ ಅಧಿಕಾರಿಗಳು ಸಿಂಗ್ ವಿರುದ್ಧ ಕಿರುಕುಳ ನೀಡಲು ಆರಂಭಿಸಿದರು. ಕೆಲವೆ ದಿನಗಳಲ್ಲಿ ಒಂಭತ್ತು ಸುಳ್ಳು ದೂರುಗಳನ್ನು ಸಿಂಗ್ ವಿರುದ್ಧ ದಾಖಲಿಸಿದರು. ಆತನ ಮನೆಯ ಮೇಲೆ ದಾಳಿ ನಡೆಸಿ ಸಿಂಗ್‌ನ ತಾಯಿ ಮತ್ತು ಹೆಂಡತಿಯನ್ನು ಹೆದರಿಸಿ, ತಮ್ಮ ಮಗ ಮಾಹಿತಿ ಹಕ್ಕು ಬಳಸುವುದನ್ನು ನಿಲ್ಲಿಸುವಂತೆ ಎಚ್ಚರಿಕೆ ನೀಡಬೇಕೆಂದು ತಾಕೀತು ಮಾಡಿದರು.

● ವೈ. ಜಿ. ಮುರಳೀಧರ

ಅಧಿಕಾರಿಯಾಗಿ ನೇಮಕಗೊಂಡು ಅಲ್ಲಿನ ಸರಸ್ವತಿ ವನ್ಯ ಮೃಗಧಾಮದ ರಕ್ಷಣೆಯಲ್ಲಿ ತೊಡಗಿದ್ದರು. ಮೃಗಧಾಮದ ಒಳಗೆ ದೊಡ್ಡದಾದ ನಾಲೆಯೊಂದನ್ನು ಕೊರೆಯುವ ಕೆಲಸ ನಡೆಯುತ್ತಿದ್ದುದನ್ನು ಕಂಡರು. ವನ್ಯ ಮೃಗಗಳ ಸಂರಕ್ಷಣಾ ಕಾಯ್ದೆಯನ್ನು ಉಲ್ಲಂಘಿಸಿ ಈ ಕೆಲಸ ನಡೆಯುತ್ತಿತ್ತು. ನಾಲೆಯ ನಿರ್ಮಾಣವನ್ನು ಕೂಡಲೆ ನಿಲ್ಲಿಸುವಂತೆ ಆದೇಶ ಹೊರಡಿಸಿದರು. ಹರಿಯಾಣ ರಾಜ್ಯ ಕೃಷಿ ಇಲಾಖೆಯ ಅಧಿಕಾರಿಗಳು ಹಾಗೂ ಗುತ್ತಿಗೆದಾರರ ವಿರುದ್ಧ ಎಫ್‌ಐಆರ್ ದಾಖಲು ಮಾಡಿದರು. ಆದರೆ ಈ ನಿಷ್ಠಾವಂತ ಅಧಿಕಾರಿಗೆ ವಾಗ್ದಂಡನೆ ನೀಡಿ ಅಲ್ಲಿಂದ ಫತೇಹಾಬಾದ್‌ಗೆ ವರ್ಗಾಯಿಸಲಾಯಿತು. ಇಲ್ಲಿ ಸರ್ಕಾರವು ಕೋಟ್ಯಂತರ ರೂಪಾಯಿ ವೆಚ್ಚದಲ್ಲಿ ಔಷಧಯುಕ್ತ ಗಿಡಮೂಲಿಕೆಗಳನ್ನು ಖರೀದಿಸಿ ರಾಜಕಾರಣಿಯೊಬ್ಬರ ಖಾಸಗಿ ಭೂಮಿಯಲ್ಲಿ 'ಹರ್ಬಲ್ ಪಾರ್ಕ್' ನಿರ್ಮಾಣ ಮಾಡುತ್ತಿದ್ದುದನ್ನು ಪತ್ತೆಹಚ್ಚಿದರು. ಇದನ್ನು ಸಹಿಸದ ಅರಣ್ಯ ಸಂರಕ್ಷಣಾ ಅಧಿಕಾರಿಗಳು ಅರಣ್ಯ ಖಾತೆಯ ಸಚಿವರ ಆದೇಶದಂತೆ ಚತುರ್ವೇದಿಯನ್ನು ಅಮಾನತುಗೊಳಿಸಿದರು. ಇದಕ್ಕೆ ಸಂಬಂಧಿಸಿದ ಫೈಲ್ ನೋಟಿಂಗ್ಸ್ ನೀಡಬೇಕೆಂದು ಮಾಹಿತಿ ಹಕ್ಕು ಕಾಯ್ದೆ ಪ್ರಕಾರ ಅರ್ಜಿ ಸಲ್ಲಿಸಿದರು. ಸರ್ಕಾರ ದಾಖಲೆ ನಿರಾಕರಿಸಿತು. ಆದರೆ ರಾಜ್ಯ ಮಾಹಿತಿ ಆಯೋಗದ ಆದೇಶದ ಪ್ರಕಾರ ದಾಖಲೆ ನೀಡಲಾಯಿತು. ಇದರ ಆಧಾರದ ಮೇಲೆ ಚತುರ್ವೇದಿ ಕೇಂದ್ರ ಸರ್ಕಾರದ ಮೊರೆಹೊಕ್ಕರು. ಪರಿಣಾಮ ಚತುರ್ವೇದಿ ಅವರ ಅಮಾನತನ್ನು ರದ್ದುಗೊಳಿಸಲಾಯಿತು. ಈ ಮಧ್ಯೆ ಹರಿಯಾಣ ರಾಜ್ಯ ಪೊಲೀಸ್ ವಿರುದ್ಧ ಕಳ್ಳತನದ ಸುಳ್ಳು ಆರೋಪ ಹೊರಿಸಿ ಎಫ್‌ಐಆರ್ ದಾಖಲಿಸಿತ್ತು. ಅದೂ ಸಹ ಆಧಾರ ರಹಿತ ಎಂಬುದು ಬೆಳಕಿಗೆ ಬಂತು. ಚತುರ್ವೇದಿಗೆ ಆರು ತಿಂಗಳು ಯಾವುದೇ ಕೆಲಸ ನೀಡಿರಲಿಲ್ಲ. ಆನಂತರ ಅವರನ್ನು ಮತ್ತೊಂದು ಜಿಲ್ಲೆಯ ಅರಣ್ಯ ಅಧಿಕಾರಿಯಾಗಿ ನೇಮಕ ಮಾಡಲಾಯಿತು. ಅಲ್ಲಿಯೂ ಚತುರ್ವೇದಿ ಐದು ಕೋಟಿ ರೂಪಾಯಿ ಹಗರಣವನ್ನು ಬಯಲುಮಾಡಿದ್ದಾರೆ. ಮತ್ತೆಲ್ಲಿಗೆ ಅವರನ್ನು ವರ್ಗಾಯಿಸಲಾಗುತ್ತದೊ ನೋಡಬೇಕು.

ಮೂಲತಃ ಕರ್ನಾಟಕದವರಾಗಿದ್ದ ಸತೀಶ್ ಶೆಟ್ಟಿ ಪುಣೆಯ ಹತ್ತಿರದ ತಲೇಗಾಂವ್‌ನಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದವರು. ಹೆಸರಾಂತ ಕಾರ್ಯಕರ್ತ ಅಣ್ಣಾ ಹಜಾರೆ ಅವರ ಮಾರ್ಗದರ್ಶನದಲ್ಲಿ ಅನೇಕ ಅವ್ಯವಹಾರಗಳನ್ನು ಬಯಲಿಗೆಳೆದಿದ್ದರು. ನಕಲಿ ಪಡಿತರ ಚೀಟಿ ವಿತರಣೆಯಲ್ಲಿದ್ದ ೧.೫೦ ಕೋಟಿ ರೂಪಾಯಿ ಮೊತ್ತದ ಭ್ರಷ್ಟಾಚಾರವನ್ನು ಬಯಲು ಮಾಡಿದ್ದರು. ಒಬ್ಬ ನ್ಯಾಯಬೆಲೆ ಅಂಗಡಿಯ ಮಾಲೀಕ ಹೊಂದಿದ್ದ ೨೦೦ ರೇಷನ್ ಕಾರ್ಡ್‌ಗಳನ್ನು ಪತ್ತೆಹಚ್ಚಿದ್ದರು. ನ್ಯಾಯಾಲಯ ಅಂಗಡಿಯ ಪರವಾನಗಿಯನ್ನು ರದ್ದುಮಾಡಿತ್ತು. ಪುಣೆಯ ಮೇಯರ್ ಮತ್ತಿತರ ಅಧಿಕಾರಿಗಳು ರೈಲ್ವೆ ಇಲಾಖೆಗೆ ಸೇರಿದ ಜಾಗವನ್ನು ಆಕ್ರಮಿಸಿಕೊಂಡು ನಿರ್ಮಿಸಿದ್ದ ಬಂಗಲೆಗಳನ್ನು ನೆಲಸಮ ಮಾಡುವಲ್ಲಿ ಶೆಟ್ಟಿ ಯಶಸ್ವಿಯಾಗಿದ್ದರು. ಮೇಯರ್ ತನ್ನ ಸ್ಥಾನವನ್ನು ಕಳೆದುಕೊಳ್ಳಬೇಕಾಯಿತು. ಇದರ ಜೊತೆಗೇ ಶೆಟ್ಟಿ ಅವರ ವೈರಿಗಳ ಸಂಖ್ಯೆಯೂ ಬೆಳೆಯಿತು. ಇದೇ ಸಮಯದಲ್ಲಿ ಮುಂಬೈ-ಪುಣೆ ಎಕ್ಸ್‌ಪ್ರೆಸ್ ಹೆದ್ದಾರಿ ನಿರ್ಮಾಣ ಆರಂಭಗೊಂಡಿತು. ಇದರಲ್ಲಿ ನಡೆದಿದ್ದ ಅವ್ಯವಹಾರವನ್ನು ಮಾಹಿತಿ ಹಕ್ಕು ಕಾಯ್ದೆ ಬಳಸುವುದರ ಮೂಲಕ ಹೊರಹಾಕಿದರು. ಸುಮಾರು ೨೦೦೦ ನೋಂದಣಿಯಲ್ಲಿ ೯೩೦ ನಕಲಿ ಎಂಬ ಅಂಶ ಬೆಳಕಿಗೆ ಬಂದ ಪರಿಣಾಮ ನೋಂದಣಾಧಿಕಾರಿಯನ್ನು ಅಮಾನತುಗೊಳಿಸಲಾಯಿತು. ಜನವರಿ ೧೩, ೨೦೧೦ರಂದು ಶೆಟ್ಟಿ ಬೆಳಗಿನ ವಾಯು ವಿಹಾರ ಮಾಡುತ್ತಿದ್ದಾಗ ಅವರನ್ನು ಹತ್ಯೆಮಾಡಲಾಗಿದೆ. ಈ ಸಂಬಂಧವಾಗಿ ಒಬ್ಬನನ್ನು ಬಂಧಿಸಲಾಗಿದೆ.

ಮಾಹಿತಿ ಹಕ್ಕು ಬಳಸಿದ ಕಾರಣಕ್ಕಾಗಿ ಶಿವಪ್ರಕಾಶ್ ಮತ್ತು ಆತನ ೧೮ ರೈತರನ್ನು ಥಳಿಸುವುದಲ್ಲದೆ ಸುಳ್ಳು ಆಪಾದನೆಗಳನ್ನು ಹೊರಿಸಿ ಜೈಲಿಗೆ ಕಳುಸಿರುವ ಪ್ರಕರಣ ಬಿಹಾರ್ ರಾಜ್ಯದ ಬಕ್ಸಾರ್ ಜಿಲ್ಲೆಯಲ್ಲಿ ನಡೆದಿದೆ. ಮಾಹಿತಿ ಹಕ್ಕು ಕಾಯ್ದೆ ಜಾರಿಗೆ ಬಂದಾಗಿನಿಂದ ಶಿವಪ್ರಕಾಶ್ ಅದನ್ನು ರೈತ ಸಂಬಂಧಿ ವಿಷಯಗಳಿಗೆ ಬಳಸಲು ಆರಂಭಿಸಿದರು. ಸರ್ಕಾರ ಅನುಷ್ಠಾನಗೊಳಿಸುತ್ತಿರುವ ರೈತಪರ ಯೋಜನೆಗಳ ವಿವರ ಕೇಳಲು ಆರಂಭಿಸಿದರು. ಕೃಷಿ ಪಂಪ್‌ಸೆಟ್‌ಗಳನ್ನು ಖರೀದಿಸಲು ಸರ್ಕಾರ ಶೇಕಡ ೩೫ರಷ್ಟು ಮೊತ್ತದ ಸಹಾಯಧನ ನೀಡುವ ಯೋಜನೆಯಲ್ಲಿ ನಡೆದಿದ್ದ ಸುಮಾರು ೧೦ ಕೋಟಿ ರೂಪಾಯಿ ಅವ್ಯವಹಾರವನ್ನು ಈ ರೈತ ಮುಖಂಡ ಬಯಲಿಗೆಳೆದ.

ಮಾಹಿತಿ ಹಕ್ಕು ಅರ್ಜಿಗೆ ಇಲಾಖೆ ನೀಡಿದ ಮಾಹಿತಿ ಹಾಗೂ ದಾಖಲೆ ಪ್ರಕಾರ ೧೦೦೦ ಪಂಪ್‌ಸೆಟ್‌ಗಳನ್ನು ಎರಡು ಅಂಗಡಿಗಳಿಂದ ಖರೀದಿಸಲಾಗಿತ್ತು. ಆದರೆ ವಾಸ್ತವವಾಗಿ ಆ ಎರಡೂ ಅಂಗಡಿಗಳು ಅಸ್ತಿತ್ವದಲ್ಲಿ ಇರಲಿಲ್ಲ. ಶಿವಪ್ರಕಾಶ್ ಹಾಗೂ ಇತರೆ ರೈತರು ಅರ್ಜಿ ಸಲ್ಲಿಸುವುದನ್ನು ಮತ್ತಷ್ಟು ತೀವ್ರಗೊಳಿಸಿದರು. ಉತ್ತರ ನೀಡಲಾಗದ ಇಲಾಖೆ ತತ್ತರಿಸಿತು. ಇವರಿಗೆ ಸರಿಯಾದ ಪಾಠ ಕಲಿಸಲು ಜಿಲ್ಲಾಧಿಕಾರಿ (ಡಿಎಮ್) ಒಂದು ಯೋಜನೆ ಹಾಕಿದ. ಶಿವಪ್ರಕಾಶ್‌ನನ್ನು ಕಚೇರಿಗೆ ಬರಹೇಳಿ ಕೇಳಿರುವ ಎಲ್ಲ ಮಾಹಿತಿ ದೊರಕಿದೆ ಎಂದು ಬರೆಸಿ ಅದರ ಮೇಲೆ ಸಹಿ ಹಾಕಲು ಹೇಳಿದ. ಇದಕ್ಕೆ ಒಪ್ಪದ ಶಿವಪ್ರಕಾಶ್ ವಿರುದ್ಧ ಸುಳ್ಳು ದೂರು ದಾಖಲಿಸುವಲ್ಲಿ ಯಶಸ್ವಿಯಾದ. ಹಣ ವಸೂಲು ಮಾಡಲು ತನ್ನ ಕಚೇರಿಗೆ ಶಿವಪ್ರಕಾಶ್ ಬಂದಿದ್ದನೆಂಬ ಆಪಾದನೆ ಹೊರಸಿ ೨೯ ದಿನ ಜೈಲಿಗೆ ಕಳುಹಿಸಿದ. ದೂರು ಸಾಬೀತು ಆಗದ ಕಾರಣ ಶಿವಪ್ರಕಾಶ್‌ನನ್ನು ಬಿಡುಗಡೆ ಮಾಡಲಾಯಿತು. ಇಲ್ಲಿಗೆ ನಿಲ್ಲದ ಶಿವಪ್ರಕಾಶ್ ಈಗ ಬಿಹಾರ್ ಮಾಹಿತಿ ವೇದಿಕೆಯನ್ನು ಆರಂಭಿಸಿದ್ದಾರೆ.

ಶಾಲೆಯಲ್ಲಿ ವಿಜ್ಞಾನ ಬೋಧಿಸುತ್ತಿರುವ ಶಿವಾಜಿ ರಾವತ್ ಮಾಹಿತಿ ಹಕ್ಕು ಕಾಯ್ದೆಯಿಂದ ಆಕರ್ಷಿತರಾಗಿ ಅನೇಕ ಅರ್ಜಿ ಸಲ್ಲಿಸಿ ಮಾಹಿತಿ ಪಡೆದಿದ್ದಾರೆ. ಗಾಳಿ ಯಂತ್ರ ಉಪಯೋಗಿಸಿ ವಿದ್ಯುತ್ ಉತ್ಪಾದಿಸಲು ಸರ್ಕಾರ ನೀಡುವ ಸಹಾಯಧನದ ಬಗ್ಗೆ ಹಾಗೂ ಅದರಲ್ಲಿ ನಡೆದಿರುವ ಅವ್ಯವಹಾರವನ್ನು ಬಯಲಿಗೆಳೆದಿದ್ದಾರೆ. ಇದನ್ನು ನಿಲ್ಲಿಸುವಂತೆ ರಾಜ್ಯದ ಮಂತ್ರಿಯೊಬ್ಬರು, ಸ್ಥಳೀಯ ವ್ಯಾಪಾರಸ್ಥ ಹಾಗೂ ಸಂಬಂಧಿಸಿದ ಆಧಿಕಾರಿ ಎಚ್ಚರಿಕೆ ನೀಡಿದರೂ ರಾವತ್ ತಮ್ಮ ಕೆಲಸ ಮುಂದುವರಿಸಿದರು. ಇದರ ಫಲ ಅವರ ಮನೆ ಮೇಲೆ ಕಲ್ಲುಗಳ ತೂರಾಟ. ಈಗ ರಾವತ್ ತಮ್ಮ ಮಾಹಿತಿ ಹಕ್ಕು ಕೆಲಸಕ್ಕೆ ತಡೆ ಹಾಕಿದ್ದಾರೆ.

ಕೊಲ್ಲಾಪುರದ ಕಬ್ಬು ಬೆಳೆಗಾರ ದತ್ತಾತ್ರೇಯ ಪಾಟೀಲ್ ತಮ್ಮ ಹಳ್ಳಿಯಲ್ಲಿ ಮಾರಾಟವಾದ ಭೂಮಿಯ ವಿವರ ಪಡೆಯಲು ಮಾಹಿತಿ ಹಕ್ಕು ಕಾಯ್ದೆ ಬಳಸಿದ್ದರು. ಭೂಮಿ ವ್ಯಾಪಾರಸ್ಥನೊಬ್ಬ ತನ್ನದಲ್ಲದ ಭೂಮಿಯನ್ನು ಮಾರಾಟ ಮಾಡಿ ಹಣ ದೋಚಿದ್ದ ಅಂಶ ಬಹಿರಂಗ ಗೊಂಡಿತು. ಇದನ್ನು ಸಹಿಸಲಾಗದ ವ್ಯಾಪಾರಸ್ಥನ ಕಡೆಯವರು ದೂರವಾಣಿ ಮುಲಕ ತನ್ನ ಮಾಹಿತಿ ಹಕ್ಕು ಕೆಲಸವನ್ನು ನಿಲ್ಲಿಸಬೇಕೆಂದು ಎಚ್ಚರಿಕೆ ನೀಡಿದ್ದರು. ಕೆಲವೆ ದಿನಗಳಲ್ಲಿ ಎಂಟು ಜನ ದತ್ತಾತ್ರೇಯ ಪಾಟೀಲ್‌ನನ್ನು ಅತನ ಜಮೀನಿನಲ್ಲೇ ಹತ್ಯೆಗೈದರು. ಕೊಲೆಗಡುಕರಿಗೆ ಹಣವಲ್ಲದೆ ಒಬ್ಬೊಬ್ಬರಿಗೂ ಒಂದೊಂದು ಕಾರ್ ನೀಡುವುದಾಗಿ ಒಪ್ಪಂದವಾಗಿತ್ತಂತೆ. ಇದೇ ರೀತಿ ಹತ್ಯೆ ಗೀಡಾದವರು ಗುಜರಾತ್ ರಾಜ್ಯದ ಅಮಿತ್ ಜಿತಾವ. ಈತ ರಾಜ್ಯ ಸರ್ಕಾರದ ಉದ್ಯೋಗಿಯಾಗಿದ್ದ. ಅರಣ್ಯ ಮತ್ತು ವನ್ಯಜೀವಿಗಳ ರಕ್ಷಣೆಯಲ್ಲಿ ಅಪಾರವಾದ ಆಸಕ್ತಿ ಇದ್ದ ಜಿತಾವ ಕೆಲಸಕ್ಕೆ ರಾಜೀನಾಮೆ ನೀಡಿ ಗಿರ್ ನೇಚರ್ ಯೂತ್ ಕ್ಲಬ್ ಆರಂಭಿಸಿದ. ಗಿರ್ ಅರಣ್ಯದ ಅಂಚಿನಲ್ಲಿ ನಡೆಯುತ್ತಿದ್ದ ಅನಧಿಕೃತ ಗಣಿಗಾರಿಕೆ ಬಗ್ಗೆ ಮಾಹಿತಿ ಸಂಗ್ರಹಿಸಲು ಮಾಹಿತಿ ಹಕ್ಕು ಕಾಯ್ದೆ ಬಳಸಿದ. ಕಾನೂನಿನ ಪ್ರಕಾರ ಅರಣ್ಯದ ಗಡಿ ಪ್ರದೇಶದಲ್ಲಿ ಗಣಿಗಾರಿಕೆಗೆ




ಅವಕಾಶವಿರಲಿಲ್ಲ. ದೊರೆತ ದಾಖಲೆಗಳನ್ನು ಆಧರಿಸಿ ರಾಜ್ಯ ಹೈಕೋರ್ಟಿನಲ್ಲಿ ಸಾರ್ವಜನಿಕ ಹಿತಾಸಕ್ತಿ ದೂರು ಸಲ್ಲಿಸಿದ. ತನ್ನ ಪರ ವಾದಿಸಲು ನೇಮಕ ಮಾಡಿದ್ದ ವಕೀಲರೊಂದಿಗೆ ತೆರಳುತ್ತಿದ್ದಾಗ ಅವನನ್ನು ಗುಂಡಿಕ್ಕಿ ಕೊಲ್ಲಲಾಯಿತು. ಗಣಿಗಾರಿಕೆಯಲ್ಲಿ ತೊಡಗಿದ್ದವನ ಸಂಬಂಧಿಕನೊಬ್ಬನನ್ನು ಪೊಲೀಸರು ಬಂಧಿಸಿದ್ದಾರೆ. ಅವನ ಪ್ರಕಾರ ಜಿತಾವನ ಕೊಲೆಗೆ ಸ್ಥಳೀಯ ಪೊಲೀಸ್ ಪೇದೆಯು ಸಹಾಯ ಮಾಡಿದ್ದನಂತೆ.

ಗೋಪಬಂದು ಚಟ್ರಿಯಾ ದಲಿತ ಕುಟಂಬಕ್ಕೆ ಸೇರಿದ ರೈತ. ಒರಿಸ್ಸಾ ರಾಜ್ಯದ ಜರಸಂಗ ಎಂಬ ಹಳ್ಳಿಯಲ್ಲಿ ಈತನಿಗಿದ್ದ ಒಂದು ಎಕರೆಗಿಂತ ಕಡಿಮೆ ಜಮೀನು ಅವನ ಜೀವನಾಧಾರ. ಕೆಲವು ವರ್ಷಗಳ ಹಿಂದೆ ಸರ್ಕಾರ ಈ ತುಂಡು ಭೂಮಿಯನ್ನು ಚೆಕ್ ಡ್ಯಾಂ ನಿರ್ಮಿಸುವ ಕಾರಣ ಹೇಳಿ ಆಕ್ರಮಿಸಿಕೊಂಡಿತು. ಆದರೆ ಗೋಪಬಂದುಗೆ ಯಾವುದೆ ಪರಿಹಾರ ಧನ ನೀಡಲಿಲ್ಲ. ಇತ್ತ ಚೆಕ್‌ಡ್ಯಾಂ ನಿರ್ಮಾಣಗೊಂಡರೂ ಅವನಿಗೆ ಏನೂ ಉಪಯೋಗ ವಾಗಲಿಲ್ಲ. ಕಾರಣ ಡ್ಯಾಂ ಕಟ್ಟಿದ ಕೆಲವೆ ದಿನಗಳಲ್ಲಿ ಬಿರುಕು ಬಿಟ್ಟು ನೀರು ಹೊಲಗದ್ದೆಗಳಿಗೆ ಹರಿಯಿತು. ಗೋಪಬಂದು ಮಾಹಿತಿ ಹಕ್ಕು ಅರ್ಜಿ ಸಲ್ಲಿಸಿ ಡ್ಯಾಂಗೆ ಬಳಸಲಾಗಿರುವ ವಿವರ ಕೇಳಿದ. ಇದರ ಮೂಲಕ ಆತ ಇಡೀ ಜಿಲ್ಲೆಯಲ್ಲಿ ಮಾಹಿತಿ ಹಕ್ಕು ಬಳಸಿದ ಮೊದಲ ವ್ಯಕ್ತಿ ಎಂಬ ಹೆಗ್ಗಳಿಕೆಗೆ ಪಾತ್ರನಾದ. ಆದರೆ ಇದರ ಪರಿಣಾಮ ಮಾತ್ರ ಯಾರೂ ಬಯಸುವುದಿಲ್ಲ. ಜಿಲ್ಲೆಯ ಬಿಡಿಓ ಗೋಪಬಂದು ಚಟ್ರಿಯಾನನ್ನು ಕಚೇರಿಗೆ ಕರೆದು ರೂ. ೧೦,೦೦೦ರ ಆಮಿಷ ತೋರಿಸಿ ಯಾವುದೆ ಮಾಹಿತಿ ಕೇಳಬಾರದೆಂದು ಹೆದರಿಸಿದ. ಆದರೆ ದಲಿತ ರೈತ ಒಪ್ಪಲಿಲ್ಲ. ಇದರ ಪರಿಣಾಮವಾಗಿ ಅವನನ್ನು ಹೊಡೆದು ಬಡಿದು ಕಚೇರಿಯಿಂದ ಹೊರಹಾಕಲಾಯಿತು. ಸುಳ್ಳು ದೂರು ನೀಡಿ ರೈತನನ್ನು ನಾಲ್ಕು ದಿನ ಜೈಲಿನಲ್ಲಿ ಕೊಳೆಯುವಂತೆ ಮಾಡಿದರು. ಈ ಆಪಾದನೆಯಿಂದ ತಪ್ಪಿಸಿಕೊಳ್ಳಲು ಚಟ್ರಿಯಾಗೆ ಒಂದು ವರ್ಷ ಬೇಕಾಯಿತು. ಈ ಖರ್ಚು ನಿಭಾಯಿಸಲು ಅವನಿಗಿದ್ದ ಚೂರು ಜಮೀನನ್ನು ಒತ್ತೆ ಇಡಬೇಕಾಯಿತು. ಧೃತಿಗೆಡದ ಗೋಪಬಂದು ಈಗ ಅನೇಕ ಅರ್ಜಿಗಳನ್ನು ಸಲ್ಲಿಸಿದ್ದಾನೆ. ಉದ್ಯೋಗ ಖಾತ್ರಿ ಯೋಜನೆಯ ಬಗ್ಗೆ ಮಾಹಿತಿ ಕೇಳಲು ಆರಂಭಿಸಿದ್ದಾನೆ. ಬೆದರಿಕೆಯ ನಡುವೆಯೂ ಭ್ರಷ್ಟ ಅಧಿಕಾರಿಗಳ ವಿರುದ್ಧ ಹೋರಾಡುತ್ತಿದ್ದಾನೆ.

ರಾಜಸ್ಥಾನದ ಗೋವರ್ಧನ್ ಸಿಂಗ್ ಭ್ರಷ್ಟ ಪೊಲೀಸರ ವಿರುದ್ಧ ಹೋರಾಡುತ್ತಿರುವ ವ್ಯಕ್ತಿ. ಮಾಹಿತಿ ಹಕ್ಕು ಅರ್ಜಿ ಸಲ್ಲಿಸಿ ಪೊಲೀಸ್ ಅಧಿಕಾರಿಗಳ ಆಸ್ತಿ ವಿವರ ಕೇಳಿದ್ದರು. ಆದರೆ ಅಧಿಕಾರಿಗಳು ದಾಖಲೆಗಳನ್ನು ತಿದ್ದಿ ತಪ್ಪು ಮಾಹಿತಿ ನೀಡಿದ ಕಾರಣ ರಾಜ್ಯ ಹೈಕೋರ್ಟಿನಲ್ಲಿ ದೂರು ದಾಖಲಿಸಿ ತಮ್ಮ ಪರ ತೀರ್ಪು ಪಡೆದರು. ಇದನ್ನು ಸಹಿಸಲಾಗದ ಪೊಲೀಸ್ ಅಧಿಕಾರಿಗಳು ಸಿಂಗ್ ವಿರುದ್ಧ ಕಿರುಕುಳ ನೀಡಲು ಆರಂಭಿಸಿದರು. ಕೆಲವೆ ದಿನಗಳಲ್ಲಿ ಒಂಭತ್ತು ಸುಳ್ಳು ದೂರುಗಳನ್ನು ಸಿಂಗ್ ವಿರುದ್ಧ ದಾಖಲಿಸಿದರು. ಆತನ ಮನೆಯ ಮೇಲೆ ದಾಳಿ ನಡೆಸಿ ಸಿಂಗ್‌ನ ತಾಯಿ ಮತ್ತು ಹೆಂಡತಿಯನ್ನು ಹೆದರಿಸಿ, ತಮ್ಮ ಮಗ ಮಾಹಿತಿ ಹಕ್ಕು ಬಳಸುವುದನ್ನು ನಿಲ್ಲಿಸುವಂತೆ ಎಚ್ಚರಿಕೆ ನೀಡಬೇಕೆಂದು ತಾಕೀತು ಮಾಡಿದರು. ಇದೆಲ್ಲವನ್ನು ಎದುರಿಸಲಾಗದ ಸಿಂಗ್ ಈಗ ತಲೆಮರೆಸಿಕೊಂಡಿದ್ದಾರೆ.

ಮಾಹಿತಿ ಹಕ್ಕು ಬಳಸಿದ ಕಾರಣ ಅರ್ಜಿದಾರನೊಬ್ಬ ೬೦ ಲಕ್ಷ ರೂಪಾಯಿ ಮೊತ್ತದ ಮಾನನಷ್ಟ ಮೊಕದ್ದಮೆ ಎದುರಿಸುವ ಪ್ರಸಂಗ ಬಹುಶಃ ಭಾರತದಲ್ಲಿ ಮಾತ್ರ ನಡೆಯುವಂಥದ್ದು. ಮೇಘಾಲಯದ ಸರ್ಕಾರೇತರ ಸಂಸ್ಥೆಯೊಂದರ ಸ್ಥಾಪಕ ಸಂಗ್ಮ ಇದಕ್ಕೆ ಗುರಿಯಾಗಿರುವ ವ್ಯಕ್ತಿ. ರಾಜ್ಯದ ಕಾಳಿಗಾಗಿ ಕೂಲಿ (ಫುಡ್ ಫಾರ್ ವರ್ಕ್) ಯೋಜನೆಯ ಬಗ್ಗೆ ಮಾಹಿತಿ ಬಯಸಿ ಅರ್ಜಿ ಸಲ್ಲಿಸಿದ ಪರಿಣಾಮ ಇದು. ಈ ಯೋಜನೆಯ ಅಡಿಯಲ್ಲಿ ವಿತರಿಸಬೇಕಾದ ಅಕ್ಕಿಯನ್ನು ಹಾಗೂ ವಾಹನಗಳನ್ನು ಖರೀದಿಸಲು ಇದ್ದ ಹಣದ ದುರುಪಯೋಗದ ಬಗ್ಗೆ ಮಾಹಿತಿ ಪಡೆದರು. ಅಲ್ಲಿನ ಸಹಾಯಕ ಜಿಲ್ಲಾಧಿಕಾರಿ ಇದರಲ್ಲಿ ಮಾಡಿರುವ ಅವ್ಯವಹಾರ ಕುರಿತು ಲೋಕಾಯುಕ್ತಕ್ಕೆ (ಎಸಿಬಿ) ದೂರು ಸಲ್ಲಿಸಿದರು. ಅವರ ವರದಿ ಮೇಲೆ ಯಾವುದೇ ಕ್ರಮ ಜರುಗಲಿಲ್ಲ. ಬದಲಾಗಿ ಕೋಪಗೊಂಡ ಸಹಾಯಕ ಜಿಲ್ಲಾಧಿಕಾರಿ ಸಂಗ್ಮ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡಿದ್ದಾರೆ. ಮಾಹಿತಿ ಹಕ್ಕು ಕಾಯ್ದೆಯಲ್ಲಿ ಶಕ್ತಿ ಇದೆ ಎಂದು ನಂಬಿದ್ದು ನನ್ನ ತಪ್ಪಾ ಎಂಬುದು ಅವರ ಪ್ರಶ್ನೆ.

ಈ ರೀತಿ ಪ್ರಕರಣಗಳು ಹೆಚ್ಚುತ್ತಿದ್ದು ಸರ್ಕಾರ ಕ್ರಮ ಕೈಗೊಳ್ಳದಿದ್ದರೆ ನಾಗರಿಕರು ಮಾಹಿತಿ ಹಕ್ಕು ಬಳಸುವುದನ್ನು ನಿಲ್ಲಿಸುವುದರಲ್ಲಿ ಸಂದೇಹವಿಲ್ಲ. ಸಮಾಜದ ಒಳಿತಿಗಾಗಿ ಸ್ವಲ್ಪಮಟ್ಟಿನ ತೊಂದರೆ ತೆಗೆದುಕೊಳ್ಳಬಹುದು. ಆದರೆ ಹೊಡೆತ, ಕೊಲೆ, ಮಾನಸಿಕ ಹಿಂಸೆ ಇತ್ಯಾದಿ ಹೆಚ್ಚಾದಾಗ ಸಮಾಜದ ಬಗ್ಗೆ ಇರುವ ಕಳಕಳಿ ಸಡಿಲಗೊಳ್ಳುವುದು ಸ್ವಾಭಾವಿಕ. ಹಾಗೆ ಆಗದಿರಲು ಯಾವ ಕ್ರಮ ಕೈಗೊಳ್ಳಬೇಕು ? ಇದು ಈಗ ನಮ್ಮ ಮುಂದಿರುವ ಸವಾಲು.

ವೈ. ಜಿ. ಮುರಳೀಧರ
ನಂ. ೨೩೯, ೫ನೇ 'ಸಿ' ರಸ್ತೆ, ರೆಂಕೊ ಬಡಾವಣೆ, ಹಂಪಿನಗರ
ಬೆಂಗಳೂರು - ೫೬೦ ೧೦೪

## ಹೊಸ ಓದು



### ಮಹಿಳಾ ಬದುಕು
(ಹೈದ್ರಾಬಾದ ಕರ್ನಾಟಕ ಕಥನ ಸಾಹಿತ್ಯದಲ್ಲಿ)

*ಡಾ॥ ಬಿದರಿ ಚಂದ್ರಕಲಾ*

**ಪುಟ : ೩೩೨**

**ಬೆಲೆ : ರೂ. ೨೧೫**

**ತನು ಮನು ಪ್ರಕಾಶನ**

'ಕಾವ್ಯಲೋಕ'

ಎಚ್ ಐಜಿ-೧೨೬೭, ೧ನೇ ಅಡ್ಡರಸ್ತೆ, ಶ್ರೀರಾಂಪುರ ಬಡಾವಣೆ, ೨ನೆಯ ಹಂತ, ಮೈಸೂರು - ೫೭೦ ೦೨೩

ಇದು ಬಿದರಿ ಚಂದ್ರಕಲಾ ಅವರು ಪಿಎಚ್.ಡಿ. ಪದವಿಗಾಗಿ ನಡೆಸಿದ ಸಂಶೋಧನಾ ಪ್ರಬಂಧವಾಗಿದ್ದು ಸ್ತ್ರೀಪರ ಕಾಳಜಿಯಿಂದ ಕೂಡಿದೆ. ಮಹಿಳೆಯರ ಬದುಕಿನ ಬಗ್ಗೆ ಹೈದರಾಬಾದ್ ಕರ್ನಾಟಕ ಪ್ರದೇಶದ ಸಾಹಿತ್ಯ ಕಥನಗಳಲ್ಲಿ ಮೂಡಿ ಬಂದಿರುವ ಮಹಿಳಾ ಪಾತ್ರ ಚಿತ್ರಣಗಳ ವಿವರಗಳನ್ನಾಧರಿಸಿ ಮಾಡಿರುವ ಒಂದು ಸಮೀಕ್ಷೆಯಿದು. ಮಹಿಳಾ ಸಮಸ್ಯೆಗಳ ಜೀವಂತ ಚಿತ್ರಣ ದೊರಕುವುದು ಸಾಮಾನ್ಯವಾಗಿ ಕೆಳವರ್ಗದ, ತೀರಾ ಹಿಂದುಳಿದ ವರ್ಗಗಳಲ್ಲಿ. ಹೊಟ್ಟೆಬಟ್ಟೆಗೆ ಇರುವವರದು ಹೆಚ್ಚು ಸುದ್ದಿಯಾಗುವುದಿಲ್ಲ. ಬದುಕು ಸಿಹಿಯೋ ಕಹಿಯೋ ಅಂತೂ ಆಕೆ ಪುರುಷವರ್ಗದೊಂದಿಗೆ ಬಡಿದಾಡುತ್ತಲೊ, ಓಲೈಸುತ್ತಲೊ, ಗೌರವಿಸುತ್ತಲೊ ಬಾಳು ಸಾಗಿಸಲೇಬೇಕಾಗಿದೆ. ಗೌರವಿಸುವಂಥವರು ಸಮಾಜದಲ್ಲಿದ್ದರೆ ಬದುಕು ಹೂವಿನಂತೆ. ಇಂಥ ಬದುಕಿನ ಎಲ್ಲ ವಿವರಗಳು ಕಥನಗಳಾಗಿ ಸಾಹಿತ್ಯದಲ್ಲಿ ಹೇರಳವಾಗಿ ಸಿಗುತ್ತವೆ. ಅಲ್ಲೂ ತಾರತಮ್ಯ. ಮಹಿಳೆಯರ ಬಗ್ಗೆ ಬರೆಯುವಾಗ ಪುರುಷರ ದೃಷ್ಟಿಕೋನ ಮಹಿಳೆಯ ದೃಷ್ಟಿಕೋನಕ್ಕಿಂತ ಭಿನ್ನ ಅಥವಾ ಆಕ್ರೋಶದ್ದು. ಇಲ್ಲಿನ ಬರವಣಿಗೆಗೆ ಪ್ರಾದೇಶಿಕ ಮಿತಿಯಿರುವುದರಿಂದ ಒಂದು ಪಾರ್ಶ್ವಕೋನವನ್ನಷ್ಟೇ ಗ್ರಹಿಸಬಹುದು. ಪುರುಷರೇ ಮಹಿಳೆಯನ್ನು ಶೋಷಿಸುವುದು ಎಂಬ ಆರೋಪ ನಿಜವಾದರೂ ಮಹಿಳೆಯರಿಂದಲೇ ಆಕೆಗೆ ಅನ್ಯಾಯ ವಾಗುತ್ತಿರುವುದು ಕೂಡ ಪ್ರತ್ಯೇಕ ಅಧ್ಯಯನಕ್ಕೆ ವಸ್ತುವಾದೀತು.

### ಅವ್ಯಕ್ತ ಚರಿತ್ರೆ (ಚರಿತ್ರೆ ರಚನಾ ನಿರ್ವಚನ)

*ಡಾ॥ ಮೊಗಳ್ಳಿ ಗಣೇಶ್*

**ಪುಟ : x + ೨೨೪** **ಬೆಲೆ : ರೂ. ೧೦೦**

**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಅವ್ಯಕ್ತ ಚರಿತ್ರೆಯೆಂಬುದು ಭಿನ್ನವಾದೊಂದು ನಿರೂಪಣೆ ಅಥವಾ ಹೊಸಬಗೆಯ ಕಲ್ಪನೆ. ಮೊಗಳ್ಳಿ ಗಣೇಶ್ ಬರೆದ ಈ ಪುಸ್ತಕ ಯಾವುದೇ ರಾಷ್ಟ್ರ-ರಾಷ್ಟ್ರಗಳ ಇತಿಹಾಸವಾಗಿರದೆ ಒಟ್ಟೂ ಮಾನವ ಜನಾಂಗದ ಮಾನವ ಸಂಸ್ಕೃತಿಗಳ ಚರಿತ್ರೆಯ ತಾಯಿಬೇರನ್ನು ಹುಡುಕಾಡುವ ಒಂದು ಕಥನ. ವರ್ತಮಾನದಲ್ಲಿ ನಿಂತು ಗತಕಾಲವನ್ನು ಅವಲೋಕಿಸಿದಾಗ ಅಂದಂದಿನ ಕಾಲಕ್ಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಪ್ರಭುತ್ವಕೇಂದ್ರಿತ ಯಾಜಮಾನ್ಯ ಸಂಸ್ಕೃತಿಗಳನ್ನು ಪ್ರಧಾನ ಧಾರೆಗಳನ್ನಾಗಿ ವೈಭವೀಕರಿಸಿದ ಚರಿತ್ರೆಗಳು ಅಕ್ಷರಗಳಲ್ಲಿ ದಾಖಲಾದುದು ಕೆಲವು ಸಾವಿರ ವರ್ಷಗಳಿಂದೀಚೆಗೆ. ನಾವು ಅದನ್ನೇ ಚರಿತ್ರೆಯೆಂದು ಅಂಗೀಕರಿಸಿದ್ದೇವೆ. ಇದರ ಜೊತೆ ಕಡೆಗಣಿಸಲ್ಪಟ್ಟ ಅಥವಾ ಬರೆದಿಡದ ಅವ್ಯಕ್ತವಾದ ಅಥವಾ ಸಾಕ್ಷ್ಯಾಧಾರಗಳು ನಶಿಸಿಹೋಗಿರಬಹುದಾದ ಲೆಕ್ಕವಿಲ್ಲದಷ್ಟು ನಿರ್ವಚನಗೊಳ್ಳದ ಚರಿತ್ರೆಗಳಿವೆ. ಇಂಥವನ್ನು ಅರ್ಥಮಾಡಿಕೊಳ್ಳಲು ಮಾನವನ ಸಂಸ್ಕೃತಿಗಳ ತಾಯಿಬೇರನ್ನು ಹುಡುಕಿ ಸಾಗಬೇಕು. ಇಂದು ನಾವು ಚರಿತ್ರೆಯೆಂದು ಪರಿಭಾವಿಸಿರುವ ಮೇಲ್‌ಸ್ತರವನ್ನು ಬಗೆದು ಆಳಕ್ಕಿಳಿದು ಶೋಧಿಸಿದಾಗ ಲಕ್ಷಾಂತರ ವರ್ಷಗಳಷ್ಟು ಹಿಂದಿನ ಮೌಖಿಕ ದಾಖಲೆ, ಭೌತಿಕ ಉತ್ಖನನದ ಸಾಕ್ಷ್ಯಗಳನ್ನೂ ಮೀರಿ ಸುಪ್ತಪ್ರಜ್ಞೆಗೆ ಮಾತ್ರ ನಿಲುಕುವ ಚರಿತ್ರೆಯೊಂದಿರಬಹುದು... 'ಚರಿತ್ರೆ' ಎಂಬ ಪದವನ್ನು ಗಂಭೀರವಾಗಿ ವಿಶ್ಲೇಷಿಸತೊಡಗಿದರೆ ಅದು ಭೂಮಿಯ ಮೇಲೆ ಮಾನವನ ಕುರುಹಿಗಿಂತಲೂ ಹಿಂದಕ್ಕೆ ಸಾಗಿ ಭೂಮಿಗೇ ಒಂದು ಚರಿತ್ರೆಯಿರುವುದು ನಮ್ಮ ಅರಿವಿಗೆ ಬರುತ್ತದೆ. ಅತ್ಯಂತ ಪ್ರೌಢ ಬರವಣಿಗೆಯಾದ ಇದನ್ನು ಸಾಧ್ಯವಾದಷ್ಟು ಸರಳವಾಗಿ ಬರೆದಿದ್ದಾರೆ. ನಮಗೆ ದಕ್ಕುವಷ್ಟನ್ನು ನಾವೂ ಓದೋಣ.




### ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು

*ಡಾ॥ ಸಣ್ಣ ಪಾಪಯ್ಯ*

**ಪುಟ : ೧೦ + ೩೫೨** **ಬೆಲೆ : ರೂ. ೨೫೦**

**ಬಂಡಾರ ಪ್ರಕಾಶನ,** ಮಸ್ಕಿ - ೫೮೪ ೧೨೪, ಜಿಲ್ಲೆ ರಾಯಚೂರು

ಹೆಸರಿನಲ್ಲೇನಿದೆ – ಒಬ್ಬ ವ್ಯಕ್ತಿಯನ್ನು ಗುರುತಿಸಲು ಇಡುವ ಹೆಸರಲ್ಲವೇ ಎಂದು ನಾವು ಎಷ್ಟೇ ಹಗುರವಾಗಿ ತೆಗೆದುಕೊಂಡರೂ ಒಬ್ಬ ವ್ಯಕ್ತಿಯ ಹೆಸರು ಸಾಮಾಜಿಕ ಮತ್ತು ಭಾವನಾತ್ಮಕವಾಗಿ ಅರ್ಥಪಡೆದಿದ್ದು ತನ್ನೂರಿನ, ಜಾತಿಯ, ಮತೀಯ, ವೃತ್ತಿಸೂಚಕ ಸಂಬಂಧಗಳನ್ನು ಹೊಂದಿದ್ದು ಅವನಿರುವವರೆಗೂ ಶಾಶ್ವತವಾಗಿರುತ್ತದೆ. ವ್ಯಕ್ತಿಗಳ ಹೆಸರು ಒಂದು ಅಧ್ಯಯನಕ್ಕೆ ವಸ್ತುವಾಗಿ ಒಂದು ಗ್ರಂಥವನ್ನೇ ಬರೆಯುವಷ್ಟು ವಿಶಾಲ ವ್ಯಾಪ್ತಿ ಹೊಂದಿದೆಯೆಂದರೆ ಅಚ್ಚರಿಯೇ ಸರಿ. ಈ ಪುಸ್ತಕ ಚಿತ್ರದುರ್ಗದ ಸುತ್ತಮುತ್ತಲಿನ ವಿವಿಧ ಜನಾಂಗದವರ ವ್ಯಕ್ತಿನಾಮಗಳ ಕುರಿತಾದ ಒಂದು ಸಂಶೋಧನೆ ನಡೆಸಿ ಕ್ಷೇತ್ರಕಾರ್ಯದ ಮೂಲಕ ಸಾಕಷ್ಟು ಮಾಹಿತಿ ಸಂಗ್ರಹಿಸಿ ಬರೆದ ಪುಸ್ತಕ. ಹೆಸರು, ಹೆಸರಿನ ಮಹತ್ವ, ಅದರ ನಿಷ್ಪನ್ನ, ಅದು ಮುಂದೆ ರೂಪಾಂತರಗೊಳ್ಳುತ್ತಾ ಸಾಗುವ ರೀತಿ ಕೊನೆಗೊಂದೆರಡು ಅಕ್ಷರಗಳಾಗಿ ಮಾತ್ರ ಉಳಿಯುವ ರೀತಿಗೆ ನಗು ಬರುತ್ತದೆ. ಜನಾಂಗೀಯ ಅಧ್ಯಯನಕ್ಕೆ ಮತ್ತು ಸಮಾಜ ಶಾಸ್ತ್ರೀಯ ಅಭ್ಯಾಸ ಮಾಡುವವರಿಗೆ ಆಕರವನ್ನೊದಗಿಸಬಲ್ಲುದು. ಇರಲಿ, ಮಗುವಿಗೆ ಹೆಸರಿಡುವಾಗ ತಂದೆ-ತಾಯಿ ಯೋಚಿಸಿ ಅತ್ಯಂತ ಸೂಕ್ತವಾದ, ಯೋಗ್ಯವಾದ ಹೆಸರಿಟ್ಟಲ್ಲಿ ಗೊಂದಲಗಳಿಗೆ ಅವಕಾಶ ಇಲ್ಲದಂತಾಗಬಹುದು.

### ಅಸ್ಪೃಶ್ಯ ವಸಂತ

*ತೆಲಗು ಮೂಲ : ಜಿ. ಕಲ್ಯಾಣ ರಾವು; ಕನ್ನಡಕ್ಕೆ : ನಗರಗೆರೆ ರಮೇಶ್*

**ಪುಟ : xviii + ೨೮೬** **ಬೆಲೆ : ರೂ. ೨೦೦**

**ಲಂಕೇಶ್ ಪ್ರಕಾಶನ,** ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪




ಅಸ್ಪೃಶ್ಯರು, ದಲಿತರು, ತಳ ಸಮುದಾಯದವರು – ಯಾವ ಹೆಸರಿನಿಂದ ಕರೆದರೂ ಸರಿಯೆ – ಇವರೆಲ್ಲ ಜನಾಂಗೀಯ ದೌರ್ಜನ್ಯಕ್ಕೊಳಗಾದವರು. ಶೋಷಕ ವರ್ಗ - ಶೋಷಿತ ವರ್ಗ ಎಂಬ ಎರಡು ಇರುವಿಕೆಗಳು ಚರಿತ್ರೆಯನ್ನೋದಿರುವ ಮತ್ತು ಇಂದಿನ ಜಗತ್ತನ್ನು ಕಣ್ಣಾರೆ ಕಾಣುತ್ತಿರುವ ನಮಗೆಲ್ಲ ಗೊತ್ತು. ಶ್ರೀಮಂತಿಕೆ, ಮೇಲ್ಜಾತಿ, ಅಧಿಕಾರ, ತೋಳ್ಬಲ ಇರುವ ವರ್ಗ ಅವು ಯಾವುದೂ ಇಲ್ಲದಿರುವ ಬಡಪಾಯಿಗಳನ್ನು ದಮನಿಸುತ್ತಲೇ ಬಂದಿದೆ. ಜನಾಂಗ ದ್ವೇಷವಂತೂ ಮಿತಿಮೀರಿ ಗಾಂಧಿ, ಅಂಬೇಡ್ಕರ್, ಮಂಡೇಲಾ, ಮಾರ್ಟಿನ್ ಲೂಥರ್, ಕಾರ್ಲ್‌ಮಾರ್ಕ್ಸ್‌ರಂಥ ಜಾಗತಿಕ ನಾಯಕರು ಉದಿಸಿ ಹೋರಾಟದ ಮುಂಚೂಣಿಯಲ್ಲಿದ್ದು ಸಮಾನತೆಯ ಸಂದೇಶ ನೀಡಿದಾಗ ಒಮ್ಮೆ ಪರಿಸ್ಥಿತಿ ಸುಧಾರಿಸಿದರೂ ಮತ್ತೆ ಅದು ತಲೆಯೆತ್ತುತ್ತಲೇ ಇದೆ. ಭಾರತವಂತೂ ನಾಲ್ಕು ವರ್ಣಗಳು ದೇವರಿಂದಲೇ ಸೃಷ್ಟಿಸಲ್ಪಟ್ಟದ್ದೆಂದು ನಂಬಿಸುತ್ತಾ ತನ್ಮೂಲಕ ಸಾವಿರಾರು ಜಾತಿ-ಉಪಜಾತಿಗಳನ್ನು ಹುಟ್ಟುಹಾಕಿ ಇಂದಿಗೂ ಅದರ ಉರಿ ಆರದಂತೆ ನೋಡಿಕೊಂಡಿದೆ. ನಮ್ಮ ನೆರೆಯ ಆಂಧ್ರಪ್ರದೇಶದ ಲೇಖಕ ಚಿಂತಕರಾದ ಕಲ್ಯಾಣ ರಾವು ಇಂಥ ಅಸ್ಪೃಶ್ಯ ಜನಾಂಗದ ಗೋಳಿನ ಕಥೆಯೊಂದಿಗೆ ಹೋರಾಟದ ಬದುಕನ್ನೂ ಈ ಕಾದಂಬರಿ ರೂಪದಲ್ಲಿ ಕಣ್ಮುಂದೆ ನಡೆಯುತ್ತಿರುವ ಘಟನಾವಳಿಯೋ ಎಂಬಂತೆ ಕಟ್ಟಿಕೊಟ್ಟಿದ್ದಾರೆ. ಮೂರು ತಲೆಮಾರುಗಳ ಹಿಂದಿನ ದಲಿತರಿಗಿಂತ ಇಂದಿನವರಿಗೇನಾದರೂ ದಕ್ಕಿದ್ದಲ್ಲಿ ಅದು ಹೋರಾಟದ ಮೂಲಕ ಮತ್ತು ಅರ್ಹರಿಗೆ ಮಾತ್ರ ಎಂಬುದು ಸ್ಪಷ್ಟ. ಕನಿಕರದಿಂದ ಕೊಡಲ್ಪಟ್ಟದ್ದಕ್ಕಿಂತ ಗಳಿಸಿದ್ದು ಹೆಚ್ಚು ಬೆಲೆಯದಲ್ಲವೇ ?

**ಕಾಬಾಳೆ ಮತ್ತು ಪ್ರೀತಿ** (ನಿರಂಜನ ವಾನಳ್ಳಿಯವರ ಆಯ್ದ ನುಡಿಚಿತ್ರಗಳು)
*ಡಾ॥ ನಿರಂಜನ ವಾನಳ್ಳಿ*
**ಪುಟ : ೨೩೨** **ಬೆಲೆ : ರೂ. ೧೨೦**
**ಸಂಸ್ಕೃತಿ ಪಬ್ಲಿಷಿಂಗ್ ಹೌಸ್**, ಮೈಸೂರು - ೫

ಇವು ಸುಮಾರು ಇಪ್ಪತ್ತು ವರ್ಷಗಳಿಂದ ವಿವಿಧ ಪತ್ರಿಕೆಗಳಲ್ಲಿ ಚದುರಿಹೋಗಿದ್ದ ನುಡಿಚಿತ್ರಗಳ ಸಂಕಲನ. ಯಾವ ವಸ್ತು ಸಿಕ್ಕಿದರೂ ಅದಕ್ಕೊಂದು ಸುಂದರವಾದ, ಕಲಾತ್ಮಕವಾದ, ಅದ್ಭುತವಾದ ಬರೆವಣಿಗೆಯ ರೂಪಕೊಟ್ಟು ಓದುಗರನ್ನು ಸೆಳೆಯುವ ಕಲೆ ಸಹಜ ಪ್ರತಿಭೆಯ ನಿರಂಜನ ವಾನಳ್ಳಿ ಅವರಿಗೆ ಕರಗತ. ನಮ್ಮೂರ ಇರುವೆಯಿಂದ ಕೆನಡಾದ ಮೇಪಲ್ ಎಲೆಯವರೆಗೂ ವಿಸ್ತಾರವಾಗಿರುವ ಬರೆಹಗಳಿವು. ಪತ್ರಿಕಾ ಬರೆವಣಿಗೆಯ ಮೂಲಕ ಜನಪ್ರಿಯರಾಗಿ ಪತ್ರಿಕೋದ್ಯಮದ ಪ್ರಾಧ್ಯಾಪಕರಾಗಿ ಹಳ್ಳಿಯಿಂದ ದಿಲ್ಲಿಯವರೆಗೂ ಓಡಾಡುವ ವಾನಳ್ಳಿಯವರಿಗೆ ಬರಹಕ್ಕೆ ಆಕರಗಳು




ಹೇರಳವಾಗಿ ಲಭಿಸಿವೆ. ಅಥವಾ ಸಿಗುವ ಎಲ್ಲವನ್ನೂ ಅವರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ತಮ್ಮ ಪ್ರವಾಸಕಾಲದ, ವೃತ್ತಿಜೀವನಾನುಭವದ ಸ್ವಾರಸ್ಯಗಳನ್ನು ಬಿಚ್ಚಿಡುತ್ತಾ ಕಥೆ ಹೇಳುವ ಶೈಲಿಯಲ್ಲಿ ನಾವರಿಯದ, ಅರಿಯಬೇಕಾದ ಎಷ್ಟೋ ವಿಚಾರಗಳನ್ನಿಲ್ಲಿ ಹೇಳಿದ್ದಾರೆ. ಕೆಲವು ಮನ ಕಲಕುವಂಥವು, ಕೆಲವು ನಗೆಯುಕ್ಕಿಸಿದರೆ ಇನ್ನು ಕೆಲವು ಹೀಗೂ ಉಂಟೇ ಎಂದು ಅಚ್ಚರಿಪಡುವಂಥವು. ಕೆಲವು ಸಮಾಜದ ಅವ್ಯವಸ್ಥೆಯನ್ನು ನಯವಾಗಿ ಚುಚ್ಚುವಂಥವು. ಇವನ್ನು ಬರೆದ ವಾನಳ್ಳಿ ಅರಬೀ ಸಮುದ್ರದಾಚೆ ಒಮಾನ್ ರಾಷ್ಟ್ರದಲ್ಲಿ ಆಹ್ವಾನಿತರಾಗಿ ಸೇವೆಯಲ್ಲಿದ್ದಾರೆ. ಅಲ್ಲಿನ ಅನುಭವದ ನುಡಿಚಿತ್ರಗಳನ್ನವರು ಹೊತ್ತುತರುವುದರೊಳಗೆ ಇವನ್ನು ನಾವು ಓದಿ ಮುಗಿಸೋಣ.

**ತುಂಗಾ** (ಕಾಡುವ ಕಾದಂಬರಿ)
*ವಿ. ಗಾಯತ್ರಿ*
**ಪುಟ : ೧೭೬** **ಬೆಲೆ : ರೂ. ೧೨೦**
**ಮೇಫ್ಲವರ್**, ಇನಿಷಿಯೇಟಿವ್ ಆಫ್ ಮೇಫ್ಲವರ್ ಮಾಸ್ ಮೀಡಿಯಾ ಪ್ರೈ. ಲಿ., ೪೫೦/೧/೧೪, ೩ನೇ ಮಹಡಿ ಲಕ್ಷ್ಮೀ ಕಾಂಪ್ಲೆಕ್ಸ್, ೨೭ನೇ ಅಡ್ಡರಸ್ತೆ, ೪ನೇ ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೧೧




ಮಕ್ಕಳಿಗೆ ಎಂಥ ಶಾಲೆ ಬೇಕು ? ಅತಿ ಶಿಸ್ತಿನ ಹಂಗಿಲ್ಲದ, ಹೇರಿಕೆಯ ಪಠ್ಯಗಳಿಲ್ಲದೆ ಮಕ್ಕಳನ್ನು ಬುದ್ಧಿವಂತರನ್ನಾಗಿ ಮಾಡಲು ಸಾಧ್ಯವೇ ? ಶಾಲೆಯಲ್ಲಿ ತಪ್ಪು ಮಾಡಿದಾಗ ಉಪಾಧ್ಯಾಯರು ಎರಡೇಟು ಬಿಗಿದು ಆತನನ್ನು ಒಬ್ಬ ಮನುಷ್ಯನನ್ನಾಗಿ ಮಾಡಿದರೆಂಬ ಮಾತನ್ನು ಹೇಗೆ ವ್ಯಾಖ್ಯಾನಿಸುವುದು ? ಈಗಿನ ಸಂದರ್ಭವೆಂದರೆ ಮಗು ಮೂರನೆಯ ವಯಸ್ಸಿಗೆ ಶಾಲೆ ಸೇರಿ ಕಲಿಕೆಯ ಹಂತಗಳಾದ ಹೈಸ್ಕೂಲ್, ಕಾಲೇಜ್ ದಾಟಿ ಡಿಗ್ರಿ ಪಡೆದು ಉದ್ಯೋಗ ಗಳಿಸಿದನೆಂದರೆ ಯಶಸ್ವೀ ಶಿಕ್ಷಣ ಎನ್ನಲಾಗುತ್ತದೆ. ಅಲ್ಲಿ ಬಾಲ್ಯದ ಉತ್ಸಾಹ ಸಂಭ್ರಮವನ್ನು ಹತ್ತಿಕ್ಕಿ ಇಂತಹುದನ್ನೇ ಓದು ಎಂಬ ನಿರ್ಬಂಧ ಇರುತ್ತದೆ. ಆದರೆ ಈ ಕಾದಂಬರಿ ಅಂತಹ ಯಾವುದಕ್ಕೂ ಮಣೆ ಹಾಕದೆ ಒಂದು ವಿಶಿಷ್ಟವಾದ ಶಾಲೆ ಮತ್ತು ಅಲ್ಲಿ ಸಂಭ್ರಮಿಸುವ ತುಂಗಾಳಂತಹ ಪ್ರಕೃತಿಯೊಂದಿಗೆ ಆಟ-ಪಾಠ ಇಷ್ಟಪಡುವ ಮಕ್ಕಳನ್ನು ಪರಿಚಯಿಸುತ್ತದೆ. ಎಳೆಯ ಮಕ್ಕಳ ಶಿಕ್ಷಣದ ಹೊರೆ ಮತ್ತು ಶಾಲೆಯ ಬಗೆಗಿನ ಆತಂಕವನ್ನು ಕಡಿಮೆಗೊಳಿಸುವ ಚಿಂತನೆಗೆ ಪ್ರೇರೇಪಿಸುತ್ತದೆ.

**– ಇಂದಿರಾಕುಮಾರಿ**
*೨೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ನಾವ್ಯಾರು ?** (ಪ್ರಬಂಧಗಳು) ಶಾಂತಾರಾಮ ಸೋಮಯಾಜಿ
**ಪುಟ : ೧೬೨** **ಬೆಲೆ : ರೂ. ೧೦೦**
**ಸುಮುಖ ಪ್ರಕಾಶನ**, ೧೭೪ ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ರೇಷ್ಮೆಗೂಡಿನ ಚಾ ಮತ್ತು ಉಪ್ಪುನೇರಳೆ ಮರದ ಕಣ್ಣೀರು** (ಪ್ರಬಂಧಗಳು) ಶಾಂತಾರಾಮ ಸೋಮಯಾಜಿ
**ಪುಟ : ೨೧೬** **ಬೆಲೆ : ರೂ. ೧೨೦**
**ಸಾಹಿತ್ಯ ನಂದನ**, ನಂ. ೯, ೪ನೇ 'ಇ' ವಿಭಾಗ, ೧೦ನೇ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೧೦

**ಚಿತ್ತ ತೂಗಿದಾಗ** (ಕವನ ಸಂಕಲನ) ಎಸ್. ವಿ. ವಿಜಯಲಕ್ಷ್ಮಿ
**ಪುಟ : ೧೮೪** **ಬೆಲೆ : ರೂ. ೯೦**
**ಗೌರಿ ಪ್ರಕಾಶನ**, ನಂ. ೩೦೫, ಚಾರ್ಟರ್ಡ್ ಮಡಿ ಅಪಾರ್ಟ್‌ಮೆಂಟ್ಸ್, ೪೫/೨೧ನೇ ಮುಖ್ಯರಸ್ತೆ ೨ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

**ಬರಗಾಲ** (ಅನುವಾದಿತ ಕತೆಗಳು) ವಿ. ಗಣೇಶ
**ಪುಟ : ೯೮** **ಬೆಲೆ : ರೂ. ೭೫**
**ಆಕಾಶ ಪ್ರಕಾಶನ**, ನಂ. ೫೬, ಚಾಮರಾಜಪೇಟೆ, ಮುಖ್ಯ ಅಂಚೆಕಛೇರಿ ಹಿಂಭಾಗ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

**ಕನ್ನಡ ಸ್ವಪ್ನ ವಾಸವದತ್ತ** ಸಿ. ಪಿ. ಕೆ.
**ಪುಟ : ೬೪** **ಬೆಲೆ : ರೂ. ೪೦**
**ನಾಗಾರ್ಜುನ ಎಂಟರ್‌ಪ್ರೈಸಸ್**, ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ದಿನಕ್ಕೊಮ್ಮೆ ಶರಣರ ನೆನೆದೇನ** (ಲೇಖನಗಳು)
ಪೂಜ್ಯ ಶ್ರೀ ಡಾ॥ ಬಸವಲಿಂಗ ಪಟ್ಟದ್ದೇವರು
**ಪುಟ : ೭೨** **ಬೆಲೆ : ರೂ. ೩೫**
**ಬಸವಧರ್ಮ ಪ್ರಸಾರ ಸಂಸ್ಥೆ**, ಹಿರೇಮಠ ಸಂಸ್ಥಾನ, ಭಾಲ್ಕಿ - ೫೮೫ ೩೨೮, ಬೀದರ ಜಿಲ್ಲೆ

**ಮೂರು ನಾಟಕಗಳು** ಕಾತ್ಯಾಯಿನಿ ಕುಂಜಿಬೆಟ್ಟು
**ಪುಟ : ೧೩೨** **ಬೆಲೆ : ರೂ. ೬೫**
**ಶ್ರೀನಿವಾಸ ಪುಸ್ತಕ ಪ್ರಕಾಶನ**, ನಂ, ೧೬೪/ಎ, ಮೊದಲನೇ ಮಹಡಿ, ಎಂ.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೪

**ಗ್ರಹಗಣಿತ 'ಗ್ರಹಲಾಘವಮ್'** - ಖಗೋಳ ಗಣಿತ ಕೃತಿ
ಡಾ॥ ಎಸ್. ಬಾಲಚಂದ್ರರಾವ್, ಡಾ॥ ಎಸ್. ಕೆ. ಉಮಾ
**ಪುಟ : ೪೩೬** **ಬೆಲೆ : ರೂ. ೨೫೦**
**ಭವನ್ಸ್ ಗಾಂಧೀ ಸೆಂಟರ್ ಆಫ್ ಸೈನ್ಸ್ ಅಂಡ್ ಹ್ಯೂಮನ್ ವ್ಯಾಲ್ಯೂಸ್**, ಭಾರತೀಯ ವಿದ್ಯಾಭವನ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - ೫೬೦ ೦೦೧

**ಇನ್ನೊಂದು ಸಭಾಪರ್ವ** (ನಾಟಕ) ಲಲಿತಾ ಸಿದ್ಧಬಸವಯ್ಯ
**ಪುಟ : ೭೬** **ಬೆಲೆ : ರೂ. ೫೦**
**ಚಾಣಕ್ಯ ಪ್ರಕಾಶನ**, ಮಾಲಘಾನ ಬಿಲ್ಡಿಂಗ್, ಮೀನಾಕ್ಷಿ ಚೌಕ, ಬಿಜಾಪುರ - ೫೮೬ ೧೦೧

**ರಸಾಯನ** (ಲಲಿತ ಪ್ರಬಂಧಗಳು) ಎಸ್. ಆರ್. ಸುಬ್ರಹ್ಮಣ್ಯ
**ಪುಟ : ೧೧೨** **ಬೆಲೆ : ರೂ. ೫೦**
**ವಾಗ್ದೇವಿ ಸಾಹಿತ್ಯ**, ವಾಗ್ದೇವಿ, ಹಯಗ್ರೀವ ನಗರ, ಉಡುಪಿ - ೫೭೬ ೧೦೨

**ಹೊನ್ನಂಬರಿಕೆ ಬಳ್ಳಾರಿ ಜಿಲ್ಲೆಯ ವಿವಿಧ ಲೇಖಕರ ಕಥಾ ಸಂಕಲನ** ಸಂ. ಗುರುಮೂರ್ತಿ ಪೆಂಡಕೂರು
**ಪುಟ : ೧೪೬** **ಬೆಲೆ : ರೂ. ೭೦**
**ಯುವಕರ ಸಂಘ (ರಿ)**, ರಾಮನಗರ, ಹಗರಿಬೊಮ್ಮನ ಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

ನಭಾವಲೋಕನ

# ಜ್ಯೇಷ್ಠಾ ಮತ್ತು ಅದರ ಸಂಗಾತಿಗಳು

ನವೆಂಬರ್ ಎಂದರೆ ಶುಭ್ರ ಆಕಾಶವನ್ನು ನಿರೀಕ್ಷಿಸ ಬಹುದಾದ ತಿಂಗಳು. ಸಂಜೆ ಪೂರ್ವದಲ್ಲಿ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಗುರುಗ್ರಹ. ಅನೇಕರು ಶುಕ್ರ ಎಂದು ಭ್ರಮೆಗೆ ಒಳಗಾಗಬಹುದು. ಆದರೆ ಸಂಜೆ ಶುಕ್ರ ಎಂದಿಗೂ ಪೂರ್ವದಲ್ಲಿ ಕಾಣುವುದಿಲ್ಲ. ಕಳೆದ ತಿಂಗಳವರೆಗೂ ಸಂಜೆಯಲ್ಲಿ ಕಾಣುತ್ತಿದ್ದ ಶುಕ್ರ ಈ ತಿಂಗಳಿನಿಂದ ಬೆಳಗಿನಜಾವ ಕಾಣತೊಡಗುತ್ತದೆ. ತಿಂಗಳ ಕೊನೆಗೆ ಶುಕ್ರ, ಶನಿ ಮತ್ತು ಚಿತ್ರಾ. ಇವುಗಳ ಸಣ್ಣ ತ್ರಿಕೋಣ ಪೂರ್ವದಲ್ಲಿ ಬೆಳಗಿನ ಜಾವ ಕಾಣುತ್ತದೆ. ಡಿಸೆಂಬರ್ ೧ರಂದು ಚಂದ್ರ ಈ ಗುಂಪಿಗೆ ಸೇರುವುದನ್ನು ಕಾಣಬಹುದು.

ಸಂಜೆಯಲ್ಲಿ ಪಶ್ಚಿಮದಲ್ಲಿ ಧನು ರಾಶಿಯ ಸೊಬಗನ್ನು ವೀಕ್ಷಿಸಲು ಈ ತಿಂಗಳು ಕೊನೆಯ ಅವಕಾಶ. ಪಶ್ಚಿಮದ ಅಂಚಿನಲ್ಲಿ ಕಾಣುವ ವೃಶ್ಚಿಕರಾಶಿಯನ್ನು, ಅದರ ಜ್ಯೇಷ್ಠಾ ನಕ್ಷತ್ರವನ್ನು ಮರೆಯದೆ ವೀಕ್ಷಿಸಲೇಬೇಕು. ಮೊದಲ ಬಾರಿಗೆ ಈ ಪ್ರಯತ್ನ ಮಾಡುವವರಿಗೆ ಸವಾಲೇ ಎದುರಾಗುವುದು. ಏಕೆಂದರೆ, ಕೆಂಪು ನಕ್ಷತ್ರ ಜ್ಯೇಷ್ಠಾ ಅದರ ಪಕ್ಕದ್ದು ಅನುರಾಧಾ, ನೀಲಿನಕ್ಷತ್ರ. ತಿಂಗಳ ಆರಂಭದಲ್ಲಿ ಕೆಂಪು ಮಂಗಳ ಗ್ರಹ ಇವೆರಡರೊಡನೆ ಗುಂಪುಗೂಡುತ್ತದೆ. ಯಾವುದು ನಕ್ಷತ್ರ, ಯಾವುದು ಗ್ರಹ ಎಂದು ತಿಳಿಯಲು ಪ್ರತಿ ಸಂಜೆ ಇವುಗಳ ಆಟವನ್ನು ಗಮನಿಸಬೇಕು. ಅನುರಾಧಾ ಸಂಜೆಗೆಂಪಿನಲ್ಲಿ ಮಾಯವೇ ಆಗಬಹುದು. ಒಂದು ವಾರದ ನಂತರ ಇನ್ನೊಂದು ಹೊಸಚುಕ್ಕೆ ಈ ಗುಂಪಿಗೆ ಸೇರುತ್ತದೆ. ಅದೇ ಬುಧಗ್ರಹ. ಮೂರೂ ಸಾಲಾಗಿ ಸಿಪಾಯಿಗಳಂತೆ ನಿಲ್ಲುತ್ತವೆ. ದಿನದಿನಕ್ಕೆ ದೂರ ಸರಿಯುವ ಜ್ಯೇಷ್ಠಾ ತಿಂಗಳ ಕೊನೆಗೆ ತನ್ನ ಸಂಗಾತಿಗಳೆರಡನ್ನೂ ತೊರೆದು ಹೋಗಿಯೇ ಬಿಡುತ್ತದೆ.

ರಾತ್ರಿ ಮುಂದುವರಿದಂತೆ ಪೂರ್ವದಲ್ಲಿ (ಒರೈಯನ್) ಮಹಾವ್ಯಾಧ ಉದಯ ವಾದಾಗ ಆಕಾಶಗಂಗೆಯ ಇನ್ನೊಂದು ಭಾಗ ನೋಡಲು ಸಿಗುತ್ತದೆ.

ಈ ತಿಂಗಳ ಹೆಸರು ಕಾರ್ತಿಕ; ೨೧ರ ಹುಣ್ಣಿಮೆಯಂದು ಚಂದ್ರನನ್ನು ಮರೆಯದೇ ವೀಕ್ಷಿಸಿ. ಅದರ ಪಕ್ಕವೇ ಕಾಣುವ ನಕ್ಷತ್ರ ಗುಚ್ಛವೇ ಕೃತ್ತಿಕಾ. ಪೂರ್ಣಚಂದ್ರನ ಪ್ರಖರ ಬೆಳಕಿನಲ್ಲಿ ಮಂಕಾಗಿ ಕಾಣುತ್ತದೆ. ಮುಂದಿನ ದಿನಗಳಲ್ಲಿ ಸಂಜೆ ಅದೇ ದಿಕ್ಕಿನಲ್ಲಿ ನೋಡಿದಾಗ ಚಂದ್ರನಿಲ್ಲದಿರುವುದರಿಂದ ಸ್ಪಷ್ಟವಾಗಿ ಗುರುತಿಸಬಹುದು. ಆಗ ಚಂದ್ರನ ಬೆಳಕಿನ ಅಡಚಣೆಯೂ ಇರುವುದಿಲ್ಲ.

ನವೆಂಬರ್ ಎಂದರೆ ಉಲ್ಕಾವೃಷ್ಟಿಯ ತಿಂಗಳು. ೧೭ರಂದು ಗರಿಷ್ಠ ಮುಟ್ಟುವ ಲಿಯೋನಿಡ್ಸ್ ವೃಷ್ಟಿಗೆ ಚಂದ್ರನ ಬೆಳಕೇ ಅಡಚಣೆಯಾಗಬಹುದು. ಆದರೂ ಆಕಾಶ ಶುಭ್ರವಾಗಿದ್ದರೆ ಬೆಳಗಿನ ಜಾವ ಗಂಟೆಗೆ ಹತ್ತಿಪ್ಪತ್ತು ಪ್ರಕಾಶಮಾನ ಉಲ್ಕೆಗಳು ಕಾಣಬಹುದು.

### ಖಗೋಳ ದಿನಚರಿ

ನವೆಂಬರ್ ೩ ಚಂದ್ರ ಭೂಮಿ ನಡುವೆ ಕನಿಷ್ಠ ದೂರ
೪ ಚಂದ್ರ-ಶನಿ ಜೋಡಿ *
೫ ಚಂದ್ರ-ಶುಕ್ರ ಜೋಡಿ
೬ ಅಮಾವಾಸ್ಯೆ ೧೦:೨೨ಕ್ಕೆ
೭ ಬುಧ-ಚಂದ್ರ-ಮಂಗಳ ಪುಟ್ಟ ಗುಂಪು
೧೦ ಮಂಗಳ- ಜ್ಯೇಷ್ಠಾ ಜೋಡಿ *
೧೩ ಚಾಂದ್ರಮಾಸದ ಮೊದಲ ಪಾದ
೧೫ ಬುಧ- ಜ್ಯೇಷ್ಠಾ ಜೋಡಿ *
ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
೧೬ ಚಂದ್ರ-ಗುರು ಜೋಡಿ *
ಲಿಯೋನಿಡ್ಸ್ ಉಲ್ಕಾ ವೃಷ್ಟಿ *
೨೧ ಮಂಗಳ-ಬುಧ ಜೋಡಿ *
ಹುಣ್ಣಿಮೆ ೨೨:೫೭ಕ್ಕೆ
೨೮ ಚಾಂದ್ರಮಾಸದ ಕೊನೆಯಪಾದ
೩೦ ಚಂದ್ರ-ಭೂಮಿ ನಡುವೆ ಕನಿಷ್ಠ ದೂರ
ಡಿಸೆಂಬರ್ ೧ ಚಂದ್ರ, ಶುಕ್ರ, ಶನಿ, ಚಿತ್ರಾ – ಪುಟ್ಟ ಗುಂಪು. (ಮುಂಜಾವು) *
ಬುಧ ಗ್ರಹದ ಗರಿಷ್ಠ ಕೋನೋನ್ನತಿ. (ಸಂಜೆ) *
(* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ)

ನವೆಂಬರ್ ೧೭ರ ಸಂಜೆ ಮಂಗಳ, ಬುಧ ಮತ್ತು ಜ್ಯೇಷ್ಠಾ

**ಅನೇಕರು ಬೆಂಗಳೂರಿನ ಗವಿ ಗಂಗಾಧರೇಶ್ವರ ದೇವಸ್ಥಾನದಲ್ಲಿ ಮಕರ ಸಂಕ್ರಮಣದಂದು ಸೂರ್ಯ ಮಜ್ಜನ ನೋಡಲು ಹೋಗಿ ನೂಕು ನುಗ್ಗಲು ಕಂಡು ನಿರಾಶರಾಗಿರಬಹುದು. ಈ ತಿಂಗಳು ೨೮, ೩೦ ಮತ್ತು ಡಿಸೆಂಬರ್ ೧ - ಈ ಅವಧಿಯಲ್ಲಿ ದೇವಸ್ಥಾನಕ್ಕೆ ಹೋದರೆ ಅದೇ ಸೂರ್ಯ ಮಜ್ಜನವನ್ನು ನೋಡಬಹುದು. ಸೂರ್ಯರಶ್ಮಿ ಲಿಂಗವನ್ನು ಸ್ಪರ್ಶಿಸುವುದು ಸಂಜೆ ಸುಮಾರು ೪:೪೫ರಿಂದ ೫:೧೦ರವರೆಗೆ - ಆ ಹೊತ್ತಿನಲ್ಲಿ ಬಾಗಿಲು ತೆರೆಯದಿದ್ದರೂ ಕಿಟಕಿಯಿಂದ ನೋಡಬಹುದು.**

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

**ನಾ**ಗೇಶ್ ಯಾವಾಗ್ಲೂ ಒಂದಲ್ಲ ಒಂದು ನಾಟಕದ ತಯಾರಿನಲ್ಲೇ ಇರ್ತಾ ಇದ್ದ. ನಾನು ಅವನನ್ನು ಚಿಕ್ಕಂದಿನಿಂದ ಕಂಡಿರೋದೆ ನಾಟಕಗಳ ಜೊತೆಗೆ. ನಂಗೂ ಅವನಿಗೂ ೧೯ ವರುಷಗಳ ಅಂತರ ಇದ್ರೂ ಹೋಗೊ ಬಾರೋ ಅನ್ನೊ ಅಷ್ಟು ಸಲಿಗೆ ಕೊಟ್ಟಿದ್ದ ನಮಗೆ. ನಮ್ಮ ಮನೇಲಿ ಎಲ್ಲರೂ ಹಾಗೆ ಕರೀತಿದ್ದರು ಅವನನ್ನ.

ಆಗ ನಂ ಮನೆ ಮಲ್ಲೇಶ್ವರದ ಫಸ್ಟ್ ಕ್ರಾಸ್‌ನಲ್ಲಿತ್ತು. ದೊಡ್ಡ ಅಂಗಳ. ನಾಗೇಶನ ಸ್ನೇಹಿತರಾದ ಕೃಷ್ಣಪ್ಪ, ಶಿವಸ್ವಾಮಿ, ಬಸವರಾಜು, ಕಾಳೇಕರ್, ಬಿಳೀನಾಗರಾಜು ನಮ್ಮ ಮನೆಗೆ ಬರ್ತಿದ್ರು; ಮರದ ರಿಪೀಸುಗಳು, ನೀಲಿಬಟ್ಟೆ ಹರಡಿಕೊಂಡು ರಾತ್ರಿ ಎಲ್ಲಾ ಲಟಪಟ ಅಂತ ಶಬ್ದ ಮಾಡ್‌ಕೊಂಡು ಬೆಳಗಾಗೊದ್ರಲ್ಲಿ ನಾಟಕದ ಸೈಡ್‌ವಿಂಗ್ಸ್, ಹೌಸ್ ಫ್ಲಾಟ್ಸ್ ರೆಡಿಮಾಡಿಬಿಡ್ತಿದ್ರು. ಬೆಳಗ್ಗೆ ನಾನು ನನ್ನ ಅಕ್ಕಂದಿರು ಅದರ ಮರೆಗಳಲ್ಲಿ ಕಳ್ಳ ಪೊಲೀಸ್ ಆಟ ಆಡತಿದ್ವಿ.

''ಹೇ ಕತ್ತೆಗಳಾ, ಈ ಕಡೆ ಬನ್ನಿ. ಸಣ್ಣಸಣ್ಣ ಮೊಳೆಗಳು ಬಿದ್ದಿರುತ್ತೆ ಅಲ್ಲಿ'' ಅಂತ ನಾಗೇಶ್ ಬೆಳಗ್ಗೆ ನಿಧಾನವಾಗಿ ಎದ್ದು ಬಂದು ಕೂಗಿಕೊಳ್ಳೋನು. ಪುಟ್ಟ ಹುಡುಗನಾಗಿದ್ದ ನನಗೆ ಆ ಸೈಡ್‌ವಿಂಗುಗಳು ಬೃಹದಾಕಾರವಾಗಿ ಕಾಣ್ತಿದ್ವು.

''ಯಾಕೋ ನಾಗೇಶ ಇದು ?''

''ನಂ ನಾಟಕಕ್ಕೆ.''

**ರಾ. ಪ್ರಕಾಶ್ ಅರಸ್**

''ಯಾವಾಗ ?''

''ಇವೊತ್ತು ಸಂಜೆ ಇದೆ ಕಣೋ.''

''ನಾನೂ ಬರ್ಲಾ ?''

''ನಿಂಗೆ ಅದೆಲ್ಲ ಅರ್ಥ ಆಗೊಲ್ಲ. ಶ್ರೀರಂಗರ ನಾಟಕ ಅದು.''

''ಕನ್ನಡ ತಾನೆ ! ನಾನೂ ಬರ್ತೀನಿ.''

''ಹೇ ನಿಂಗೆ ಅವೆಲ್ಲ ಗೊತ್ತಾಗಲ್ಲ ಸುಮ್ನಿರೋ. ಸ್ವಲ್ಪ ದೊಡ್ಡೋನಾಗು. ಖಂಡಿತಾ ಕರ್‍ಕೊಂಡ್‌ಹೋಗ್ತೀನಿ.''

ಹಾಗೆ ಒಂದ್ ದಿನ ನಾಗೇಶ್ ಬೊಕ್ಕುತಲೆಯ ಒಬ್ಬರ ಫೋಟೊ ಹಿಡ್ಕೊಂಡ್ ಮನೆಗೆ ಬಂದು ಮೈಸೂರು ಮಹಾರಾಜರ ಫೋಟೋನ ಫ್ರೇಮ್‌ನಿಂದ ತೆಗೆದುಹಾಕಿ ತಾನು ತಂದಿದ್ದೋರ ಫೋಟೋ ಹಾಕ್ತಾ ಇದ್ದ.



# ನಾಗೇಶನ ನೆನಪುಗಳು

ಕಳೆದ ೧೮-೯-೨೦೧೦, ಶನಿವಾರದಂದು ನಮ್ಮನ್ನು ಅಗಲಿದ ಆರ್. ನಾಗೇಶ್ ಕನ್ನಡ ರಂಗಭೂಮಿ ಚಳುವಳಿಯಲ್ಲಿ ಒಂದು ಮಹತ್ತರ ಪಾತ್ರವನ್ನು ನಿರ್ವಹಿಸಿದರು. ನಾಗೇಶ್ ಅವರು ನಿರ್ದೇಶಕರಾಗಿ, ಸಂಘಟಕರಾಗಿ, ನಟರಾಗಿ, ರಂಗಭೂಮಿ ಪ್ರಿಯರ ಗೆಳೆಯನಾಗಿ ನಮ್ಮ ನೆನಪಿನ ಅಂಗಳದಲ್ಲಿ ಅಚಲವಾಗಿ ನಿಂತುಬಿಡುವ ವ್ಯಕ್ತಿತ್ವ. ತಮ್ಮ ಬದುಕನ್ನೇ ರಂಗಭೂಮಿಗೆ ಮೀಸಲಾಗಿಟ್ಟಿದ್ದರು ಎಂದರೆ ಉತ್ಪ್ರೇಕ್ಷೆಯಲ್ಲ. ಐದು ದಶಕಗಳಿಗೂ ಮೀರಿ ಕನ್ನಡದ ಆಧುನಿಕ ರಂಗಭೂಮಿಯ ಚಳುವಳಿಯನ್ನು ನಿರಂತರವಾಗಿಸುವಲ್ಲಿ ನಾಗೇಶರ ಪಾತ್ರ ಮಹತ್ವದ್ದು. ಲೇಖಕ ರಾ. ಪ್ರಕಾಶ್ ಅರಸ್ ದಿ| ನಾಗೇಶ್‌ರ ಕಿರಿಯ ಸಹೋದರ. ನಾಗೇಶರನ್ನು ಕುರಿತು ಅವರು ಅಕ್ಕರೆಯಿಂದ ಬರೆದುಕೊಟ್ಟಿರುವ ವ್ಯಕ್ತಿಚಿತ್ರ ಇಲ್ಲಿದೆ.

''ಯಾರೊ ಇವರು ?''

''ಶ್ರೀರಂಗ ಅಂತ ಹೇಳ್ತಿದ್ನಲ್ಲ. ನಂ ನಾಟಕ ಬರ್‍ದೋರು.''

''ಹೋ ಇವರೇನಾ ! ನಂಗೆ ಅರ್ಥ ಆಗದೇ ಇರೋ ನಾಟಕ ಬರೀತಾ ಇರೋರು ?''

ಮಹಾರಾಜರ ಫ್ರೇಮ್‌ನಲ್ಲಿ ಶ್ರೀರಂಗರು ಬಂದು ಕೂತರು. ಅದಕ್ಕಿಂತ ಮುಂಚೆ ಅನಕೃ ಬಂದು ವೆಂಕಟರಮಣ ಸ್ವಾಮಿ ಫೋಟೋ ಫ್ರೇಮ್‌ನಲ್ಲಿ ಸೇರ್‍ಕೊಂಡ್ರು.

ಆ ಕಾಲದಲ್ಲಿ ನಮ್ಮಗಳ ಮನೇಲೆಲ್ಲ ಬೇರೆ ಯಾರ ಫೋಟೋಗಳೂ ಇರಲಿಲ್ಲ. ದೇವರ ಫೋಟೋ, ಮಹಾರಾಜರ ಫೋಟೋ, ಗಾಂಧಿ, ಸುಭಾಷ್‌ಚಂದ್ರ ಬೋಸು ಬಿಟ್ರೆ ಸತ್ತೋಗಿದ್ದ ಅಜ್ಜಿ, ತಾತನ ಫೋಟೋಗಳು; ಅಷ್ಟೆ. ನಾಗೇಶನಿಂದಾಗಿ ಈ ಹೊಸ ಮುಖಗಳು ಬಂದು ನಂ ಮನೆ ಗೋಡೆಗಳಿಗೆ ನೇತುಬಿದ್ದವು.

ನಂ ಅಪ್ಪ ಬಂದು ಕೇಳಿದ್ರು, ''ಇದೇನೋ ಮನೆ ದೇವರ ಫೋಟೋ, ಮೈಸೂರು ಅರಸ ಫೋಟೋಗಳಲ್ಲಿ ಬೇರೆಯವರ ಫೋಟೋ ಹಾಕಿಬಿಟ್ಟಿದ್ಯಾ ?''

''ಇಷ್ಟೊಂದು ದೇವರುಗಳ ಫೋಟೋ ಇದೆ ಅಲ್ವಾ ಬಿಡಣ್ಣ'' (ಅಪ್ಪನ್ನ ಅಣ್ಣ ಅಂತ, ಅಮ್ಮನ್ನ ಅಕ್ಕ ಅಂತ ನಮ್ಮ ಮನೇಲಿ ಕರೀತಿದ್ದದ್ದು ರೂಢಿ).

''ಸರಿ. ಆದ್ರೆ ಮಹಾರಾಜರ ಫೋಟೋ ? ನಾವು ಅರಸುಗಳಾಗಿ ನಂ ಮನೇಲಿ ಅವರ ಫೋಟೋಗಳು ಇಲ್ಲಾಂದ್ರೆ ಹೇಗಪ್ಪಾ ?''

ಕೊನೆ ದೊರೆಯ ಕೊರಳಿಗಾ
ಕೊನೇ ಪುರೋಹಿತನ ಕರುಳು
ಉರುಳಾಗುವವರೆಗೆ
ಸುಖವಿಲ್ಲ ಈ ಧರೆಗೆ.
(ಕುವೆಂಪು ಅವರ ಜಲಗಾರ ನಾಟಕದ ಸಾಲುಗಳು)

ಅಂತ ಹೇಳಿ ಸುಮ್ಮನಾಗಿಬಿಟ್ಟ ನಾಗೇಶ್.

ನಾಗೇಶ್‌ಗೆ ದೇವರು, ದಿಂಡ್ರು, ರಾಜರು, ಮಂತ್ರಿಗಳು ಅಂದ್ರೆ ಮೊದಲಿಂದ್ಲೂ ಅಷ್ಟಕ್ಕಷ್ಟೆ. ಅಧಿಕಾರಶಾಹಿ, ಜಾತಿ, ಧರ್ಮಶಾಹಿ ಎಲ್ಲವನ್ನು ದೂರ ಇಟ್ಟಿದ್ದ.

ನಾಗೇಶ್‌ನ ಮೇಲೆ ಶ್ರೀರಂಗರ ಪ್ರಭಾವ ಜಾಸ್ತಿ.

ಅವರ ನಾಟಕದ ಅನೇಕ ಲೀಫ್‌ಲೆಟ್‌ಗಳು, ಪೋಸ್ಟರುಗಳು ನಮ್ಮ ಮನೆಗೇ ಮೊದಲು ಬರ್ತಾ ಇತ್ತು. ಅದು ಸುಮಾರು ೧೯೬೭ರ ಕಾಲ. ನಾಗೇಶ್, ಅವನ ಸ್ನೇಹಿತರು ಪೋಸ್ಟರ್‌ಗಳನ್ನು ಸೈಕಲ್ ಮೇಲೆ ಹಾಕಿಕೊಂಡು (ಶಿವಸ್ವಾಮಿ ಹತ್ರ ಆಗ ಒಂದು ಸೈಕಲ್ ಇತ್ತು). ಊರಿನ ಗೋಡೆಗಳ ಮೇಲೆಲ್ಲಾ ಪೋಸ್ಟರ್ ಅಂಟಿಸಿ ಸರಿ ರಾತ್ರಿ ಮನೆಗೆ ಬರ್ತಿದ್ರು.

'ನೀ ಕೊಡೆ ನಾಬಿಡೆ', 'ಕೇಳು ಜನಮೇಜಯ', 'ಕತ್ತಲೆ ಬೆಳಕು', 'ಶೋಕಚಕ್ರ' ಮೊದಲಾದ ನಾಟಕಗಳ ಕುರಿತು ಪೋಸ್ಟರುಗಳು ನಂ ಮನೆಗೆ ಬಂದುಹೋಗ್ತಿದ್ದು. ನಂ ಮನೆ ತುಂಬಾ ಪೋಸ್ಟರುಗಳ ವಾಸನೆ, ಗೋಂದಿನ ವಾಸನೆ ತಡೀಲಾರದೆ ನಂ ತಾಯಿ, ''ಅಯ್ಯೊ ಆಚೆನಾದ್ರೂ ಇಟ್ಟು ಬಾರೋ'' ಅನ್ನೋದು ಮಾಮೂಲಿ ಆಗಿತ್ತು.

''ಇರ್ಲಿ ಬಿಡಕ್ಕ, ಚೆನ್ನಾಗಿದೆ ವಾಸನೆ'' ಅಂತ ನಾಗೇಶ ಉತ್ತರ ಕೊಡ್ತಿದ್ದದ್ದು ಅಷ್ಟೇ ಮಾಮೂಲಿ ಆಗ್ತಿತ್ತು. ''ನಾಗೇಶ ಪೋಸ್ಟರ್ ಅಂಟಸೋಕೆ ನಾಳೆ ನಾನೂ ಬರ್ಲಾ?'' ಅಂತ ನಾನು ಆಗಾಗ ಕೇಳ್ತಿದ್ದೆ. ನನ್ನ ತಾಯಿ ನನ್ನನ್ನೂ ಸೇರಿಸಿ ನಾಗೇಶನ್ನ ಬೈಯೋರು, ''ಈ ನಾಟಕದ ವಾಸನೆ ನಿನಗೊಬ್ಬನಿಗೇ ಇರಲಿ. ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆಲ್ಲ ಅಂತ ಇವನಿಗೂ ಕಲಿಸಿಬಿಡಬೇಡ.''

ಆದ್ರೆ ನಂಗೂ ಆಸೆ, ನಾಗೇಶನ ಜೊತೆ ನಾನೂ ಹೋಗಬೇಕು ಅಂತ. ಒಮ್ಮೆ ೧೯೭೪ರಲ್ಲಿ ಪ್ರೊ|| ಬಿ. ಸಿ. ಅವರು 'ತುಘಲಕ್' ನಾಟಕ ಮಾಡಿಸ್ತಿದ್ರು. ನಾಗೇಶ್ ನನ್ನ ಕರ್‌ಕೊಂಡುಹೋಗಿ ಮೊಟ್ಟಮೊದಲ ಬಾರಿಗೆ ಸ್ಟೇಜ್ ಹತ್ತಿಸಿದ. ದಿನಾ ರಿಹರ್‌ಸಲ್‌ಗೆ ಕರ್‌ಕೊಂಡು ಹೋಗೋನು. ದೆಹಲಿಯಿಂದ ದೌಲತಾಬಾದ್‌ಗೆ ಹೋಗೋ ಗುಂಪಿನ ಕಲಾವಿದರಲ್ಲೊಬ್ಬನ ೮ ವರ್ಷದ ಮಗನ ಪಾತ್ರ ನಂದು. ಮಾತಿಲ್ಲ ಏನಿಲ್ಲ. ಆದ್ರೂ ಒಂದು ತಿಂಗಳು ಆ ರಿಹರ್‌ಸಲ್‌ಗೆ ನಾಗೇಶ್ ನನ್ನನ್ನು ತಪ್ಪದೇ ಮನೆಗೆ ಬಂದು ಕರ್ಕೊಂಡು ಹೋಗ್ತಿದ್ದ.

ಮುಂದೆ ೧೯೭೮ರಲ್ಲಿ ಸಮುದಾಯದ ಆಶ್ರಯದಲ್ಲಿ ಕುಂಬಳಗೋಡಿನಲ್ಲಿ ನಡೆದ ಬಾದಲ್ ಸರ್ಕಾರ್ ಅವರು ನಡೆಸಿಕೊಟ್ಟ ರಂಗತರಬೇತಿ ಶಿಬಿರಕ್ಕೆ ನನ್ನನ್ನು ಸೇರಿಸಿದ್ದೂ ಅವನೆ.

ನಾಗೇಶ್ ಹುಟ್ಟಿದ್ದು ಕೋಲಾರದಲ್ಲಿ (ಬೆಂಗಳೂರಿಗೆ ಬಾಂಬ್ ಹಾಕ್ತಾರೆ ಅಂತ ಬಹಳ ಜನ ಊರು ಬಿಟ್ಟು ಬೇರೆ ಬೇರೆ ಕಡೆ ಹೊರಟುಹೋಗ್ತಿದ್ರಂತೆ ಆಗ). ನಾಗೇಶ್ ಹುಟ್ಟೋಕೆ ಮುಂಚೆ ನಂ ತಾಯಿಗೆ ಕನಸಿನಲ್ಲಿ ಬಹಳ ಸಲ ನಾಗರಹಾವು ಕಾಣಿಸಿಕೊಳ್ತಿತ್ತಂತೆ. ಅದಕ್ಕೆ ನಂ ತಾಯಿ ನಾಗರಕಲ್ಲಿಗೆ ಪೂಜೆ ಮಾಡಿ ಗಂಡುಮಗು ಹುಟ್ಟಿದ್ರೆ 'ನಾಗೇಶ್' ಅಂತ ಹೆಸರಿಡ್ತೀನಿ ಅಂತ ಹರಕೆ ಹೊತ್ಕೊಂಡಿದ್ರಂತೆ. ಅದಕ್ಕವನ ಹೆಸರು ನಾಗೇಶ್ ಅಂತ. ಆ ಕಾರಣಕ್ಕೇನೆ ಅವನಿಗೆ ಕೋಪ ಜಾಸ್ತಿ ಅಂತ ನಂ ತಾಯಿ ಹೇಳೋರು.

ನಾಗೇಶನ ಇನ್ನೊಂದು ವಿಚಿತ್ರ ಗುಣ ಅಂದ್ರೆ ನಂ ತಾಯಿ ಏನೇ ಊಟ ಬಡಿಸಿದ್ರೂ ಒಂದು ಅಗಳೂ ಬಿಡದೆ ತಿಂದುಬಿಡ್ತಿದ್ದ. ಅಷ್ಟೇ ಅಲ್ಲ, ಒಂದು ದಿನಾನೂ ಉಪ್ಪು, ಹುಳಿ, ಖಾರ ಅದೂ ಇದೂ ಜಾಸ್ತಿ, ಕಮ್ಮಿ ಅಂದೋನಲ್ಲ.

ನಾವು ೬ ಜನ ಮಕ್ಕಳು. ೩ ಜನ ಅಣ್ಣತಮ್ಮಂದಿರು, ೩ ಜನ ಅಕ್ಕತಂಗಿಯರು. ನಾಗೇಶ್ ಮೊದಲು ಊಟ ಮಾಡಿ ಆಫೀಸ್‌ಗೆ ಹೊರಟುಹೋಗೋನು. ಆಮೇಲೆ ನಮ್ಮ ಊಟ. ''ಉಪ್ಪೇ ಹಾಕಿಲ್ಲ ಅಕ್ಕ ಸಾರಿಗೆ'' ಅಂತ ನಾವು ರಾಗ ಎಳೀತಿದ್ದು ಇಂದಿಗೂ ನೆನಪಿದೆ. ನಂ ತಾಯಿ ಪೇಚಾಡ್ತಾ, ''ಅಯ್ಯೊ ಹಾಳಾದೋನೇ, ಸುಮ್ನೆ ತಿಂದು ಹೋಗ್‌ಬಿಟ್ನಲ್ಲ... ನಾನು ಮರ್‍ತೇಬಿಟ್ಟೆ ಉಪ್ಪು ಹಾಕೋದು ಇವೊತ್ತು. ಒಂದೊಂದ್ ಸಲ ಮರೆತುಹೋಗಿ ಎರಡು ಸಲ ಉಪ್ಪು ಹಾಕಿರ್‍ತಿದ್ರು ನಮ್ಮಕ್ಕ, ಆಗ್ಲೂ ಅಷ್ಟೆ, ನಾಗೇಶ ತೆಪ್ಪಗೆ ತಿಂದು ಹೋಗ್ತಿದ್ದ. ಯಾವಾಗಲೂ ಊಟ ಮಾಡೋವಾಗ ಅದೇನೇನೋ ಯೋಚನೆ ಮಾಡ್ತಿರೋನು. ಕೆಲವು ಸಲ ಸುಮ್ಮನೆ ಕಿಟಕಿಯಿಂದಾಚೆ ಏನೋ ನೋಡ್ತಾ ನಿಂತಿರ್‍ತಿದ್ದ, ಒಳ್ಳೆ ಕಲ್ಲಿನ ಥರ. ನಂ ತಾಯಿ ಜೋರಾಗಿ ಕೂಗಿ ಕರಿಯೋತನಕ ಹಾಗೇ ನಿಂತಿರೋನು.

''ಹೇ ನಾಗೇಶ ಹೊತ್ತಾಗ್ಲಿಲ್ಲವೇನೋ ಆಫೀಸ್‌ಗೆ?''

''ಹಾಂ... ಬಂದೆ.''

ನಾಟಕಗಳ 'ಶೋ' ಆದಮೇಲೆ ನಾಗೇಶ್ ಈ ತರಹ ಕಲ್ಲಾಗೋದು ಜಾಸ್ತಿ ಕಂಡುಬಂತು.

ಆತನ ನಾಟಕದ ಹುಚ್ಚು ನೋಡಿ ನಂ ತಾಯಿ, ತಂದೆ, ತಾತ ಎಲ್ಲ ಸೇರಿ ಮದ್ವೆ ಆದರೆ ನಾಟಕದ ಹುಚ್ಚು ಬಿಡಬಹುದು ಅಂತ ಒಂದು ಹೆಣ್ಣು ಹುಡುಕಿ ಮದುವೆ ಬಂಧನದಲ್ಲಿ ಕಟ್ಟಿಹಾಕಿದರು. ನಂ ಅತ್ತಿಗೆ ಬಂದ ಸ್ವಲ್ಪ ದಿನದಲ್ಲೇ ಶುರುವಾಯ್ತು ನೋಡಿ, ''ಸವತಿ ಮತ್ಸರ''. ನಾಗೇಶ ಈ ಹೊತ್ತಿಗಾಗ್ಲೆ ರಂಗಭೂಮಿ ಜತೆ ಗಾಢವಾಗಿ ಒಂದು ಥರಾ ''ಮದುವೆ''ನೇ ಮಾಡ್ಕೊಂಡ್‌ಬಿಟ್ಟಿದ್ದ. ವಾಸ್ತವಾಂಶ ಅತ್ತಿಗೆಗೆ ಕ್ರಮೇಣ ಅರ್ಥ ಆಗ್ತಾ ಹೋಯ್ತು. ದುಗುಡ, ದುಮ್ಮಾನ ಘರ್ಷಣೆಗಳು ನಡೆದವಾದರೂ ನಾಗೇಶನ ರಂಗಭೂಮಿಯ ಮೇಲಿನ ಮೋಹ ಕಡಿಮೆ ಆಗ್ಲೇ ಇಲ್ಲ. ಮದುವೆ ಮಾಡಿ ಈ ಸಲಗಾನ್ನ ಖೆಡ್ಡಾದಲ್ಲಿ ಕೆಡವಬೇಕು ಅಂದುಕೊಂಡಿದ್ದವರೆಲ್ಲ ಸೋತು ಸುಣ್ಣ ಆದರು. ಈ ಆನೆಗೆ ತಾನು ನಡೆದದ್ದೇ ದಾರಿಯಾಯ್ತು. ಹಾಗಂತ ನಾಗೇಶನಿಗೆ ಮನೆ, ಮಕ್ಕಳು, ನಮ್ಮ ಜನ ಅಂದರೆ ಪ್ರೀತಿ ಕಡಿಮೆ ಏನಿರಲಿಲ್ಲ. ಆದ್ರೂ ಅವನಿಗೆ ಮನೆಯ ಹೊರಗೆ ಬೇರೆಯೇ ಆದ ದೊಡ್ಡದೊಂದು ಪ್ರಪಂಚ ಇತ್ತು. ಬಂದ ಸಂಬಳಾನೆಲ್ಲಾ ಪೂರ್ತಿಯಾಗಿ (ಅದೂನೂ ಸಂಬಳ ಬಂದಾಗ!) ನನ್ನ ತಾಯಿ ಮಡಿಲಲ್ಲಿ ಇಡ್ತಿದ್ದ. ಮನೆ, ಮಕ್ಕಳು ಅಂತಾದ ಮೇಲೆ ಅವನ ಸಂಬಳಾನ ನಮ್ಮ ಅತ್ತಿಗೆಗೆ ಕೊಟ್ಟುಬಿಡ್ತಿದ್ದ.

ಅವನ ಕೈಯಲ್ಲಿ ದುಡ್ಡಿದ್ದಾಗ ರಂಗಭೂಮಿಯ ಗೆಳೆಯರ ಜತೆ ಕೂಡಿ ಕಡೇ ರೂಪಾಯಿವರೆಗೂ ಉಡಾಯಿಸಿಬಿಡ್ತಿದ್ದ. ಕಿಸೆ ಖಾಲಿ ಆದಾಗ ಕಲಾಕ್ಷೇತ್ರದಿಂದ ರಿಹರ್‌ಸಲ್ ಮುಗಿಸಿ ಮಲ್ಲೇಶ್ವರದಲ್ಲಿದ್ದ ನಂ ಮನೆಗೆ ನಡೆದುಕೊಂಡೇ ಬರ್‍ತಿದ್ದ ರಾತ್ರಿಗಳು ಅದೆಷ್ಟೋ.

ನಂ ಮನೇಲಿ ಅವನ ಕೈಯಿಂದ ಹೆಚ್ಚು ಒದೆ ತಿಂದಿರೋನೂ ನಾನೇ. ಆದ್ರೆ ಅವನಿಗೆ ನನ್ನ ಕಂಡರೆ ಬಹಳ ಪ್ರೀತಿ.

ಒಂದ್ ಸಲ ಬಸ್‌ಸ್ಟ್ಯಾಂಡ್ ಹೊಟೇಲ್‌ನಲ್ಲಿ ನಾನು, ನಾಗೇಶ್, ಲಂಕೇಶ್ ಮೇಷ್ಟ್ರು, ತೇಜಸ್ವಿ ಎಲ್ಲರೂ ಕಾಫಿ ಕುಡೀತಾ ಕೂತಿದ್ವಿ.

ಲಂಕೇಶ್ ಮೇಷ್ಟ್ರು ಹೀಗೇ ಮಾತಾಡ್ತಾ:

''ರೀ ನಾಗೇಶ್, ನಿಂ ವೈಫ್ ಏನು ಓದಿರೋದು?''

''ಎಂಥದೋ ಗ್ರಾಜುಯೇಟ್ ಮೇಷ್ಟ್ರೆ.''

''ಪ್ರಾಣಿಶಾಸ್ತ್ರನಾ ಓದಿರೋದು?''

''ಇಲ್ಲ ಅನ್ಸುತ್ತೆ.''

''ಇಲ್ಲಾರಿ, ಪ್ರಾಣಿಶಾಸ್ತ್ರನೇ ಓದಿರಬೇಕು. Otherwise how is she able to manage with you so long, I say?'' ಅಂದ್ರು.

(ನಾಗೇಶ್ ಏನೂ ಹೇಳಕ್ಕಾಗದೆ ನಕ್ಕು ಸುಮ್ಮನಾದ) ತೇಜಸ್ವಿಯವರು ಮಧ್ಯೆ ಬಾಯಿಹಾಕಿ, ''No, no. ತುಂಬಾ ಸಿಂಪ್ಲಿಫೈ ಮಾಡ್ಬೇಡಿ ಈ ಪ್ರಾಣೀನ. ''Theory of Evolutionನಲ್ಲಿ ಡಾರ್ವಿನ್, Over a period of time there will be a superior animal on the face of this earth'' ಅಂತ ಹೇಳ್ತಾನೆ. ಹಾಗೆ ನಾಗೇಶ್ ಸ್ವಲ್ಪ Advanced animal. ಸಾಮಾನ್ಯ ಪ್ರಾಣಿಗಳಿಗೆ ಹೊಂದ್ಕೊಂಡು ಹೋಗೋದು ಸ್ವಲ್ಪ ಕಷ್ಟ ಆಗುತ್ತೆ, ಅಲ್ವೇನ್ರಿ ನಾಗೇಶ್?'' ಅಂತ ಚುಡಾಯಿಸಿದರು. ನಾಗೇಶ್ ಅದಕ್ಕೆ, ''ನಾನ್ ಅಷ್ಟೆಲ್ಲಾ ಓದ್‌ಕೊಂಡಿಲ್ಲ, ಅದೆಲ್ಲಾ ನಂಗೊತ್ತಾಗೋದಿಲ್ಲ. ನಾನೊಬ್ಬ ಮನುಷ್ಯ ಪ್ರಾಣಿ, ಅಷ್ಟೆ'' ಅನ್ನುತ್ತ ಮನಸಾರೆ ನಕ್ಕುಬಿಟ್ಟ.

ನಾಗೇಶ್ ತನ್ನೆಲ್ಲ ನಾಟಕಗಳನ್ನು ಒಬ್ಬ ಮನುಷ್ಯ ಪ್ರಾಣಿಯಾಗಿ, ಅಂದ್ರೆ humanist ದೃಷ್ಟಿಕೋನದಿಂದಾನೇ ಆರಿಸಿಕೊಂಡಿದ್ದ ಅನ್ಸುತ್ತೆ. ಆನಂತರ ಕೈಲಾಸಂರ ನಾಟಕಗಳು, ಶ್ರೀರಂಗರ ನಾಟಕಗಳು, ತ್ರಿಶಂಕು, ಭಾರತೀಪುರ, ಜಲಗಾರ, ತಬರನ ಕಥೆ, ಚೋಮ, ನಮ್ಮೊಳಗೊಬ್ಬ ನಾಜೂಕಯ್ಯ, ಆಸ್ಫೋಟ, ಡಾಲ್ಸ್ ಹೌಸ್, ತಾಮ್ರ ಪತ್ರ, ಮುಳ್ಳಿನ ಕಿರೀಟದಂತಹ ಎಲ್ಲ ನಾಟಕಗಳಲ್ಲಿ ಈ 'ಮನುಷ್ಯ ಪ್ರಾಣಿಯ' ಘರ್ಜನೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ನಾಗೇಶ್ ರಂಗಚಳುವಳಿಯ ಜತೆಗೆ ಜನಪರ ಚಳುವಳಿಗಳಲ್ಲೂ ಭಾಗವಹಿಸ್ತಾ ಇದ್ದ. ಶ್ರೀ ಎಚ್. ಎಸ್. ದೊರೆಸ್ವಾಮಿ ಯವರ ಜತೆ, ಶ್ರೀ ಎಚ್. ಜಿ. ಸೋಮಶೇಖರ್ ರಾವ್ ಅವರ ಜತೆ ಬೀದಿಗಿಳಿದು ಹೋರಾಟಗಳಲ್ಲಿ ದನಿಗೂಡಿಸಿದ್ದು ನನಗೆ ಹೆಮ್ಮೆಯ ವಿಷಯ. ನಾಗೇಶನ ಒಂದೇ ಒಂದು ದೌರ್ಬಲ್ಯ ಅಂದ್ರೆ ಅವನ ಸಿಟ್ಟು. ಶಿವರಾಮ ಕಾರಂತರ 'ಸರಸಮ್ಮನ ಸಮಾಧಿ' ಮಾಡೋವಾಗ ನಾನ್ ಕೇಳ್ದೆ ''ನಾಗೇಶ್, ನಿನ್ನ 'ರಾ' (Raw) ನಾಗೇಶ್ ಅಂತ ಕರೀತಾರೆ. ನಿನ್ನಿಂದ ಅದೆಷ್ಟೋ 'ರಾ' ಕಲಾವಿದರು ಪ್ರತಿಭಾನ್ವಿತರಾಗಿ ರಂಗಭೂಮಿಯಲ್ಲಿ ಮಿಂಚಿದ್ದಾರೆ ಅಂತಾರೆ. ಹಾಗೆ ನಿನ್ನ ಸಿಟ್ಟು ಸೆಡವುಗಳಿಂದ ಎಷ್ಟೋ ಜನ ಕಲಾವಿದರು ರಂಗಭೂಮಿಯಿಂದ ವಿಮುಖರಾಗಿ ಹೋಗಿರೋಕೆ ಸಾಧ್ಯ ಇಲ್ವಾ? Drama is a team work ಅಂತ ಹೇಳ್ತೀಯಲ್ಲಾ? ಅದರ ಎಲ್ಲಾ ಹೊಣೆ ನೀನೇ ಹೊತ್‌ಕೊಂಡು ಯಾಕೆ tension ಮಾಡಿಕೋತ್ಯಾ ಹೇಳು?''

''ನಿಂಗೆ ಅದೆಲ್ಲ ಗೊತ್ತಾಗಲ್ಲ ಕಣೋ.''

ಸ್ವಲ್ಪ ಹೊತ್ತು ಸುಮ್ಮನಿದ್ದ ನಾಗೇಶ್, ''ನೀನ್ ಯಾಕೆ ನಿನ್ನ ಮಗ ತಪ್ಪು ಮಾಡಿದ್ರೆ ಬೈತಿಯಾ ಹೊಡೀತೀಯಾ ಹೇಳು. ಅದೇ ಪಕ್ಕದ ಮನೆ ಮಕ್ಕಳಿಗೆ ಹೊಡೀತೀಯಾ? My drama is my child. ನಿಮಗೆಲ್ಲಾ ಇದು ಅರ್ಥ ಆಗೊಲ್ಲ'' ಅಂತ ಒಮ್ಮೆ ಗುಡುಗಿದ್ದ. ರಂಗಭೂಮಿಯ ಗೆಳೆಯರಿಗೆ ವಿದಾಯ ಹೇಳಿಹೋದ ನಾಗೇಶ್‌ಗೆ ಅವನ ನಾಟಕಗಳೇ ಅವನ ಮಕ್ಕಳು. ಅವನ ನಾಟಕಗಳು ಮತ್ತೆ ರಂಗಪ್ರದರ್ಶನ ಕಂಡಾಗ, ಅದರ ಬಗ್ಗೆ ಪತ್ರಿಕೆಗಳಲ್ಲಿ ವಿಮರ್ಶೆಗಳು ಬಂದಾಗ ಅವನಿಗೆ ತಿಳಿಸಬೇಕು ಅನ್ಸುತ್ತೆ. ಅವನ ಮೊಬೈಲ್ ನಂಬರ್ ಇನ್ನೂ ನನ್ನ ಮೊಬೈಲ್‌ನಲ್ಲಿ ಹಾಗೇ ಇದೆ.

''ಅಂದಹಾಗೆ ನಾಗೇಶ್... ನಿನ್ನ ಮೊಬೈಲ್ ನಂಬರ್ ಇನ್ನೂ... ನನ್ನ ಕೈಲಿ ಡಿಲೀಟ್ ಮಾಡೊಕೆ ಆಗ್ತಾ ಇಲ್ಲ... ಕಣ್ಣುಗಳು ಮಂಜಾಗ್ತಿವೆ... ನಾಗೇಶ್...''

**ಡಾ. ಪ್ರಕಾಶ್ ಅರಸ್**
ನಂ. ೨೦೪ ಜಿ, 'ಉಜ್ವಲ ನಿಲಯ', ಬಾಹುಬಲಿ ನಗರ
ಜಾಲಹಳ್ಳಿ ಅಂಚೆ, ಬೆಂಗಳೂರು - ೫೬೦ ೦೧೩

# ಮುಗ್ಧ ನಂಬಿಕೆಯಿಂದ ಅನುಮಾನದ ಕಡೆಗೆ

## (ಆಧುನಿಕ ಮತ್ತು ಮಹಿಳಾಪರ ಚಿಂತನೆಗಳು)

ಡಾ॥ ಸಬಿತಾ ಬನ್ನಾಡಿ

ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ಕಮಲಾದೇವಿ ಚಟ್ಟೋಪಾಧ್ಯಾಯ, ಸುಮಾರು ೧೮೦೭ರಿಂದಲೇ ನಡೆದ ಅನೇಕ ಸುಧಾರಣಾವಾದಿ ಚಳುವಳಿಗಳ ಕುರಿತು, ಮುಖ್ಯವಾಗಿ ಸ್ತ್ರೀ ಸುಧಾರಣೆಗಳ ಕುರಿತು ದಾಖಲೆಗಳನ್ನು, 'ತಮ್ಮ ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' ಎಂಬ ಪುಸ್ತಕದಲ್ಲಿ ಕೊಡುತ್ತಾರೆ. ಹಾಗೆಯೇ ಮೊಘಲರ ಆಡಳಿತದ ಕಾಲದಲ್ಲಿ, ಬಿಹಾರ ಮತ್ತು ಬಂಗಾಳಗಳಲ್ಲಿ ಒಂದು ಲಕ್ಷ ಶಾಲೆಗಳಿದ್ದುವು, ಸ್ತ್ರೀಯರಿಗೂ ಶಿಕ್ಷಣ ಇತ್ತು ಎಂಬುದನ್ನು ಹೇಳಿ, ಇದು ಕೇವಲ ಬ್ರಿಟಿಷರ ಕೊಡುಗೆಯಲ್ಲ ಎನ್ನುತ್ತಾರೆ. ಅದಕ್ಕಿಂತ ಮುಂಚೆ ಅವರು ವೇದ, ಮಹಾಭಾರತ ಇತ್ಯಾದಿಗಳ ಆಧಾರದ ಮೇಲೆ ಮಹಿಳೆಯರಿಗಿದ್ದ ಅನೇಕ ಸವಲತ್ತುಗಳನ್ನು ಕುರಿತು ಹೇಳುತ್ತಾರೆ. ಕುತೂಹಲದ ವಿಷಯವೆಂದರೆ, ೧೯ನೇ ಶತಮಾನದಲ್ಲಿ ಯಾವ ಸವಲತ್ತುಗಳಿಗಾಗಿ ಹೋರಾಟ ಮಾಡಲಾಯಿತೋ, ಆ ಎಲ್ಲಾ ಸವಲತ್ತುಗಳು  ಅಂದರೆ ಶಿಕ್ಷಣ, ಆಸ್ತಿ, ಲಿಂಗಸಮಾನತೆ, ವಿವಾಹಾನಂತರವೂ ತನ್ನ ತವರಿನಲ್ಲೇ ಉಳಿಯುವ ಆಯ್ಕೆ – ಈ ಎಲ್ಲವೂ ಪ್ರಾಚೀನ ಭಾರತದಲ್ಲಿ ಇದ್ದುವು ಎಂಬುದಕ್ಕೆ ಅವರು ಆಧಾರಗಳನ್ನು ಕೊಡುತ್ತಾರೆ. ಹಾಗೆಯೇ, ಅವರು ಹೇಳುವ ಇನ್ನೊಂದು ಮಾತು ಅತ್ಯಂತ ಮುಖ್ಯವಾದುದು ಎಂದು ನನಗನಿಸುತ್ತಿದೆ, ಅದೆಂದರೆ, ''ಮಹಿಳೆಯರ ಸಮಸ್ಯೆಗಳೆಂದರೆ ಸಾಮಾಜಿಕ ಪಿಡುಗುಗಳೆಂದೇ ಪರಿಗಣಿಸಿ ಅವುಗಳ ಪರಿಹಾರದತ್ತ ಸ್ತ್ರೀ ಪುರುಷರಿಬ್ಬರೂ ಸೇರಿ ಶ್ರಮಿಸಬೇಕೆಂಬ ಮನೋಭಾವವಿತ್ತೇ ಹೊರತು ಸಮಸ್ಯೆಗಳು ಸ್ತ್ರೀಯರದೆಂಬ ಒಂದೇ ಕಾರಣಕ್ಕಾಗಿ ಗಮನ ಸೆಳೆದದ್ದಲ್ಲ... ಈ ಮಹಾನ್ ಹೋರಾಟದ ಬಿಸಿ ಸ್ವಾತಂತ್ರ್ಯ ಸಿಕ್ಕಿ, ಸಂವಿಧಾನಾತ್ಮಕವಾಗಿ ನಮಗೆ ಸಮಾನ ಹಕ್ಕುಗಳು ಸಿಕ್ಕಿದ್ದೇ ತಡ ತಣ್ಣಗಾಗಿಬಿಟ್ಟಿತು. ಕ್ರಾಂತಿಕಾರಿ ಮನೋಭೂಮಿ ಬರಡಾಯಿತು'' ('ಭಾರತೀಯ ಮಹಿಳೆಯ ಸ್ವಾತಂತ್ರ್ಯ ಹೋರಾಟ'; ಕಮಲಾದೇವಿ ಚಟ್ಟೋಪಾಧ್ಯಾಯ, ಅನುವಾದ : ವೈದೇಹಿ, ಅಕ್ಷರ ಪ್ರಕಾಶನ, ಸಾಗರ, ೧೯೮೪)

ಈ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಲು ಕಾರಣಗಳಿವೆ. ನಾವಿಲ್ಲಿ ಬಳಕೆ ಮಾಡುತ್ತಿರುವ ಆಧುನಿಕತೆ ಎಂಬ ಶಬ್ದಕ್ಕೆ ಒಂದು ದೊಡ್ಡ ವ್ಯಾಪ್ತಿ ಇದೆ. ಇದನ್ನು ಎಲ್ಲಿಂದ ಆರಂಭಿಸಬೇಕು, ಎಲ್ಲಿಗೆ ನಿಲ್ಲಿಸಬೇಕು ಎಂಬ ಸಂದಿಗ್ಧವಿದೆ. ಸಾಧಾರಣವಾಗಿ, ವಸಾಹತುಶಾಹಿಯೊಂದಿಗೆ ಬಂದ ಆಧುನಿಕತೆಯನ್ನೇ ನಾವು ಈ ಪರಿಭಾಷೆಯಾಗಿ ಬಳಸುತ್ತಿದ್ದೇವೆ. ಸ್ವಾತಂತ್ರ್ಯ ಚಳುವಳಿಯ ಕಾರಣಕ್ಕೆ ಪ್ಯಾನ್ ಇಂಡಿಯನ್ ವೈಶಾಲ್ಯವು ದಕ್ಕಿದ್ದು ಈ ಚಿಂತನೆಗಳು ಏಕರೂಪದಲ್ಲಿ ಪಸರಿಸಲು ಕಾರಣವಾಯಿತು ಮತ್ತು ಇದು ಸ್ತ್ರೀಯರಿಗೆ ಶೂದ್ರ, ದಲಿತರಂತೆ – ಬಿಡುಗಡೆಯ ಸಾಧನವಾಗಿಯೂ ಸಹಕಾರಿಯಾಯಿತು ಎಂಬ ಭಾವವೇ ನಮ್ಮಲ್ಲಿ ಆಳವಾಗಿ ಬೇರೂರಿದೆ. ಈ ನಿಟ್ಟಿನಲ್ಲಿ ಆಧುನಿಕತೆಯು ವರವಾಯಿತು ಎಂದೂ ಭಾವಿಸಲಾಗಿದೆ.

ಕಮಲಾದೇವಿಯವರು ನೀಡುವ ಕೆಲ ವಿವರಗಳು ನಾವು ಆಧುನಿಕತೆಯನ್ನು ಮೊಘಲರ ಆಡಳಿತದಲ್ಲೂ, ವೇದಕಾಲದಲ್ಲೂ ಕಾಣಬಹುದು ಎಂಬೆಡೆಗೆ ಗಮನ ಸೆಳೆಯುತ್ತವೆ. ಮಾತ್ರವಲ್ಲ, ನಮ್ಮದೇ ನೆಲದ ಭಕ್ತಿ ಚಳುವಳಿಗಳೂ ಭಿನ್ನ ಕತೆಯನ್ನು ಹೇಳುತ್ತವೆ. ನಮ್ಮ ಎಷ್ಟೋ ದಲಿತ, ಶೂದ್ರ, ಸ್ತ್ರೀ ವಚನಕಾರರು ವಿದ್ಯಾವಂತರಾಗಿದ್ದರು ಎಂಬುದು ಅವರ ವಚನಗಳಿಂದಲೇ, ದಾಸಪಂಥದ ಕೀರ್ತನಕಾರರಿಂದಲೇ ತಿಳಿದುಬರುತ್ತದೆ. ಹೀಗಾಗಿ, ಆಧುನಿಕತೆಯ ಕೆಲ ಫಲಿತಗಳನ್ನು ಬ್ರಿಟಿಷರಿಗೇ ಕೊಟ್ಟುಬಿಡುವ ಮೊದಲು ನಾವು ಇನ್ನಷ್ಟು ಸೂಕ್ಷ್ಮವಾಗಿ ಈ ಬಗ್ಗೆ ಚಿಂತಿಸಬೇಕಾಗಿದೆ ಅನಿಸುತ್ತದೆ.

ಬ್ರಿಟಿಷ್ ಆಧುನಿಕತೆಯಾದರೂ, ''ಹಳೆಯ ಫ್ಯೂಡಲ್ ವ್ಯವಸ್ಥೆಯನ್ನು ಎದುರಿಸಿ, ಛಿದ್ರಮಾಡಿ ಹುಟ್ಟಿದ ಆಧುನಿಕತೆಯಲ್ಲ. ಅದು ಭಾರತದ ಶ್ರೇಣೀಕರಣಗಳನ್ನು ಮುಂದುವರಿಸಿದ ಮತ್ತು ಪರಿವರ್ತಿಸಿದ ಆಧುನಿಕತೆಯದು'' ('ನಾಡುನುಡಿಯ ರೂಪಕ' ಪ್ರಸಾರಾಂಗ, ಮಂಗಳೂರು ವಿ.ವಿ., ೨೦೦೧, ಪುಟ ೩೫) ಎಂಬ ಶಿವರಾಮ ಪಡಿಕ್ಕಲ್ ಮಾತನ್ನು ನಾನಿಲ್ಲಿ ನೆನಪಿಸಿಕೊಳ್ಳಬಯಸುತ್ತೇನೆ. ಈ ಕಾರಣಕ್ಕಾಗಿಯೇ ಆರಂಭದಲ್ಲಿ ಅತ್ಯಂತ ಆಶಾದಾಯಕವಾಗಿ ಕಂಡ ಆಧುನಿಕತೆಯು ಕಾಲಾಂತರದಲ್ಲಿ ಭಿನ್ನ ಮುಖಗಳನ್ನು ತೋರಿಸಲಾರಂಭಿಸಿತು.

ಕನ್ನಡ ಸಾಹಿತ್ಯವು ಹಲ ವಿಧಗಳಲ್ಲಿ ಈ ಆಧುನಿಕತೆಯೊಂದಿಗೆ ಮುಖಾಮುಖಿಯಾಗಿದೆ. ಮಹಿಳೆಯರ ಬರಹಗಳೂ ಇದಕ್ಕೆ ಹೊರತಲ್ಲ. ಆಧುನಿಕತೆ ಮತ್ತು ಮಹಿಳಾಪರ ಚಿಂತನೆಗಳು ಎಂಬ ಈ ವಿಷಯವೂ ಕೂಡ, ಅಪಾರ ವ್ಯಾಪ್ತಿಯುಳ್ಳದ್ದಾಗಿರುವುದರಿಂದ ಇದನ್ನು ನಾನು ಮಹಿಳೆಯರಿಂದ ರಚಿತವಾದ ಕೆಲವು ಕೃತಿಗಳ ಮೂಲಕ ವಿವರಿಸಲು ಪ್ರಯತ್ನಿಸುತ್ತೇನೆ. ಮಹಿಳಾಪರ ಚಿಂತನೆಗಳು ಎಂದಾಗ, ಅದು ಮಹಿಳೆಯರ ಕುರಿತಾದ ಪುರುಷರ ಚಿಂತನೆಗಳೂ ಆಗಬಹುದು. ಆದರೆ, ಇಲ್ಲಿ ಸ್ತ್ರೀಯರು ಆಧುನಿಕತೆಗೆ ಹೇಗೆ ಪ್ರತಿಕ್ರಿಯಿಸಿದರು ಎಂಬುದಕ್ಕಷ್ಟೇ ಸೀಮಿತಗೊಳಿಸಿಕೊಳ್ಳುತ್ತಿದ್ದೇನೆ. ಹಾಗೆ ನೋಡಹೋದರೆ, ಈ ಶೀರ್ಷಿಕೆಯು ಆಧುನಿಕತೆಯು ಮಹಿಳಾಪರ ಚಿಂತನೆಗೆ ಪೂರಕವಾಗಿದೆಯೇನೋ ಎಂಬ ಗುಮಾನಿಯನ್ನು ಹುಟ್ಟಿಸುತ್ತದೆ. ಆಧುನಿಕತೆ ಮತ್ತು ಪುರುಷಪರ ಚಿಂತನೆಗಳು ಎಂದು ಯೋಚಿಸುವುದಕ್ಕೂ ಸಾಧ್ಯವಾಗದಿರುವುದು ಕೂಡ  ಆಧುನಿಕತೆಯು ದಮನಿತ ದನಿಗಳ ಪ್ರತಿನಿಧಿ ಎಂಬಂತೆ ಪ್ರತಿಬಿಂಬಿತವಾಗಿರುವುದನ್ನೇ ಸೂಚಿಸುತ್ತದೆ.

*     *     *

ಮಹಿಳಾ ಚಿಂತನೆಯು ಆಧುನಿಕತೆಗೆ ಪ್ರತಿಕ್ರಿಯಿಸುವಲ್ಲಿ ಮೂರು ಹಂತದ ಬೆಳವಣಿಗೆಗಳನ್ನು ಗಮನಿಸಬಹುದು. ಇದನ್ನು ಮುಗ್ಧ ನಂಬಿಕೆಯ ಹಂತ, ನಂಬಿಕೆಯ ಭಂಜನೆಯ ಹಂತ ಹಾಗೂ ಆಧುನಿಕತೆಯೆಡೆಗೆ ಅನುಮಾನದ ಹಂತ ಎಂದು ವಿಭಜಿಸಿಕೊಳ್ಳಬಹುದು. ಮೊದಲ ಹಂತದಲ್ಲಿ ಸುಧಾರಣಾವಾದದ ದಾರಿಯಲ್ಲಿ ನಂಬಿಕೆ ಇಟ್ಟ ಲೇಖಕಿಯರು, ತಮ್ಮೆಲ್ಲಾ ಸಮಸ್ಯೆಗಳು ಸ್ತ್ರೀಯರಿಗೆ ಆಧುನಿಕ ಶಿಕ್ಷಣ ದೊರೆಯುತ್ತಿದ್ದಂತೆ ಮಾಯವಾಗಿಬಿಡುತ್ತವೆ ಎಂದು ಭಾವಿಸಿದ್ದರು. ಮೊದಲ ತಲೆಮಾರಿನ ಅನೇಕ ಲೇಖಕಿಯರ ಬರಹಗಳಲ್ಲಿ ಇದನ್ನು ಕಾಣಬಹುದು. ಕೊಡಗಿನ ಗೌರಮ್ಮ ತನ್ನ 'ಪುನರ್ವಿವಾಹ' ಎಂಬ ಕತೆಯಲ್ಲಿ ವಿಧುರ - ವಿಧವೆಯನ್ನು ಮುಖಾಮುಖಿಯಾಗಿಸಿ, ಹೆಣ್ಣನ್ನು  ನಡೆಸಿಕೊಳ್ಳುವ ಕ್ರಮವನ್ನು ಖಂಡಿಸುವ ದಿಟ್ಟ ವಿಧವೆಯನ್ನೂ, ಅತ್ಯಾಧುನಿಕವಾಗಿ ಚಿಂತಿಸಬಲ್ಲ ಅವಳ ದೃಢತೆಯನ್ನೂ ಚಿತ್ರಿಸುತ್ತಾರೆ. ಹೆಂಗಸರಿಗೆ ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ ಸಿಕ್ಕಲ್ಲಿ ಅವರಲ್ಲಾಗುವ ಬದಲಾವಣೆಗಳನ್ನು ಇತ್ಯಾತ್ಮಕವಾಗಿ ನೋಡುತ್ತಾರೆ. ಆಧುನಿಕ ಸಂಸ್ಥೆಗಳು ಹೆಣ್ಣಿನ ಪರವಾದವುಗಳು ಎಂಬ ಅದಮ್ಯ ನಂಬಿಕೆಯು ಇವರಲ್ಲಿ ಹೊಸ ಉತ್ಸಾಹವನ್ನು ಹುಟ್ಟಿಸುವುದು ಸಾಧ್ಯವಿತ್ತು. ಹಾಗೆಯೇ ಪುರಾಣ ಪ್ರತೀಕಗಳನ್ನು ಭಂಜಿಸುವ ಮಾದರಿಯು ಕನ್ನಡ ಲೇಖಕಿಯರಲ್ಲಿ ಎದ್ದುಕಾಣುತ್ತದೆ. ಎಚ್. ವಿ. ಸಾವಿತ್ರಮ್ಮನವರ ಸೀತೆ-ರಾಮ-ರಾವಣ, ಅನುಪಮಾರ ಮಾಧವಿ ಇತ್ಯಾದಿ ಕೃತಿಗಳ ಮೂಲಕ ಹೀಗೊಂದು ಪರಂಪರೆಯೇ ಸೃಷ್ಟಿಯಾಯಿತು. ಇವು ಹೆಣ್ಣನ್ನು ಭಿನ್ನ ನೆಲೆಯಲ್ಲಿ ನೋಡುವಂತೆ ಒತ್ತಾಯಿಸುವ ಪ್ರಯತ್ನಗಳಾಗಿವೆ. ಮೌಲ್ಯಗಳ ಸ್ಥಾಪನೆಯಲ್ಲಿ ಮತ್ತು ಅವುಗಳು ಜಡ್ಡುಗಟ್ಟುವಲ್ಲಿ ಸಾಹಿತ್ಯದ ರಾಜಕಾರಣ ಕೆಲಸಮಾಡುತ್ತಿರುತ್ತದೆ. ಆದರ್ಶಸ್ತ್ರೀ ಕಲ್ಪನೆಯೆನ್ನುವುದು ಕೃತಕ ನಿರ್ಮಾಣವಾಗಿದ್ದು, ಬಹುಸಂಖ್ಯಾತ ಹೆಂಗಸರ

ವಾಸ್ತವ ಚಿತ್ರಣವನ್ನು ಮೂಲೆಗುಂಪು ಮಾಡಿ, ನಿರಂತರವಾಗಿ ಮುನ್ನೆಲೆಗೆ ತಂದು ಹೇರಿದ ಸಾವಿತ್ರಿ ಮಾದರಿ, ಸೀತೆ ಮಾದರಿ (ಮನೆಮನೆಯ ತಪಸ್ವಿನಿಯರು?) ಇತ್ಯಾದಿ ಅನೇಕ ಮಾದರಿಗಳನ್ನು ಗಟ್ಟಿಗೊಳಿಸುವಲ್ಲಿ ಸಾಹಿತ್ಯದ ಪಾತ್ರ ಗಣನೀಯವಾದದ್ದು ಮತ್ತು ಇದೇ ಮಾದರಿಗಳು ದೃಶ್ಯ ಮಾಧ್ಯಮಗಳಿಗೂ ರವಾನೆಯಾಗಿ ಇನ್ನಷ್ಟು ಗಟ್ಟಿಗೊಳ್ಳುತ್ತಿವೆ. ಹೀಗಾಗಿ ಇಂದಿಗೂ ಕೂಡ ಈ ಪುರಾಣ ಪ್ರತೀಕಗಳ ಭಂಜನೆ ನಡೆಯುತ್ತಲೇ ಇದ್ದು, ಈ ರೀತಿಯ ಚಿಂತನೆಗಳೂ ಕೂಡ ಆಧುನಿಕತೆಯಲ್ಲಿ ನಂಬಿಕೆಯನ್ನು ಕಳೆದುಕೊಂಡಿಲ್ಲ.

ಆದರೆ, ಕ್ರಮೇಣ ಶಿಕ್ಷಣ, ಉದ್ಯೋಗ ಎಲ್ಲವೂ ಸಾಧಿತವಾದ ನಂತರದ ಅನುಭವದ ಮೂಲಕ, ಈ ನಂಬಿಕೆಗಳೂ ಭಂಜನೆಯ ಹಂತವನ್ನು ತಲುಪತೊಡಗಿದವು. ವೀಣಾ ಶಾಂತೇಶ್ವರರ 'ಅವಳ ಸ್ವಾತಂತ್ರ್ಯ ಮತ್ತು ಬಿಡುಗಡೆ ಕತೆಗಳು' ಆಧುನಿಕತೆ ಹೆಣ್ಣಿಗೆ ನಿಜವಾಗಿಯೂ ಬಿಡುಗಡೆ ನೀಡಿತೇ ಎಂಬ ಪ್ರಶ್ನೆಯನ್ನು ಮುಂದಕ್ಕೆ ತರುತ್ತದೆ. ಇಲ್ಲಿ ನಿರೀಕ್ಷಿತ ಬದಲಾವಣೆಗಳು ಕಾಣದೇ ಹೋದ ವಿಷಾದ ಮತ್ತು ಆಧುನಿಕತೆಯನ್ನು ಅನಾವರಣ ಮಾಡುವ ಪ್ರಕ್ರಿಯೆಗೆ ಚಾಲನೆ ದೊರೆತರೆ, ನಂತರದ ಹಂತದಲ್ಲಿ, ಆಧುನಿಕತೆಯನ್ನೇ ಅನುಮಾನದ ದೃಷ್ಟಿಯಿಂದ ನೋಡುವ ಚಿಕಿತ್ಸಕ ನೋಟವೊಂದು ಮಹಿಳೆಯ ಚಿಂತನೆಯಲ್ಲಿ ಕಾಣುತ್ತದೆ. ಆಧುನಿಕತೆ ನೀಡಿದ್ದ ವಿರಾಟ್ ಅಥವಾ ಬೃಹತ್ ಕ್ಯಾನ್‌ವಾಸ್‌ಅನ್ನು ಸರಿಸಿ, ಹೆಣ್ಣಿನ ದೃಷ್ಟಿಯಿಂದ ನೋಡುವ, ಆಧುನಿಕತೆಯೂ ಹೇಗೆ ಪುರುಷ ದೃಷ್ಟಿಕೋನವನ್ನೇ ಹೇರುತ್ತದೆ ಎಂಬುದನ್ನು ಅರ್ಥೈಸಿಕೊಳ್ಳುವ ಪ್ರಯತ್ನವಾಗಿಯೂ ಇದನ್ನು ಕಾಣಬಹುದು. ಅದು ಶಕುಂತಲೆ, ಅಕ್ಕ, ಅಮೃತಮತಿಯರನ್ನು ಹೊಸ ನೆಲೆಯಲ್ಲಿ ನೋಡುವುದೂ ಆಗಿರಬಹುದು ಅಥವಾ ಎಚ್. ನಾಗವೇಣಿಯಂತೆ, ರಾಷ್ಟ್ರೀಯ ಹೋರಾಟದ ಸಂದರ್ಭದಲ್ಲಿ ಗಾಂಧಿಗೆ ಒಡವೆ ನೀಡುವಾಗ ಒಡವೆಯ ಒಡತಿಯನ್ನೇ ನಿರ್ಲಕ್ಷಿಸಲಾಯಿತು ಎಂಬೆಡೆಗೆ ಗಮನ ಸೆಳೆಯುವುದೇ ಆಗಿರಬಹುದು ಅಥವಾ ಯಾವ ಆಧುನಿಕ ಶಿಕ್ಷಣ ಏಕರೂಪದ ಆಧುನಿಕ ಮಹಿಳೆಯನ್ನು ಚಿತ್ರಿಸಲು ತೊಡಗಿದೆಯೋ ಅದನ್ನು ಬಿಟ್ಟು ಸ್ತ್ರೀಯರು ತಾವೇ ಕಟ್ಟಿಕೊಂಡ ಸಹಜವಾದ, ಸಾಮಾನ್ಯವಾದ ಸ್ತ್ರೀಲೋಕವನ್ನು ಅದು ಇದ್ದಂತೆಯೇ ಸ್ವೀಕರಿಸಲು ಒತ್ತಾಯಿಸುವ ಸವಿತಾ ನಾಗಭೂಷಣರ ಕಾದಂಬರಿ ಇರಬಹುದು ಅಥವಾ ಆಧುನಿಕ ಶಿಕ್ಷಣ ಪಡೆದ, ನಗರವಾಸಿಯಾದ, ಉದ್ಯೋಗಸ್ಥೆಯಾದ ಹುಡುಗಿಯೊಬ್ಬಳು ದಿನದಿನದ ಬಿಕ್ಕಟ್ಟನ್ನು ಎದುರಿಸಲಾಗದೆ ಟೊಳ್ಳಾಗುವುದನ್ನು, ಆಂತರಿಕ ತಳಮಳಕ್ಕೆ ಒಳಗಾಗುವ ನವಯುವತಿಯರ ತಲ್ಲಣಗಳನ್ನು, ನವಕಾಲದ ಹಿಂಸೆಯ ಸೂಕ್ಷ್ಮಗಳನ್ನು 'ಸೌಗಂಧಿಯ ಸ್ವಗತ', 'ಪುಟ್ಟಮ್ಮತ್ತೆ ಮತ್ತು ಮಗಳು', 'ಅಮ್ಮಚ್ಚಿಯ ನೆನಪುಗಳು' ಮೊದಲಾದ ವೈದೇಹಿಯವರ ಕತೆಗಳಲ್ಲೂ ನಾವಿದನ್ನು ಕಾಣಬಹುದು. ಈ ಕತೆಗಳಿಗಿಂತ ವಿಭಿನ್ನ ನೆಲೆ, ವಿಭಿನ್ನ ಅನುಭವಗಳನ್ನು ಹೇಳುವ ಗೀತಾ ನಾಗಭೂಷಣ ಮತ್ತು ಬಿ. ಟಿ. ಲಲಿತಾ ನಾಯಕ್‌ರ ಕತೆಗಳಲ್ಲಿ ಆಧುನಿಕತೆಯ ಕುರಿತು ನೇರವಾದ ಜಿಜ್ಞಾಸೆ ಇಲ್ಲವಾದರೂ ಆಧುನಿಕತೆಯು ನಿಜವಾದ ಅರ್ಥದಲ್ಲಿ ಅಸ್ತಿತ್ವದಲ್ಲಿ ಬಂದರೆ ಅದು ವರವಾದೀತು ಎಂಬ ಆಶಾವಾದವೊಂದು ಸಣ್ಣ ಎಳೆಯ ರೂಪದಲ್ಲಿ ಕಾಣುತ್ತದೆ. ತಮ್ಮ 'ಗತಿ' ಕಿರು ಕಾದಂಬರಿಯಲ್ಲಿ ಈ ಬಗ್ಗೆಯೂ ಒಂದು ಅನುಮಾನ ಲಲಿತಾ ನಾಯಕರನ್ನು ಕಾಡಿದಂತಿದೆ. ಆಧುನಿಕತೆಯು ಉತ್ತರವಾದೀತು ಎಂಬ ಆಶಾವಾದ ಸಾರಾ ಅಬೂಬಕ್ಕರ್ ಅವರ 'ಚಂದ್ರಗಿರಿ ತೀರದಲ್ಲಿ' ಅಂತಸ್ಥವಾಗಿದೆ. ಆದರೆ ಆಧುನಿಕತೆಯ ತಣ್ಣನೆಯ ಕ್ರೌರ್ಯ, ಆಧುನಿಕತೆಯು ಹುಟ್ಟಿಸಿರುವ ಅಸಹಾಯಕತೆಯ ಹೊಸ ರೂಪದ ಬಗೆಗೆ ವಿಷಾದ, ಬಾನು ಮುಷ್ತಾಕರ 'ಲವ್ ಬರ್ಡ್ಸ್' ಕತೆಯಲ್ಲಿ ಕಾಣಿಸುತ್ತದೆ. ದು. ಸರಸ್ವತಿಯವರ ಅನುಭವ ಕಥನ 'ಈಗೇನ್ ಮಾಡೀರಿ?'ಯನ್ನೂ ಈ ಹಿನ್ನೆಲೆಯಲ್ಲಿ ಪರಿಶೀಲಿಸುವುದಕ್ಕೆ ಅವಕಾಶವಿದೆ.

ಇಂತಹ ಒಂದು ಚಲನೆ ಯಾಕೆ ಕಾಣಿಸುತ್ತಿದೆ? ಆಧುನಿಕತೆ ಯಾಕೆ ಪೂರ್ತಿಯಾಗಿ ಮನುಷ್ಯಪರವಾಗಲು ಸಾಧ್ಯವಾಗಲಿಲ್ಲ? ಎಂಬ ಪ್ರಶ್ನೆ ಇದ್ದೇ ಇದೆ. ಯಾವುದೇ ಆಗಿರಲಿ ಅದರ ನಿಯಂತ್ರಣ ಯಾರ ಕೈಯಲ್ಲಿರುತ್ತದೆ ಎಂಬುದರ ಮೇಲೆ ಅದರ ಫಲಿತವಿರುತ್ತದೆ. ಆಧುನಿಕತೆ ಎಂಬುದು ಮಾರುಕಟ್ಟೆಯ ನಿಯಂತ್ರಣದಲ್ಲಿದ್ದಾಗ ಅದು ಆಧುನಿಕತೆಯನ್ನು ವ್ಯಾಖ್ಯಾನಿಸುವುದು ತನ್ನ ಮೂಗಿನ ನೇರಕ್ಕೇ – ಶಿಕ್ಷಣ, ಉದ್ಯೋಗ, ವಿವಾಹ, ಕುಟುಂಬ, ಆರೋಗ್ಯ, ಸಾಮಾಜಿಕ ನ್ಯಾಯ ಎಲ್ಲವೂ – ಮತ್ತು ಸರ್ಕಾರವೂ ಮಾರುಕಟ್ಟೆಯ ಕೈಯೊಳಗಿರುವಾಗ, ಅದು ಮಹಿಳಾಪರವೋ, ಮನುಷ್ಯಪರವೋ ಆಗಬೇಕೆಂಬುದು ನಿರಂತರ ಹೋರಾಟದ ವಿಷಯವಾಗುತ್ತದೆ. ಹೀಗಾಗಿಯೇ ಪರಂಪರೆಯ ಚೌಕಟ್ಟನ್ನು ಭೇದಿಸುವಾಗಲೇ ದೂರದರ್ಶನದಲ್ಲಿ ಬರುವ ಧಾರಾವಾಹಿಗಳಲ್ಲಿ ''ಪರಿಪೂರ್ಣ ಮದುಮಗಳು'' ಪ್ರತ್ಯಕ್ಷವಾಗುತ್ತಾಳೆ (ಹತ್ತು ಜನ ವಿವಾಹ ಆಕಾಂಕ್ಷಿ ಹುಡುಗಿಯರನ್ನು ಐದು ಮಂದಿ ಹುಡುಗರು ಅಳೆದು ಮದುವೆಯಾಗಲು ನಿರ್ಧರಿಸುವ ರಿಯಾಲಿಟಿ ಶೋ ಒಂದರ ಹೆಸರು 'ಪರ್ಫೆಕ್ಟ್ ಬ್ರೈಡ್'.) ಹೆಣ್ಣುಮಕ್ಕಳು ಯಾವ ರೀತಿಯ ಉಡುಗೆ ತೊಡಬೇಕೆಂಬುದನ್ನು ನಿರ್ಧರಿಸುವವರೂ ಮಾರುಕಟ್ಟೆ ಪರಿಣತರೇ ಆಗಿದ್ದಾರೆ. ಪ್ರಬಲ ಮಾಧ್ಯಮಗಳು ಹೆಣ್ಣಿನ ದೇಹವನ್ನು ಮಾರುಕಟ್ಟೆಯ ಸಾಧನವನ್ನಾಗಿ ಸ್ಥಾಪಿಸುತ್ತ ಅದನ್ನು ಹೆಣ್ಣುಮಕ್ಕಳೂ ಒಪ್ಪಿಕೊಳ್ಳುವಂತೆ, ನಂಬುವಂತೆ ಮಾಡಲು ಯಶಸ್ಸು ಪಡೆಯತೊಡಗಿದ್ದಾರೆ. ಆಧುನಿಕತೆ ಹೊಸ ವಿಕೃತಿಗಳೆಡೆಗೆ ಪಯಣ ಆರಂಭಿಸಿದೆ.

ಆಧುನಿಕತೆಯು ಚಾಲ್ತಿಗೆ ಬರಲು ವೇದಿಕೆಯನ್ನು ಒದಗಿಸುವ ಅಭಿವೃದ್ಧಿ ಕಲ್ಪನೆಯು ವಾಸ್ತವದಲ್ಲಿ ಯಾವ ರೂಪ ಧರಿಸಿದೆ ಎಂಬುದೂ ಬಹಳ ಮುಖ್ಯ. ನಮ್ಮ ಎಲ್ಲಾ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಮಹಿಳೆಯರನ್ನು ಕೇವಲ ಫಲಗಳನ್ನು ಸ್ವೀಕರಿಸುವ ಗ್ರಾಹಕರೆಂದು ಪರಿಭಾವಿಸಿಕೊಂಡು ಬರಲಾಗಿದೆ ಎಂಬ ಅಮರ್ತ್ಯಸೇನ್ ಅವರ ಮಾತು ಆಧುನಿಕತೆಯ ವೈಫಲ್ಯದ ಕಾರಣವನ್ನು ಶೋಧಿಸಲು ಸಹಕಾರಿ ಎನಿಸುತ್ತದೆ. ಅವರೇ ಹೇಳುವಂತೆ, ''ಅಭಿವೃದ್ಧಿಯು ತನ್ನಷ್ಟಕ್ಕೆ ತಾನು ಲಿಂಗ ಸಮಾನತೆಯನ್ನು ತಂದುಕೊಡುತ್ತದೆ ಎಂಬ ನಂಬಿಕೆಯು ಇಂದು ಹುಸಿಯಾಗಿಬಿಟ್ಟಿದೆ'' ('ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು', ಟಿ. ಆರ್. ಚಂದ್ರಶೇಖರ, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೮, ಪುಟ ೩೯).

ತನ್ನ ಗುಣಲಕ್ಷಣಗಳನ್ನು ತಾನೇ ನಿರ್ಣಯಿಸಿಕೊಳ್ಳಲಾರದ ಸನ್ನಿವೇಶದಲ್ಲಿ ಮತ್ತು ಸಂಕಟದಲ್ಲಿ ಆಧುನಿಕ ಮಹಿಳೆ ಇದ್ದಾಳೆ. ಕೂಡುಕುಟುಂಬದ ಚಾಕರಿಯಲ್ಲಿ ಕಳೆದುಹೋಗಿದ್ದ ಮಹಿಳೆ, ನಗರದ ಕಚೇರಿಯ ಗದ್ದಲದ ನಡುವೆಯೂ ಒಂಟಿಯಾಗಿದ್ದಾಳೆ. 'ದುಡಿಯುವ ಮಹಿಳೆ' ಎಂಬ ನಾಮಕರಣದಿಂದ ಅವಳ ಚಹರೆಗಳೇನೂ ಗಮನಾರ್ಹವಾಗಿ ಬದಲಾಗಿಲ್ಲ. ಅವಳ ಮೇಲಿನ ಯಜಮಾನಿಕೆಯ ಸ್ವರೂಪ ಮಾತ್ರ ಬದಲಾಗಿದೆ, ಅಷ್ಟೆ. ಈ ಎಲ್ಲಾ ಸ್ತರಗಳನ್ನು ಕನ್ನಡದ ಲೇಖಕಿ ಗಮನಿಸಿದ್ದಾಳೆ ಎಂಬುದು ಗಮನಾರ್ಹ.

*(ಸುಳ್ಯದ ನೆಹರೂ ಮೆಮೋರಿಯಲ್ ಕಾಲೇಜಿನಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ)*

**ಡಾ|| ಸಬಿತಾ ಬನ್ನಾಡಿ**
ಸ್ನಾತಕೋತ್ತರ ಕನ್ನಡ ಅಧ್ಯಯನ ವಿಭಾಗ, ಸರ್ ಎಂ. ವಿ. ಸರ್ಕಾರಿ
ಕಲಾ/ವಾಣಿಜ್ಯ ಕಾಲೇಜು, ಭದ್ರಾವತಿ - ೫೭೭ ೩೦೧

# ಪ್ರಚಲಿತ ಶಿಕ್ಷಣ : ಗ್ರಹಿಕೆಯ ದೋಷಗಳು

ವಿಷ್ಣು ನಾಯ್ಕ

'**ನೌ**ಕರಿಗಾಗಿ ಓದು' ಎಂಬ ಪರಿಕಲ್ಪನಾತ್ಮಕ ದೋಷವೇ ಇಂದಿನ ನಮ್ಮ ಶಿಕ್ಷಣ ರಂಗದ ಉಳಿದೆಲ್ಲ ಸಮಸ್ಯೆಗಳ ಮೂಲ ಎಂಬುದು ನನ್ನ ನಿಲುವು. ಈ ಪರಿಕಲ್ಪನೆ ಮುಖ್ಯವಾಗಿ ನಮ್ಮ ವಿದ್ಯಾರ್ಥಿ - ಪಾಲಕರಲ್ಲೇ ಹೆಚ್ಚಾಗಿದೆ. ಅದು ಅನೇಕ ಅಡ್ಡಪರಿಣಾಮಗಳಿಗೂ ಕಾರಣವಾಗಿದೆ. ತನ್ನ ಮಗುವಿಗೆ ಪಾಠ ಹೇಳಿಕೊಡಬೇಕೆಂದು ಆಯ್ಕೆ ಮಾಡುವ ಶಾಲೆಯಿಂದ ಹಿಡಿದು, ತನ್ನ ಮಗು ಯಾವ ಮಾಧ್ಯಮದಲ್ಲಿ ಓದಬೇಕೆಂಬುದನ್ನು ನಿರ್ಧರಿಸುವ ವಿಚಾರ ಹಿಡಿದು, ತನ್ನ ಮಗು ದಿನದ ಎಷ್ಟು ಕಾಲ ಅಭ್ಯಾಸ ಮಾಡಬೇಕು, ಎಷ್ಟು ಅವಧಿ ನಿದ್ದೆ ಮಾಡಬೇಕು, ಎಷ್ಟು ಗಂಟೆ ಟ್ಯೂಷನ್ ಪಡೆಯಬೇಕು ಎಂಬೆಲ್ಲಾ ನಿರ್ಧಾರಗಳನ್ನು ತಾಯ್ತಂದೆಯರೇ ತೆಗೆದುಕೊಳ್ಳುವಂತಾದುದು ಕೂಡ, **ಶಿಕ್ಷಣ ಇರುವುದು ನೌಕರಿಗಾಗಿ** ಎಂಬ ತಪ್ಪು ಗ್ರಹಿಕೆಯ ಪರಿಣಾಮವೇ ಆಗಿದೆ.

೧೪ ವರ್ಷಗಳವರೆಗೆ ಉಚಿತ ಶಿಕ್ಷಣ ಪಡೆಯುವುದು ಮಗುವಿನ ಮೂಲಭೂತ ಹಕ್ಕುಗಳಲ್ಲಿ ಒಂದು ಎಂಬ ತೀರ್ಮಾನವನ್ನು ಇಂದು ಕೇಂದ್ರ ಸರಕಾರ ಕೈಗೊಂಡಿರುವುದು ಈ ದೇಶದ ಎಲ್ಲ ಮಕ್ಕಳು ಕ್ಲುಪ್ತ ಸಮಯದಲ್ಲಿ ಶಿಕ್ಷಣ ಪಡೆಯಲಿ ಎಂಬ ಉದ್ದೇಶದಿಂದ. ಅದು ಸರಿಯೇ. ಶಿಕ್ಷಣ ಪಡೆದವರಿಗೆಲ್ಲ ಉದ್ಯೋಗ ಕೊಡಲಾಗುವುದು ಎಂದು ಹೇಳುವ ಛಾತಿ ಇಂದು ಭಾರತ ಮಾತ್ರವಲ್ಲ



ಜಗತ್ತಿನ ಯಾವ ದೇಶಕ್ಕೂ ಇಲ್ಲ. ವಸ್ತುಸ್ಥಿತಿ ಹೀಗಿರುವಾಗ ಹಾಲಹಲ್ಲಿನ ನಮ್ಮ ಎಳೆಯ ಮಕ್ಕಳಿಗೆ ನೌಕರಿಯ ಹುಚ್ಚನ್ನು ತಲೆಯಲ್ಲಿ ತುಂಬಿದವರು ಯಾರು, ಯಾಕೆ, ಅದರ ಅಡ್ಡಪರಿಣಾಮ ಕಾಲಕ್ರಮೇಣ ಯಾವ ಹಂತ ತಲುಪಲಿದೆ ? ಎಂಬಂತಹ ಸಮಸ್ಯೆಗಳ ಬಗ್ಗೆ ನಮ್ಮ ಪಾಲಕವರ್ಗ ಗಂಭೀರವಾಗಿ ಯೋಚಿಸಬೇಕಿದೆ.

ಇಂದು ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಯಾವುದಿರಬೇಕು ಎಂಬ ಚರ್ಚೆ ಮತ್ತು ಜಗಳವನ್ನು ಈ ದೇಶದ ಎಲ್ಲ ಭಾಗಗಳಲ್ಲೂ ಕಾಣುತ್ತಿದ್ದೇವೆ, ಕೇಳುತ್ತಿದ್ದೇವೆ. 'ಶಿಕ್ಷಣ ಇರುವುದು ನೌಕರಿಗಾಗಿ' ಎಂಬ ಹುಸಿ ಕಲ್ಪನೆಯೇ ಈ ಭಾಷಾ ಮಾಧ್ಯಮದ ಜಗಳಗಳಿಗೂ ಕಾರಣವಾಗಿದೆ ಎಂಬ ವಿಚಾರ ಬುದ್ಧಿವಂತರೆಂದುಕೊಂಡ ಅದೆಷ್ಟೋ ಜನಕ್ಕೆ ಹೊಳೆಯದೇ ಹೋಗಿರುವುದು ಕೂಡ ನೋವಿನ ಸಂಗತಿ.

ಇತ್ತೀಚಿನ ದಶಕಗಳಲ್ಲಂತೂ ನಮ್ಮ ಪಾಲಕ ವರ್ಗ ಒಂದು ರೀತಿಯ ಸಮೂಹ ಸನ್ನಿಗೆ ಒಳಗಾಗಿದೆಯೆಂದರೆ ಯಾರೂ ತಪ್ಪು ಭಾವಿಸಬೇಕಾಗಿಲ್ಲ. ತನ್ನ ಮಗ ವಿದೇಶಕ್ಕೆ ಹೋಗಬೇಕು (ಮಗಳು ಹೋಗಲೇಬೇಕೆಂದೇನೂ ಇಲ್ಲ!), ಆ ಕಾರಣಕ್ಕಾಗಿ ಆತ ಇಂಜಿನಿಯರಿಂಗ್ ಓದಬೇಕು, ಮೆಡಿಕಲ್ ಓದಬೇಕು. ಕನಿಷ್ಠ ಪಕ್ಷ ಸಂದರ್ಭ ಬಂದರೆ ಒಂದು ಕಂಪೆನಿಯನ್ನು ನಿಯಂತ್ರಿಸಬಹುದಾದ ಚಾರ್ಟರ್ಡ್ ಅಕೌಂಟೆಂಟ್ ಆಗಬೇಕು - ಈ ಎಲ್ಲ ಕಾರಣಗಳಿಗಾಗಿ ಆತ ಇಂಗ್ಲಿಷ್ ಮಾಧ್ಯಮದಲ್ಲಿ ಓದಬೇಕು. ಇದು ಇಂದಿನ ಸಮೂಹ ಸನ್ನಿ. ಇದರಿಂದ ವಿದ್ಯಾರ್ಥಿ ಹಂತದಲ್ಲಿ ನಮ್ಮ ಮಕ್ಕಳು ಅನುಭವಿಸುವ ಲೋಕಜ್ಞಾನದ ನಷ್ಟ ಎಷ್ಟು ಎಂಬುದರ ಪರಿಜ್ಞಾನ ಸಮೂಹ ಸನ್ನಿಗೆ ಒಳಗಾದ ಈ ಪಾಲಕ ವರ್ಗಕ್ಕೆ ಇಲ್ಲವೇ ಇಲ್ಲ.

ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿ ಮೂರು ವರ್ಷ ತುಂಬಿದ ಮಗುವನ್ನು ಶಾಲೆಗೆ ಒಯ್ದುಬಿಡುವುದಕ್ಕೆ ಅವಕಾಶವಿದೆ. ಈ ಮೂರರಿಂದ ಐದು ವರ್ಷಗಳ ವಯೋಮಾನದಲ್ಲಿ ತಾನು ಯಾವ ಶಾಲೆಯನ್ನು ಆಯ್ಕೆಮಾಡಿಕೊಳ್ಳಬೇಕು, ಓದಿಗಾಗಿ ಯಾವ ಮಾಧ್ಯಮವನ್ನು ಆಯ್ಕೆಮಾಡಿಕೊಳ್ಳಬೇಕು, ಎಂಬಂಥ ತೀರ್ಮಾನಗಳನ್ನು ತೆಗೆದುಕೊಳ್ಳಲು ಆ ಮಗುವಿಗಂತೂ ಖಂಡಿತಾ ಸಾಧ್ಯವಿಲ್ಲ. ಹಾಗಾದರೆ ಮಗುವಿನ ಮೂಲಭೂತ ಹಕ್ಕಾದ ಶಿಕ್ಷಣದ ಧ್ಯೇಯ-ಧೋರಣೆಗಳನ್ನು ಆರಂಭದ ವರ್ಷಗಳಲ್ಲಿ ಚಲಾಯಿಸುವವರು ತಾಯ್ತಂದೆಯರು ತಾನೆ ? ತಾಯ್ತಂದೆಯರು ಆ ಹಂತದಲ್ಲಿ ದುಡುಕಿ ತೆಗೆದುಕೊಳ್ಳುವ ತೀರ್ಮಾನದಿಂದ ಮಗುವು 'ನಾಳೆ' ಅನುಭವಿಸುವ ನಷ್ಟಕ್ಕೆ ಯಾರು ಹೊಣೆ ?

ಕನ್ನಡದ ದಾರ್ಶನಿಕ ಕವಿಗಳಲ್ಲೊಬ್ಬರಾದ ಡಿವಿಜಿ ಹೀಗೆ ಹೇಳುತ್ತಾರೆ : ''ನಮ್ಮ ಮಕ್ಕಳಿಗೆ ನಾವು (ಆಂಗ್ಲ ಮಾಧ್ಯಮದ ಮೋಹಕ್ಕೊಳಗಾಗಿ) ಕೊಬರಿಯ ಬದಲು ಕರಟವನ್ನು ಜಗಿಯಲು ಹಚ್ಚಿದ್ದೇವೆ. ಜ್ಞಾನಕ್ಕಿಂತ ಜ್ಞಾನದ ಹೊದಿಕೆಗೆ ಮಹತ್ವ ಕೊಟ್ಟಿದ್ದೇವೆ''. ಪ್ರಪಂಚದಾದ್ಯಂತ ಇರುವ ಶಿಕ್ಷಣ ತಜ್ಞರು, ಮನೋವಿಜ್ಞಾನಿಗಳು, ಮಾನವಶಾಸ್ತ್ರಜ್ಞರು, ಕನಿಷ್ಠ ಪಕ್ಷ ಹನ್ನೊಂದು ವರ್ಷದವರೆಗೆ ಮಗು ಶಿಕ್ಷಣವನ್ನು ತನ್ನ ತಾಯ್ನುಡಿಯ ಭಾಷೆಯಲ್ಲಿ, ಆ ಭಾಷೆಗೆ ಲಿಪಿ ಇಲ್ಲದಿದ್ದಾಗ, ರಾಜ್ಯ ಭಾಷೆಯಲ್ಲಿ ಕಲಿಯಬೇಕು ಎಂಬ ಮಾತನ್ನು ಹೇಳುತ್ತ ಬಂದಿದ್ದಾರೆ. ಇದರ ಅರ್ಥವೇನು ? ಆರಂಭದ ಕನಿಷ್ಠ ಐದು ವರ್ಷಗಳಾದರೂ ಮಾತೃಭಾಷೆ ಇಲ್ಲವೆ ರಾಜ್ಯಭಾಷೆಯು ಕಡ್ಡಾಯವಾಗಿ, ಕೂಲಿಯ ಮಗನಿಂದ ಹಿಡಿದು ಮಂತ್ರಿಯ ಮಗನವರೆಗೆ, ಮಾಧ್ಯಮವಾಗಿರಬೇಕೆಂಬುದು ತಾನೆ ? ಆದರೆ ವಾಸ್ತವದಲ್ಲಿ ಈ ಬದ್ಧತೆ ಪಾಲಕ ವರ್ಗಕ್ಕಾಗಲೀ, ಆಡಳಿತ ವರ್ಗಕ್ಕಾಗಲೀ, ಶಿಕ್ಷಣ ಸಂಸ್ಥೆಯನ್ನು ನಡೆಸುವವರಲ್ಲಾಗಲೀ ಇದೆಯೇ ?...

ತಮ್ಮ ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ಹೆತ್ತವರಿಂದ ಇನ್ನೊಂದು ಅಚಾತುರ್ಯ ಘಟಿಸುತ್ತದೆ. ಹೈಸ್ಕೂಲಿನ ಓದು ಮುಗಿಸಿ, ಕಾಲೇಜಿಗೆ ಪ್ರವೇಶ ಪಡೆಯುವ ಹಂತದಲ್ಲಿ ಮಗುವಿನ ವಯಸ್ಸು ೧೬ಕ್ಕೆ ಬಂದಿದ್ದರೂ ಕೂಡ ಹೆತ್ತ ವರ್ಗದಲ್ಲಿ ಬಹುಸಂಖ್ಯೆಯ ಪಾಲಕರು ''ನಿನ್ನ ಆಸಕ್ತಿಯ ಕ್ಷೇತ್ರ ಯಾವುದು ?'' ಎಂಬ ಒಂದೇ ಒಂದು ಪ್ರಶ್ನೆ ಮಗನ ಇಲ್ಲವೇ ಮಗಳ

ಮುಂದಿಟ್ಟು, ಅವನ/ಅವಳ ಇಷ್ಟಾನುಸಾರ ಓದಲು ಬಾಗಿಲು ತೆರೆಯುವುದಿಲ್ಲ. ಶೇಕಡಾ ೪೫ ಅಂಕ ಪಡೆದಿರಲಿ, ೫೫ ಅಂಕ ಪಡೆದಿರಲಿ; ಆತ/ಆಕೆ ವಿಜ್ಞಾನ ವಿಷಯವನ್ನೇ ಓದಬೇಕು. ಕನಿಷ್ಠಪಕ್ಷ ಕಾಮರ್ಸ್ ತೆಗೆದುಕೊಳ್ಳಬೇಕು. ಈ ಬಗೆಯ ಹೇರುವಿಕೆಯಿಂದಾಗಿ ಎಷ್ಟೋ ಪಾಲಕರು ತಮ್ಮ ಮಕ್ಕಳ ಮಾನಸಿಕ ಒತ್ತಡಕ್ಕೆ ತಾವೇ ಕಾರಣರಾಗಿ, ಆ ವಿದ್ಯಾರ್ಥಿಯು ರಿಪೇರಿಯೇ ಸಾಧ್ಯವಿಲ್ಲದಂಥ ಹಂತ ತಲುಪಲು ಕಾರಣರಾಗಿರುವುದನ್ನು ೧೫ ವರ್ಷಗಳ ಕಾಲ ಒಂದು ಕಾಲೇಜಿನ ಪ್ರಾಚಾರ್ಯನಾಗಿ ಬಹು ಸಮೀಪದಿಂದ ಕಂಡಿದ್ದೇನೆ.

''ಎಷ್ಟೇ ದುಡ್ಡು ಖರ್ಚಾಗಲಿ, ನೀನು ವಿಜ್ಞಾನ ಓದು, ಇಂಜಿನಿಯರ್ ಆಗು, ಡಾಕ್ಟರ ಆಗು, ವಿದೇಶಕ್ಕೆ ಹೋಗು, ಮನೆ ಮಾರಿಯಾದರೂ ದುಡ್ಡು ಕೊಡುತ್ತೇನೆ'' ಅನ್ನುವ ಪಾಲಕರ ಆಗ್ರಹಕ್ಕೆ ಮಣಿದ ಮಗ ವಿದೇಶಕ್ಕೆ ಹೋಗುವ ಮಾತು ಹಾಗಿರಲಿ, ಮತ್ತೆ ಮತ್ತೆ ನಪಾಸಾಗಿ ಸ್ವದೇಶದಲ್ಲೇ 'ಪರದೇಶಿ'ಯಾದ ಎಷ್ಟೋ ಉದಾಹರಣೆಗಳಿವೆ. ಮುಂದೆ ಅವನಿಗೆ ಇದೇ ಪಾಲಕ ವರ್ಗ 'ದಡ್ಡ' ಎಂಬ ಹಣೆಪಟ್ಟಿ ಹಚ್ಚಿದ್ದರಿಂದ ಒಳಗೂ, ಹೊರಗೂ ಅವಮಾನದ ಉರಿಯಲ್ಲಿ ಬೆಂದು ದಾರಿ ತಪ್ಪಿದ ಈ ಮಗ ಸಮಾಜ ಕಂಟಕನಾಗಿ ಹೊರಹೊಮ್ಮಿದ ನಿದರ್ಶನಗಳ ಪಟ್ಟಿಯನ್ನೇ ನಾನು ಕೊಡಬಲ್ಲೆ.

ಯಾರದೋ ತಪ್ಪು ನಿರ್ಣಯದಿಂದಾಗಿ ಕಾಲೇಜಿನ ಪರೀಕ್ಷೆಗಳಲ್ಲಿ ನಪಾಸಾದ ವಿದ್ಯಾರ್ಥಿಯೊಬ್ಬ ೮೦೦ ಮೀಟರ್ ಓಟದಲ್ಲಿ ರಾಜ್ಯಕ್ಕೆ ಪ್ರಥಮನಾಗುತ್ತಾನೆ. ಇನ್ನೊಬ್ಬ ವಿದ್ಯಾರ್ಥಿ ಗುಡ್ಡಗಾಡು ಓಟದಲ್ಲಿ ರಾಜ್ಯಕ್ಕೆ ಪ್ರಥಮನಾಗುತ್ತಾನೆ. ಮತ್ತೊಬ್ಬ ವಿದ್ಯಾರ್ಥಿ ೫೨ ಫೂಟು ಆಳದ್ದಾದ ತುಂಬಿದ ಬಾವಿಯಲ್ಲಿ ಬಿದ್ದು ತನ್ನ ಸಹ ವಿದ್ಯಾರ್ಥಿನಿಯೊಬ್ಬಳ ಕಿವಿ ಜುಮುಕಿಯನ್ನು ಹೆಕ್ಕಿ ತೆಗೆಯುವುದಕ್ಕಾಗಿ ತಳತನಕ ಮುಳುಗಿ ಯಶಸ್ವಿಯಾಗಿ ಮೇಲೆದ್ದುಬರುತ್ತಾನೆ. ತರಗತಿಯಲ್ಲಿ ನಪಾಸಾದ ಎಷ್ಟೋ ವಿದ್ಯಾರ್ಥಿಗಳೂ/ವಿದ್ಯಾರ್ಥಿನಿಯರೂ ಸಂಗೀತದಲ್ಲಿ, ಮಾತುಗಾರಿಕೆಯಲ್ಲಿ, ಅಡಿಗೆ ಮಾಡುವುದರಲ್ಲಿ, ಕರಕುಶಲ ವಸ್ತು ತಯಾರಿಕೆಯಲ್ಲಿ ನಿಬ್ಬೆರಗಾಗುವಂತಹ ಸಾಧನೆ ಮಾಡಿದ್ದಾರೆ. ಅವನ/ಅವಳ ಈ ಎಲ್ಲ ಕೌಶಲ್ಯಗಳನ್ನು ಪ್ರಚಲಿತ ನಮ್ಮ ಶಿಕ್ಷಣ ವ್ಯವಸ್ಥೆ ಮೌಲ್ಯಮಾಪನಕ್ಕೆ ಒಳಪಡಿಸಿದೆಯೇ? ಶಿಕ್ಷಣವೆಂದರೆ ವಿಜ್ಞಾನ, ತಂತ್ರಜ್ಞಾನ ಮಾತ್ರವೇ ಅಲ್ಲ, ಅಲ್ಲಿ ಕಲೆಯಿದೆ, ಸಂಸ್ಕೃತಿ ಇದೆ, ಆಟೋಟಗಳಿವೆ, ಗೃಹ ವಿಜ್ಞಾನ, ಕೃಷಿ ವಿಜ್ಞಾನ, ಸಮುದ್ರ ವಿಜ್ಞಾನ, ರಂಗ-ವ್ಯಾಕರಣ... ಒಂದೇ..., ಎರಡೇ, ಹಲವಾರು ಇವೆ. ಆದರೆ ಇಂದು ಮನೆಮನೆಗಳಲ್ಲಿ ನಡೆಯುತ್ತಿರುವುದೇನು? ''ಓದು, ಟ್ಯೂಷನ್ನಿಗೆ ಹೋಗು, ಏನಾದರೂ ಮಾಡಿ ಹೆಚ್ಚು ಅಂಕಗಳನ್ನು ಗಳಿಸು. ರಾತ್ರಿ ಹನ್ನೊಂದು ಗಂಟೆಗೆ ಚಹಾ ಮಾಡಿಕೊಡುತ್ತೇನೆ. ಒಂದು ಗಂಟೆಯವರೆಗೆ ಅಭ್ಯಾಸಮಾಡು. ಅಲಾರಂ ಇಟ್ಟುಕೊ. ಬೆಳಿಗ್ಗೆ ನಾಲ್ಕು ಗಂಟೆಗೆ ಮತ್ತೆ ಏಳು ಥರ್ಮಾಸಿನಲ್ಲಿ ಮಾಡಿಟ್ಟ ಚಹಾ ಕುಡಿದು ಇನ್ನಷ್ಟು ಓದು!'' ಇದು ಶಿಕ್ಷಣವೋ? ಇಲ್ಲವೇ ಶಿಕ್ಷಣದ ಹೆಸರಿನಲ್ಲಿ ಎಳೆಯ ಮನಸ್ಸುಗಳ ಮೇಲಿನ ನಡೆಸುವ ನಿರ್ದಯ ಹಿಂಸೆಯೋ?

ಒಬ್ಬ ವಿದ್ಯಾರ್ಥಿ ಹಗಲಿನ ಸಮಯಗಳನ್ನು ಪ್ರಸನ್ನಚಿತ್ತನಾಗಿ ಕಳೆಯಬೇಕಾದಲ್ಲಿ, ಆತನಿಗೆ ರಾತ್ರಿ ಕನಿಷ್ಠ ಎಂಟು ತಾಸುಗಳ ನಿದ್ದೆಯ ಅವಶ್ಯಕತೆ ಇದೆ. ಇಂಥ ಒಂದು ಸಾಮಾನ್ಯ ಜ್ಞಾನ ನಮ್ಮ ಪಾಲಕವರ್ಗಕ್ಕೆ ಇರಬೇಡವೆ? ಮಗು ಬಾಲವಾಡಿಗೆ ಸೇರಿದಂದಿನಿಂದ ಅಲ್ಲಿ ಶಿಕ್ಷಕರು, ಇಲ್ಲಿ ಪಾಲಕರು, ಪರೀಕ್ಷೆಯೆಂಬ ಗುಮ್ಮನನ್ನು ಕಣ್ಣಿಗೆ ಕಟ್ಟಿ ಮಗು ಭಯಪ್ರಜ್ಞೆಯಿಂದ ನಲುಗುವಂತೆ ಮಾಡುತ್ತಾರೆ. 'ಪರೀಕ್ಷೆ' ಎಂಬ ಶಬ್ದವನ್ನು ಮಾನವ ಸಂಪನ್ಮೂಲ ಇಲಾಖೆ ತನ್ನ ಸಿಲೆಬಸ್ಸಿನಿಂದ ತೆಗೆದುಹಾಕುವವರೆಗೆ ಮಕ್ಕಳಿಗೆ ನ್ಯಾಯ ಸಿಗದು. ಯಾರು ಯಾರ ಪರೀಕ್ಷೆ ಮಾಡುತ್ತಾರೆ, ಎಂಬುದೇ ಪ್ರಶ್ನಾರ್ಹ. ಪಾಲಕರು ಮನೆಯಲ್ಲಿರುತ್ತಾರೆ, ಪಾಠ ಹೇಳಿಕೊಟ್ಟವರು ಮತ್ತೆಲ್ಲೋ ಇರುತ್ತಾರೆ, ಪರೀಕ್ಷೆ ನಡೆಸುವವರು ಇನ್ನೆಲ್ಲೋ ಇರುತ್ತಾರೆ. ಮೌಲ್ಯಮಾಪನ ಮಾಡುವವರ ಕತೆಯಂತೂ ಕೇಳುವುದೇ ಬೇಡ. ಬಹುಶಃ ಈ ಹಿನ್ನೆಲೆಯಲ್ಲೇ ಪ್ರಜ್ಞಾವಂತರು ಮನಸ್ಸುಗಳು ಮಕ್ಕಳು ಪರೀಕ್ಷೆ ಎಂದಾಕ್ಷಣ ಭಯಪಡದೆ ಇರುವಂತೆ ಮಾಡುವುದು ತುರ್ತಿನ ಅಗತ್ಯ ಎಂಬ ಅಭಿಪ್ರಾಯ ಹೊಂದಿದ್ದಾರೆ. ಈ ಸಲಹೆಯನ್ನು ಬಹುಬೇಗ ಅರ್ಥಮಾಡಿಕೊಂಡ ದೇಶಗಳಲ್ಲಿ ಇಂಡಿಯಾ ಕೂಡ ಒಂದು ಎಂಬುದು ಸಮಾಧಾನಕರ ಸಂಗತಿ. ಎಸ್.ಎಸ್.ಎಲ್.ಸಿ. ಹಂತದವರೆಗೆ ಪರೀಕ್ಷೆ ಎಂಬ ಗುಮ್ಮವನ್ನು ಮುಂದಿಟ್ಟು ಮಕ್ಕಳನ್ನು ಕಾಡಕೂಡದು ಎಂಬುದಕ್ಕೆ ಈಗಾಗಲೇ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆ ತಾತ್ವಿಕವಾಗಿ ಒಪ್ಪಿ, ಆ ದಾರಿಯಲ್ಲಿ ಹೆಜ್ಜೆ ಇಡತೊಡಗಿದೆ.

ಮಗು ತನ್ನ ಎಳೆಯ ದಿನಗಳಲ್ಲಿ ಆಟ, ಹಾಡು, ಕಥೆ, ಕುಣಿತ, ಪೇಂಟಿಂಗ್, ಕಸೂತಿಯಂತಹ ತನ್ನ ಆಸಕ್ತಿಯ ಕ್ಷೇತ್ರಗಳಲ್ಲಿ ದಿನದ ಒಂದಷ್ಟು ಸಮಯ ಕಳೆಯಬೇಡವೇ? ಮನೆಯ ಮುಂದೆ ಚಂದದ ಹೂವೊಂದು ಅರಳಿ ನಿಂತಾಗ, ಅದನ್ನು ಕಣ್ತುಂಬ ನೋಡಿ ಸಂತೋಷಪಡುವ ಹಕ್ಕೂ ಅದಕ್ಕಿಲ್ಲವೆ? ಕಿಟಕಿಯಿಂದ ಹಾದುಬರುವ ತಂಪಾದ ಗಾಳಿಗೆ ಮೈಯೊಡ್ಡಿ ನಿಲ್ಲುವುದಕ್ಕೂ ಪರೀಕ್ಷೆ ಎಂಬ ಗುಮ್ಮ ಅಡ್ಡಿಯಾಗಬೇಕೆ? ಪರೀಕ್ಷೆ, ಹೋಮ್‌ವರ್ಕ್, ಟ್ಯೂಷನ್, ಇತ್ಯಾದಿ ಕಾರಣಗಳನ್ನು ಕೊಟ್ಟು ಮಕ್ಕಳ ಸಂತೋಷವನ್ನು ಕಸಿಯುವ ಇಂದಿನ ಶೈಕ್ಷಣಿಕ ವ್ಯವಸ್ಥೆಯಿದೆಯಲ್ಲ, ಅದು ಒಂದರ್ಥದಲ್ಲಿ ಆಯಾ ವಯೋಮಾನಗಳಿಗೆ ಸೀಮಿತವಾಗಿ ಜರುಗುವ ಮಾನವ ಹಕ್ಕಿನ ಉಲ್ಲಂಘನೆಯೇ ಆಗಿದೆ.

ಶಾಲಾಭ್ಯಾಸದ ಕಾಲಾವಧಿಯಲ್ಲಿ ಮೌಲ್ಯಮಾಪನ ಇರಲೇಬಾರದು ಎಂಬ ನಿಲುವೂ ಪೂರ್ತಿ ಸರಿಯಲ್ಲ. ವಾರ್ಷಿಕ ಪರೀಕ್ಷೆ ಎಂಬ ಪದವನ್ನು ಮೊದಲು ಅಳಿಸಿಹಾಕಬೇಕು. ಅಗತ್ಯ ಇರುವಲ್ಲೆಲ್ಲ ಅನೌಪಚಾರಿಕ ಪರೀಕ್ಷಾ ಪದ್ಧತಿಯನ್ನು – ಆಯಾ ವಯೋಮಾನದ ಮಕ್ಕಳ ಗ್ರಹಿಕೆಯ ದರಕ್ಕೆ ತಕ್ಕಷ್ಟು ಅಳವಡಿಸಬಹುದಾಗಿದೆ. ಮಗುವಿನಲ್ಲಿರುವ ಎಲ್ಲ ಕೌಶಲ್ಯಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಮಗ್ಗಿ ಉರುಹಾಕಿ ಚೆನ್ನಾಗಿ ಒಪ್ಪಿಸಿದವನಿಗೆ ಅಂಕ ಉಂಟು, ಇಂಪಾಗಿ ಹಾಡುವವನಿಗೆ ಅಂಕ ಇಲ್ಲ! ಇದು ಯಾವ ಸೀಮೆಯ ನ್ಯಾಯ? ವಿವೇಕಾನಂದರೇ ಒಂದು ಕಡೆ ಹೇಳಿರುವಂತೆ, ಶಿಕ್ಷಣವೆಂದರೆ ಬರೀ ಓದಲ್ಲ, ಬರೀ ಪುಸ್ತಕ ಜ್ಞಾನವೂ ಅಲ್ಲ. **ಅದು ಮಾನವತೆಯ ವಿಕಾಸ.**

ನಮ್ಮನ್ನೆಲ್ಲಾ ಕಾಡಬೇಕಾದ ಒಂದಷ್ಟು ಪ್ರಶ್ನೆಗಳಿವೆ. ಇಂದು ನಮ್ಮ ರಾಜಕಾರಣಿಗಳು ಪ್ರಾಮಾಣಿಕರಲ್ಲ ಎನ್ನುತ್ತೇವೆ. ಈಗ ನನ್ನ ಪ್ರಶ್ನೆ: ಪೂರ್ತಿ ಪ್ರಾಮಾಣಿಕ ವೈದ್ಯ ನಿದ್ದಾನೆಯೇ?... ವ್ಯಾಪಾರಿ ಇದ್ದಾನೆಯೇ? ನೌಕರರ ವರ್ಗ ಇದೆಯೇ? ಶಿಕ್ಷಕರೂ, ವಿಜ್ಞಾನ-ತಂತ್ರಜ್ಞಾನಿಗಳೂ ಇದ್ದಾರೆಯೇ? ಸಾಹಿತಿ-ಕಲಾವಿದರಿದ್ದಾರೆಯೇ? ನಾವು ಕೇವಲ ರಾಜಕಾರಣಿಗಳನ್ನು ಮಾತ್ರ ಗುರಿಮಾಡಿ ಹೇಳುತ್ತೇವೆ. ಎಲ್ಲಾ ಕ್ಷೇತ್ರಗಳಲ್ಲಿ ಬೆರಳೆಣಿಕೆಯ ಪ್ರಾಮಾಣಿಕರಿದ್ದೇ ಇರುತ್ತಾರೆ. ಆದರೆ ಎಲ್ಲಾ ಕ್ಷೇತ್ರದಲ್ಲೂ ಅಪ್ರಾಮಾಣಿಕರ ಸಂಖ್ಯೆ ಹೆಚ್ಚು.

ಹಾಗಾದರೆ ಯಾಕೆ ಹೀಗಾಗಿದೆ? ಸುಂದರ ಮತ್ತು ಪ್ರಾಮಾಣಿಕ ಮನಸುಗಳನ್ನು ಒಡೆದು ಕಾಣುವ ಈ ಬೆಳವಣಿಗೆಗೆ ಕಾರಣವೇನು? ನಮ್ಮ ತರಗತಿಯ ಕೋಣೆಗಳು ಪ್ರಾಮಾಣಿಕವಲ್ಲವಾದುದರಿಂದಲೋ ಅಥವಾ ಶಿಕ್ಷಣ ವ್ಯವಸ್ಥೆಯ ತಪ್ಪು ನಿರ್ಧಾರಗಳೋ?

ಭಾರತ, ಬೇಕಾಗಿಯೋ ಬೇಡವಾಗಿಯೋ, ಒಕ್ಕೂಟ ಜನತಂತ್ರ ವ್ಯವಸ್ಥೆಯನ್ನು ಒಪ್ಪಿಕೊಂಡ ದೇಶ. ಇದಕ್ಕಿಂತ ಉತ್ತಮ ವ್ಯವಸ್ಥೆ ಸದ್ಯಕ್ಕಂತೂ ಇದ್ದಂತಿಲ್ಲ. ಆದರೆ ಈ ಒಕ್ಕೂಟ ವ್ಯವಸ್ಥೆಯ ಒಳಗಡೆ ಶಿಕ್ಷಣದಂಥ ವಿಷಯದಲ್ಲಿ ಇಡೀ ದೇಶಕ್ಕೆ ಏಕರೂಪವಾದ ನಿಯಮ ತರಲು ಸಾಧ್ಯವಾಗುತ್ತಿಲ್ಲ. ಸರಕಾರಗಳು ಬದಲಾದಂತೆ ಪಠ್ಯ-ಪುಸ್ತಕಗಳಲ್ಲೂ ಬದಲಾವಣೆ ಕಾಣುತ್ತದೆ. ಕೇರಳದ ಶಿಕ್ಷಣದ ವ್ಯವಸ್ಥೆ ಕರ್ನಾಟಕದಲ್ಲಿಲ್ಲ. ಕರ್ನಾಟಕದಲ್ಲಿರುವಂತೆ ಬಂಗಾಲದಲ್ಲಿಲ್ಲ. ಬಂಗಾಲದಲ್ಲಿದ್ದ ವ್ಯವಸ್ಥೆ ಮಹಾರಾಷ್ಟ್ರದಲ್ಲಿ ಕಾಣಲಾಗುವದಿಲ್ಲ. ಉತ್ತರ ಭಾರತದ ಶೈಕ್ಷಣಿಕ ಮನೋಧರ್ಮಕ್ಕೂ, ದಕ್ಷಿಣ ಭಾರತದ ಮನೋಧರ್ಮಕ್ಕೂ ಸೂಕ್ಷ್ಮ ವ್ಯತ್ಯಾಸವಿದೆ. ಇವೆಲ್ಲವೂ ಸರಿಯೇ. ಆದರೂ ನನಗನಿಸುವ ಮಟ್ಟಿಗೆ ಭಾಷಾ ಮಾಧ್ಯಮದ ವಿಷಯವಾಗಿಯಾದರೂ ಗಣಿತ-ವಿಜ್ಞಾನಗಳಂತೆ ಎಲ್ಲೆಡೆ ಏಕರೂಪವಾಗಿ ಸಲ್ಲಬಹುದಾದ ವಿಷಯಗಳಲ್ಲಿಯಾದರೂ ಇಡೀ ದೇಶಕ್ಕೆ ಏಕರೂಪ ಶಿಕ್ಷಣ ನೀತಿಯನ್ನು ಯಾಕೆ ಅಳವಡಿಸಬಾರದು?

ಡಾ॥ ರಾಧಾಕೃಷ್ಣನ್ ಹೇಳಿದ ಎರಡು ಮಾತುಗಳು ಯಾವಾಗಲೂ ನನ್ನನ್ನು ಕಾಡುತ್ತವೆ: ''ನಾವು ಹೊಸ ಸಮಾಜಕ್ಕಾಗಿ ಹೊಸ ಮಾದರಿಯ ಸ್ತ್ರೀ-ಪುರುಷರನ್ನು ನಿರ್ಮಿಸಬೇಕಾಗಿದೆ; ಇದು ಶಾಲೆ ಮತ್ತು ಕಾಲೇಜುಗಳಿಂದ ಮಾತ್ರ ಸಾಧ್ಯ.'' ''ಕೆಡುಕು ಮಾಡುವ ಶಕ್ತಿ ಇದ್ದೂ ಕೆಡುಕನ್ನು ಮಾಡದೆ ಇರುವುದೇ ಒಳ್ಳೆತನ'' ಎಂದೂ ಹೇಳಿದ್ದಾರೆ. ''ನಮ್ಮ ವಿದ್ಯಾರ್ಥಿಗಳು ಪುಸ್ತಕಗಳಿಗಿಂತಲೂ ಶಿಕ್ಷಕರಿಂದಲೇ ಹೆಚ್ಚು ವಿಷಯಗಳನ್ನು ಕಲಿಯುತ್ತಾರೆ'' ಎಂದವರು ಕೂಡ ಅವರೇ.

ಈಗ ವಿಚಾರ ಮಾಡೋಣ – ನಮ್ಮ ನೆಮ್ಮದಿಯ ಸಮಾಜ ಯಾರ ಕೈಯಲ್ಲಿದೆ? ಈಗಿತ್ತ ಶಿಕ್ಷಕರನ್ನು ಮುಕ್ಕಾಲು ಭಾಗ ದಾಖಲೆ ಇಡುವ ಗುಮಾಸ್ತರನ್ನಾಗಿ ಮಾಡುತ್ತಿರುವ ಸರಕಾರ ಈ ಬಗ್ಗೆ ಏನು ಹೇಳುತ್ತದೆ?

ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ, ಅಂಕೋಲ - ೫೮೧ ೩೧೪
ಉತ್ತರ ಕನ್ನಡ ಜಿಲ್ಲೆ



# ವಿವೇಕ ಶಾನಭಾಗರ 'ಒಂದು ಬದಿ ಕಡಲು'

ಎಚ್. ದಂಡಪ್ಪ ಕೊಂಡ್ರಹಳ್ಳಿ

೨೦೦೭ರಲ್ಲಿ ಪ್ರಕಟವಾದ ಕೃತಿಗಳಲ್ಲಿ ಅತ್ಯುತ್ತಮ ಹತ್ತು ಕೃತಿಗಳನ್ನು ಪಟ್ಟಿ ಮಾಡುವಾಗ ಎಲ್ಲ ಸಮೀಕ್ಷಕರು, ವಿಮರ್ಶಕರು ವಿವೇಕ ಶಾನಭಾಗರ 'ಒಂದು ಬದಿ ಕಡಲು' ಕೃತಿಯನ್ನು ತಪ್ಪದೇ ಹೆಸರಿಸಿದ್ದಾರೆ. ಇದು ಇವರ ಎರಡನೇ ಕಾದಂಬರಿ. ಕನ್ನಡ ಕಥನ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕಾಣಿಕೆ ನೀಡಿರುವ ಇವರು ಈ ಕೃತಿಯ ಮೂಲಕ ತಾವೊಬ್ಬ ಉತ್ತಮ ಲೇಖಕರೆಂಬುದನ್ನು ಸಾಬೀತುಪಡಿಸಿದ್ದಾರೆ. ಹೆಸರೇ ಸೂಚಿಸುವಂತೆ ಒಂದು ಬದಿಯಲ್ಲಿ ಕಡಲನ್ನು ಮತ್ತೊಂದು ಬದಿಯಲ್ಲಿ ಭೂಮಿಯನ್ನು ಇಟ್ಟುಕೊಂಡಿರುವ ಪ್ರದೇಶ ಕುರಿತ ಕಾದಂಬರಿ ಇದು. ಹೊನ್ನಾವರ, ಕುಮಟಾ, ಶಿರಸಿ ವ್ಯಾಪ್ತಿಯಲ್ಲಿ ಈ ಕಾದಂಬರಿಯ ಹರಹು ಇದೆ. ಈ ಪ್ರದೇಶಗಳ ವ್ಯಾಪ್ತಿಯಲ್ಲಿಯೇ ಇಲ್ಲಿನ ಪಾತ್ರಗಳ ಜೀವನಾನುಭವ ಬದುಕಿನ ಸ್ವರೂಪಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತವೆ.

ವಿವೇಕ ಶಾನಭಾಗರ ಬರವಣಿಗೆಯ ಕ್ರಮ ವಿಶಿಷ್ಟವಾದ್ದು. ಇವರ ಬರೆವಣಿಗೆಯ ಕ್ರಮದಲ್ಲಿ ವಾಸ್ತವವಾದ, ಮಾನವತಾವಾದ ಮತ್ತು ಆಧುನಿಕತೆಗಳು ಒಂದರೊಡನೊಂದು ಬೆಸೆದುಕೊಂಡಿವೆ, ಅಂತರ್ಗತವಾಗಿವೆ. ಹೀಗಾಗಿ ಬದುಕಿನ ವಿವಿಧ ಮಗ್ಗಲುಗಳನ್ನು, ಬದುಕಿನ ವಿಪರ್ಯಾಸ, ದ್ವಂದ್ವಗಳನ್ನು ಈ ಕಾದಂಬರಿಯಲ್ಲಿ ಸಮರ್ಥವಾಗಿ ಹಿಡಿದಿಡಲು ಸಾಧ್ಯವಾಗಿದೆ. ಕಾದಂಬರಿಯ ಉದ್ದಕ್ಕೂ ಅಂತರ್ಗತವಾಗಿ ಹರಿದಿರುವ ವಿಚಾರವೆಂದರೆ ಮಾನವತಾವಾದ. ಮಾನವತಾವಾದದ ನೆಲೆಗಳನ್ನು ಶಾನಭಾಗರು ಇತರೆ ಲೇಖಕರಂತೆ ಅಗತ್ಯವಾದ ಹೊಂದಾಣಿಕೆಗಳನ್ನು ಮಾಡಿಕೊಂಡು ತಮ್ಮ ಕೃತಿಯಲ್ಲಿ ಬಳಸಿಕೊಂಡಿದ್ದಾರೆ.

ಮಾನವತಾವಾದ ಮನುಷ್ಯಕೇಂದ್ರಿತ ಚಿಂತನೆಯಾಗಿದ್ದು, ಉದಾರಸಹಿಷ್ಣು ದೃಷ್ಟಿಕೋನ ಇದಕ್ಕಿದೆ. ಮನುಷ್ಯನ ಸಮಸ್ಯೆಗಳು, ಸಂಬಂಧಗಳು, ಅವನು ನಿರ್ಮಿಸಿಕೊಂಡಿರುವ ಸಾಮಾಜಿಕ, ಧಾರ್ಮಿಕ, ರಾಜಕೀಯ ವ್ಯವಸ್ಥೆಗಳು, ಆಸೆ-ಆಕಾಂಕ್ಷೆಗಳು ಇಲ್ಲಿ ಮಹತ್ವ ಪಡೆದುಕೊಳ್ಳುತ್ತವೆ. ಮನುಷ್ಯನ ಗೌರವ ಅವನ ಪರಿಪೂರ್ಣತೆಯ ಸಾಧ್ಯತೆಗಳು, ಅವನ ಶಕ್ತಿಯನ್ನು ಪ್ರಯೋಜನಕಾರಿಯಾಗಿ ಬಳಸಿಕೊಳ್ಳುವ ಸಾಧನಗಳಾಗಿವೆ. ಮಾವನತಾವಾದ ದೇವರ ಅಸ್ತಿತ್ವವನ್ನು ನಿರಾಕರಿಸುತ್ತದೆ, ಆತ್ಮ, ಪ್ರಾರಬ್ಧಕರ್ಮ ಪರಲೋಕಗಳನ್ನು ನಿರಾಕರಿಸುತ್ತದೆ. ಆದರೆ ತಾತ್ಸಾರದಿಂದ ಕಾಣುವುದಿಲ್ಲ. ಇಂದಿನ ಬದುಕು ಮುಖ್ಯವಾಗಬೇಕು. ಬದುಕಲು ಯೋಗ್ಯವಾದಂತಹ ಪರಿಸರವನ್ನು ನಿರ್ಮಿಸಬೇಕು. ಜೀವನಾಸಕ್ತಿ, ಜೀವನಪ್ರೀತಿಗಳು ಮುಖ್ಯವಾಗಬೇಕು. ಈ ಬದುಕಿನ ಎಲ್ಲ ಸಮಸ್ಯೆಗಳಿಗೆ ಇಲ್ಲಿಯೇ ಉತ್ತರಗಳಿವೆ. ಸಮಸ್ಯೆಗಳ ಪರಿಹಾರಕ್ಕೆ ಧಾರ್ಮಿಕ ಉತ್ತರಗಳನ್ನು ಅರಸಿ ಹೋಗಬೇಕಾಗಿಲ್ಲ. ಆಧ್ಯಾತ್ಮಿಕ ಉತ್ತರಗಳ ಹುಡುಕಾಟವೂ ಇಲ್ಲ. ಕಾರ್ಯರೂಪಕ್ಕೆ ಇಳಿಸಲು ಸಾಧ್ಯವಾಗದೆ ಇರುವ ಆದರ್ಶಗಳಲ್ಲಿಯೂ ಆಸಕ್ತಿ ಇಲ್ಲ. ಈ ಭೌತಿಕ ಜೀವನದಲ್ಲಿಯೇ ಎಲ್ಲದಕ್ಕೂ ಉತ್ತರಗಳನ್ನು ಹುಡುಕಬೇಕು. ಒಟ್ಟಾರೆಯಾಗಿ, ವೈಜ್ಞಾನಿಕ ಮನೋಧರ್ಮ ಇಲ್ಲಿ ಮುಖ್ಯವಾಗುತ್ತದೆ. 'ಒಂದು ಬದಿ ಕಡಲು' ಕಾದಂಬರಿಯಲ್ಲಿ ಪುರಂದರ, ಯಶವಂತ, ರಮಾಕಾಂತ, ದೇವರಾಯ, ಗೋದಾವರಿ, ಸಾವಿತ್ರಮ್ಮ, ಪಂಢರಿ, ಯಮುನೆ ಇವರೆಲ್ಲರೂ ಈ ಸ್ವಭಾವದವರೇ. ಪುರಂದರನಿಗೆ ಈ ಬದುಕು ಮುಖ್ಯ. ಅವನು ಸ್ವಾಭಿಮಾನಿ. ಸ್ವಾಭಿಮಾನ ಬಿಟ್ಟು ಬದುಕನ್ನು ರೂಪಿಸಿಕೊಳ್ಳುವ ಸಾಹಸಕ್ಕೆ ಕೈ ಹಾಕಬಾರದೆಂದು ಭಾವಿಸಿರುವವನು. ಆತ್ಮವಿಶ್ವಾಸದ ವ್ಯಕ್ತಿಯಾಗಿ ತನ್ನತನವನ್ನು ಉಳಿಸಿಕೊಂಡು ಬದುಕನ್ನು ಸುಂದರವಾಗಿಸಿಕೊಳ್ಳಲು ಪ್ರಯತ್ನಿಸುವ ವ್ಯಕ್ತಿ. ವಿದ್ಯಾಭ್ಯಾಸದ ದಿನಗಳಲ್ಲಿ, ''ನನ್ನ ಬದುಕನ್ನು ನೌಕರಿಗೆ ಸೇರುವುದರ ಮೂಲಕ ಕಂಡುಕೊಳ್ಳುತ್ತೇನೆ'' ಎಂದು ತನ್ನ ಇಬ್ಬರು ಸ್ನೇಹಿತರಿಗೆ (ಯಶವಂತ ಮತ್ತು ರಾಮ) ಹೇಳಿದ್ದ ಮಾತಿನಂತೆ ನೌಕರಿಗೆ ಸೇರುತ್ತಾನೆ. ತನ್ನ ಮದುವೆಯ ವಿಷಯದಲ್ಲಿ ಕೂಡ ಸ್ವಾಭಿಮಾನಕ್ಕೆ ಚ್ಯುತಿಯಾಗುತ್ತದೆ ಎಂಬ ಭಾವನೆ ಬಂದಾಗ ತನಗೆ ಓದಿಸಲು, ಕೆಲಸ ಕೊಡಿಸಲು ನೆರವಾಗಿದ್ದ ವಾಸುದೇವನ ಮಗಳನ್ನು ವಿವಾಹವಾಗದೆ ದೇವರ ಎದುರಿಗೆ ಆಣೆ ಮಾಡಿದ್ದನ್ನು ಧಿಕ್ಕರಿಸಿ ಸುನಂದೆಯನ್ನು ಮದುವೆಯಾಗುತ್ತಾನೆ. ಇದು ಅವನು ವೈಚಾರಿಕ ನೆಲೆಯಲ್ಲಿ ಯೋಚಿಸಿದ್ದರ ಫಲ. ಸಾಮಾನ್ಯವಾಗಿ ಸಂಪ್ರದಾಯಸ್ಥ ಕೆಳ ಮಧ್ಯಮ ವರ್ಗದ ಕುಟುಂಬದಲ್ಲಿ ದೇವರು, ನಂಬಿಕೆಗಳು, ಆಚರಣೆಗಳು ಪ್ರಬಲವಾದ ಸ್ಥಾನಗಳಿಸಿರುತ್ತವೆ. ತಮ್ಮ ಬದುಕನ್ನು ಬೇಕಾದರೆ ಕಳೆದುಕೊಳ್ಳಲು ಸಿದ್ಧರಾಗುತ್ತಾರೆಯೇ ಹೊರತು ದೇವರು, ಧರ್ಮ, ನಂಬಿಕೆ ಪ್ರಮಾಣ ಇವುಗಳನ್ನು ಬಿಟ್ಟುಕೊಡುವುದಿಲ್ಲ. ಇಂತಹ ಹಿನ್ನೆಲೆಯಿಂದ ಬಂದ ಪುರಂದರ ಮತ್ತು ಅವನ ಸ್ನೇಹಿತರು, ಆಚರಣೆ, ನಂಬಿಕೆ, ಸಂಪ್ರದಾಯವನ್ನು ಧಿಕ್ಕರಿಸುತ್ತಾರೆ. ಇದು ಅವರ ಮಿತಿಗಳಲ್ಲಿ ನಡೆಸುವ ಬಂಡಾಯವೇ ಆಗಿದೆ. ಆಧುನಿಕತೆ ಇವರ ಮೇಲೆ ದಟ್ಟ ಪ್ರಭಾವ ಬೀರಿದೆ. ಮಾನವತಾವಾದ ಮತ್ತು ಆಧುನಿಕತೆಯ ಪ್ರಮುಖ ಲಕ್ಷಣವೇ ವೈಚಾರಿಕತೆ. ಮೂಢನಂಬಿಕೆ, ಸಂಪ್ರದಾಯ, ಅರ್ಥಹೀನ ಮೌಲ್ಯಗಳನ್ನು ಧಿಕ್ಕರಿಸಿ ಬದುಕನ್ನು ರೂಪಿಸಿಕೊಳ್ಳುವುದೇ ಇಲ್ಲಿ ಮುಖ್ಯ.



ಲೇಖಕರು : ವಿವೇಕ ಶಾನಭಾಗ
ಪ್ರಕಾಶನ : ಅಕ್ಷರ ಪ್ರಕಾಶನ, ಸಾಗರ
ಹೆಗ್ಗೋಡು - ೫೭೭೪೧೭
ಪುಟ : ೨೧೨ ಬೆಲೆ : ರೂ. ೧೩೫

ಈ ಕಾದಂಬರಿಯು ವಾಸ್ತವವಾದಿ ಮಾರ್ಗದಲ್ಲಿ ರಚನೆಯಾಗಿದೆ. ಮಾನವತಾವಾದಿ ದೃಷ್ಟಿಕೋನದಿಂದ ಗ್ರಹಿಸಿದ ಸಾಮಾಜಿಕ ಬದಲಾವಣೆಯನ್ನು ವಾಸ್ತವವಾದಿ ತಂತ್ರದಿಂದ ನಿರೂಪಿಸುವ ಮಾದರಿಯ ಕಾದಂಬರಿ ಇದು. ವಾಸ್ತವವಾದದಲ್ಲಿ ಸಾಮಾನ್ಯರ ಜೀವನಕ್ಕೆ, ಅವರ ದೈನಂದಿನ ಬದುಕಿನ ವಿವರಗಳಿಗೆ ಮಹತ್ವವಿರುತ್ತದೆ. ತಂತ್ರದಲ್ಲಿ ಸಂಕೀರ್ಣತೆ ಇರುವುದಿಲ್ಲ, ಯಾವುದೇ ರೀತಿಯ ವೈಭವೀಕರಣ, ಉತ್ಪ್ರೇಕ್ಷೆ ಇಲ್ಲದೆ ಬದುಕಿನ ವಿವರಗಳನ್ನು ಅವುಗಳನ್ನು ಇರುವ ಹಾಗೆಯೇ ಚಿತ್ರಿಸಲಾಗುತ್ತದೆ. ಇಲ್ಲಿ ವಿವರಗಳೇ ಅರ್ಥವನ್ನು ಧ್ವನಿಸುತ್ತವೆ. ಅರ್ಥವು ವಿವರಗಳಲ್ಲಿದೆ. ವಾಸ್ತವವಾದ, ಮಾನವತಾವಾದ ಹಾಗೂ ಆಧುನಿಕತೆ ಇವು ಒಂದರೊಡನೊಂದು ಬೆರೆತುಕೊಂಡಿರುವ ಈ ಕಾದಂಬರಿಯು ಶಿವರಾಮ ಕಾರಂತರ ಪರಂಪರೆಯ ಮುಂದುವರಿಕೆಯಾಗಿದೆ.

ಪುರಂದರ, ಯಶವಂತ, ರಮಾಕಾಂತ, ಗೋದಾವರಿ, ಯಮುನೆ, ಪಂಢರಿ ಇವರೆಲ್ಲಾ ಆಧುನಿಕತೆಯನ್ನು ಒಪ್ಪುವವರು. ಆಧುನಿಕತೆಯೆಂಬುದು ಇಲ್ಲಿ ಭೌತಿಕ ಸ್ವರೂಪದ್ದಲ್ಲ, ಅಭೌತಿಕ ಸ್ವರೂಪದ್ದು. ಮೌಲ್ಯಗಳಿಗೆ, ನಂಬಿಕೆ ಆಚರಣೆಗಳಿಗೆ ಸಂಬಂಧಿಸಿದ್ದು. ಪುರಂದರ, ಯಮುನೆ, ರಮಾಕಾಂತ ಇವರು ತಿರಸ್ಕರಿಸುವುದು ಅರ್ಥಹೀನವಾದ, ಬದುಕಿಗೆ ಬೇಕಿಲ್ಲದ ಮೌಲ್ಯಗಳನ್ನು. ಪುರಂದರ ಎಲ್ಲರನ್ನು ಗೌರವಿಸುತ್ತಾನೆ. ಯಾರನ್ನೂ ನಿಕೃಷ್ಟವಾಗಿ ಕಾಣುವುದಿಲ್ಲ. ಅವನಿಗೆ ಎಲ್ಲರೂ ಒಂದೇ. ಒಂದು ಬಗೆಯ ಸಹಿಷ್ಣುತೆ ಅವನಿಗಿದೆ. ಸುನಂದಳನ್ನು ಮದುವೆಯಾಗಿ ದೇವರಾಯನ ಮನೆಗೆ ಬಂದು ನೆಲೆಸಿದಾಗ ಅಲ್ಲಿದ್ದವರೆಲ್ಲಾ ವಯಸ್ಸಾದವರೇ. ಅವರ ಮಧ್ಯೆ ಬದುಕುವಾಗ ಅವನಿಗೆ ಬೇಸರವಾಗುವುದಿಲ್ಲ. ಮುದುಕರೊಂದಿಗೆ ಬದುಕುವುದು ಹೇಗೆ ಎಂಬ ಪ್ರಶ್ನೆ ಅವನನ್ನು ಕಾಡಿದರೂ ಅವನು ಅದನ್ನು ಸಹಿಸಿಕೊಂಡು ಒಗ್ಗಿಕೊಳ್ಳುತ್ತಾನೆ. ಬದುಕಿನ ಪರಿಪೂರ್ಣತೆಯತ್ತ ಸಾಗುತ್ತಾನೆ. ಅವನಿಗೆ ಬೇಕಾಗಿರುವುದು ಮನುಷ್ಯ ಸಂಬಂಧಗಳು. ತನ್ನ ಮಗಳನ್ನು ಮದುವೆಯಾಗದ ಕಾರಣಕ್ಕೆ ವಾಸುದೇವ, ಇನ್ನೆಂದಿಗೂ ಅವನೊಂದಿಗೆ ಮಾತನಾಡುವುದಿಲ್ಲವೆಂದು ಹೇಳಿದ್ದರೂ, ಒಮ್ಮೆ ಬಸ್ಸಿನಲ್ಲಿ ಸಿಕ್ಕಾಗ ಅವನೊಂದಿಗೆ ಮಾತನಾಡುವ ಆಸೆ ಪುರಂದರನಿಗೆ ಚಿಗುರುತ್ತದೆ.

ಈ ಕಾದಂಬರಿಯಲ್ಲಿನ ಪಾತ್ರಗಳು ತಮ್ಮ ನಂಬಿಕೆ-ಸಿದ್ಧಾಂತಗಳೇ ಅಂತಿಮ ಎಂದು ಕುರುಡಾಗಿ ಭಾವಿಸುವಂತಹ ಪಾತ್ರಗಳಲ್ಲ. ಅಂತಹ ಪಾತ್ರಗಳಿದ್ದರೂ ಅವರ ನಂಬಿಕೆಗಳನ್ನು ಬಳಸಿಕೊಂಡು ಸ್ವಾರ್ಥಸಾಧನೆ ಮಾಡಿಕೊಳ್ಳುವ ಪಾತ್ರಗಳಾಗಿ ಮೂಡಿಬಂದಿವೆ. ವಾಸುದೇವ ತನ್ನ ಮಗಳನ್ನು ಪುರಂದರನಿಗೆ ಕೊಟ್ಟು ಮದುವೆ ಮಾಡಬೇಕೆಂಬ ಆಸೆಯಿಂದ ಪ್ರಮಾಣ ಮಾಡಿಸುವುದನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಅವರವರ ನಂಬಿಕೆಗಳು ಅವರವರಿಗೆ ಸರಿ. ಸರಿಯೆನಿಸಿದ ನಂಬಿಕೆಗಳನ್ನು ಅವರು ಅನುಸರಿಸಿ ಪ್ರಾಮಾಣಿಕವಾಗಿ ಬದುಕಲು ಪ್ರಯತ್ನಿಸುತ್ತಾರೆ. ಇನ್ನೊಬ್ಬರ ನಂಬಿಕೆಗಳ ಮೇಲೆ ಸವಾರಿ ಮಾಡುವುದಿಲ್ಲ. ಅವರು ನಂಬಿಕೊಂಡಿರುವ ನಂಬಿಕೆಗಳು ಪ್ರಾಮಾಣಿಕವಾಗಿವೆ ಹಾಗೂ ಬದುಕನ್ನು ಋಜುಮಾರ್ಗದಲ್ಲಿ ನಡೆಸಲು ಯೋಗ್ಯವಾಗಿವೆ. ಈ ಲಕ್ಷಣಗಳೂ ಮಾನವತಾವಾದದ ಹಾಗೂ ವಾಸ್ತವತಾವಾದದ ಲಕ್ಷಣಗಳೇ ಆಗಿವೆ ಎಂಬುದನ್ನು ಇಲ್ಲಿ ಹೆಚ್ಚು ವಿವರಿಸಬೇಕಾಗಿಲ್ಲ.

ಈ ಕಾದಂಬರಿಯಲ್ಲಿ ಬರುವ ಮುದುಕ ಮತ್ತು ಮುದುಕಿಯರ ಸ್ವಭಾವಗಳನ್ನು, ಅವರವರ ನಿಷ್ಠೆ, ಪ್ರಾಮಾಣಿಕತೆಯನ್ನು ವಿವೇಕ ಶಾನಭಾಗರು ತಮ್ಮದೇ ಆದ ಶೈಲಿಯಲ್ಲಿ ಹಿಡಿದಿಟ್ಟಿದ್ದಾರೆ. ಅವರ ನಂಬಿಕೆಗಳು ಆಧುನಿಕ ಕಾಲಕ್ಕೆ ಒಗ್ಗದಿರಬಹುದು. ಆದರೆ ಎರಡನೇ ಪೀಳಿಗೆಯವರು ಅದನ್ನು ಹೇಗೆ ಬೇಕೊ ಹಾಗೆ ತಮ್ಮ ಬದುಕಿಗೆ ಹೊಂದಿಸಿಕೊಳ್ಳುತ್ತಾರೆ. ಗೋದಾವರಿ, ಸಾವಿತ್ರಮ್ಮ, ಪಂಢರಿ, ಕಾವೇರಿ, ದೇವರಾಯ, ಪುರುಷೋತ್ತಮ, ವಾಸುದೇವ, ಮಂಜಯ್ಯ, ಅಪ್ಪಣ್ಣ, ವಿಠೋಬ, ಜನ್ನರಾಯ ಇವರೆಲ್ಲರೂ ಮೊದಲನೇ ತಲೆಮಾರಿನವರು. ಎರಡನೇ ತಲೆಮಾರಿನವರಾದ ಪುರಂದರ, ಯಶವಂತ, ರಾಮ, ರಮಾಕಾಂತ, ರತ್ನ, ಸುನಂದೆ, ಯಮುನೆ ಇವರಿಗೆಲ್ಲಾ ಮೊದಲನೇ ತಲೆಮಾರಿನವರು ಮುದುಕರೇ. ಇವರೆಲ್ಲರ ಗುಣಸ್ವಭಾವಗಳು ಬೇರೆ ಬೇರೆಯಾದರೂ ಯಾರೂ ಒಬ್ಬರ ನಂಬಿಕೆಗಳನ್ನು ಮತ್ತೊಬ್ಬರ ಮೇಲೆ ಹೇರುವುದಿಲ್ಲ. ಗೋದಾವರಿಗೂ ದೇವರಾಯನ ಹೆಂಡತಿ ಕಾವೇರಿಗೂ ಇರುವ ವ್ಯತ್ಯಾಸವನ್ನು ಗಮನಿಸಬಹುದು. ಇವರಿಬ್ಬರ ಗುಣದಲ್ಲಿ ವ್ಯತ್ಯಾಸವಿದೆ. ಗೋದಾವರಿ ಮಾಡುವ ವಿಚಾರಗಳನ್ನು, ಆಕೆ ಮಾಡುವ ಕೆಲಸಗಳನ್ನು ಕಾವೇರಿ ಒಪ್ಪದಿದ್ದರೂ, ಆಕೆಯು ಒಳ್ಳೆಯದನ್ನೆ ಮಾಡುತ್ತಿರಬಹುದೇನೋ ಎಂದು ಸುಮ್ಮನಾಗುತ್ತಾಳೆ. ಪುರುಷೋತ್ತಮ, ದೇವರಾಯ ಇಬ್ಬರಿಗೂ ಅಜಗಜಾಂತರ ವ್ಯತ್ಯಾಸ. ಆದರೂ ಒಬ್ಬರನ್ನೊಬ್ಬರು ಸಹಿಸಿಕೊಂಡು ಕೂಡಿ ಬಾಳುತ್ತಾರೆ. ಈ ಪಾತ್ರಗಳಿಗೆ ಒಂದು ಬಗೆಯ ಸಹಿಷ್ಣುತೆ ಇದೆ. ಈ ಸಹಿಷ್ಣುತೆ ಮಾನವತಾವಾದದ ಒಂದು ಲಕ್ಷಣ.

ವಿವೇಕರ ಮಾನವತಾವಾದ ಮೌನಕ್ರಾಂತಿಯೆನ್ನಬಹುದಾದ ಸಂಘರ್ಷವುಳ್ಳದ್ದು. ಸರಿಕಾಣದ ನಂಬಿಕೆಗಳನ್ನು ಇಲ್ಲಿಯ ಪಾತ್ರಗಳು ಸಾರಾಸಗಟಾಗಿ ಯಾರಿಗೂ ನೋವಾಗದಂತಹ ರೀತಿಯಲ್ಲಿ ಆಚರಣೆಗೆ ತರುತ್ತವೆ. ಇಲ್ಲಿಯ ಮಾನವತಾವಾದ ಪ್ರಗತಿಯ ಕಡೆಗಿನದು. ಎಲ್ಲರೂ ಪ್ರಗತಿಯತ್ತ ಸಾಗಬೇಕೆಂಬುದು ಮಾನವತಾವಾದದ ತಿರುಳು. ಅಂತೆಯೇ ಇಲ್ಲಿನ ಎಲ್ಲ ಪಾತ್ರಗಳು ತುಡಿಯುವುದೂ ಸಹ ಎಲ್ಲರ ಪ್ರಗತಿಗಾಗಿ. ಮಾನವತಾವಾದದಲ್ಲಿ ಸಾಮಾನ್ಯಮನುಷ್ಯ ಕೇಂದ್ರಬಿಂದುವಾಗಿರುತ್ತಾನೆ. ಸಾಮಾನ್ಯ ಮನುಷ್ಯರೇ ಈ ಕಾದಂಬರಿಯಲ್ಲಿ ಪ್ರಧಾನರಾಗಿದ್ದಾರೆ. ಅಸಾಮಾನ್ಯರು ಇಲ್ಲಿಲ್ಲ. ಪುರಂದರ ತೀರಾ ಬಡವ, ಕೆಳವರ್ಗದಿಂದ ಬಂದವನು. ಅವನ ಆಸೆ ಆಕಾಂಕ್ಷೆ, ನಿರಾಶೆ, ಗೊಂದಲ ಇತ್ಯಾದಿಗಳು ಇಲ್ಲಿ ಅನಾವರಣಗೊಂಡಿವೆ.

ವ್ಯಕ್ತಿವಾದಕ್ಕೆ ಈ ಕಾದಂಬರಿ ಹೆಚ್ಚಿನ ಒತ್ತು ಕೊಡುತ್ತದೆ. ಯಾರೋ ಸಿದ್ಧಪಡಿಸಿಟ್ಟ ಆದರ್ಶ ಸಿದ್ಧಾಂತಗಳಿಗಿಂತ ತನ್ನ ಸ್ವಂತ ಅನುಭವದಿಂದ ಕಂಡುಕೊಂಡ ತಿಳುವಳಿಕೆಯ ಮೂಲಕ, ಇಲ್ಲವೇ ತನಗೆ ಸರಿಯೆನಿಸಿದ ಮೌಲ್ಯ, ನಂಬಿಕೆಗಳ ಮೇಲೆ ವಿಶ್ವಾಸವನ್ನಿಟ್ಟುಕೊಂಡೇ ಬದುಕುವ ಪಾತ್ರಗಳು ಇಲ್ಲಿವೆ. ಪುರಂದರ, ರಮಾಕಾಂತ, ಯಮುನೆ, ಪಂಢರಿ ಇವರೆಲ್ಲರೂ ಇಂತಹವರೆ. ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಪ್ರಾಮಾಣಿಕತೆಯ ಒರೆಗಲ್ಲಿಗೆ ಹಚ್ಚಿ ತನ್ನ ಬದುಕನ್ನು ರೂಪಿಸಿಕೊಂಡಾಗ ಅದು ಸಾಮಾಜಿಕ ಒಳಿತಿಗೆ ಕಾರಣವಾಗುತ್ತದೆ ಎಂಬ ನಂಬಿಕೆ ಇವರದು. ಇಂತಹ ನಂಬಿಕೆ ಇರುವ ಪಾತ್ರಗಳನ್ನು ನಾವು ಕನ್ನಡ ಕಾದಂಬರಿ ಪರಂಪರೆಯಲ್ಲಿ ಶಿವರಾಮ ಕಾರಂತರ ಕೃತಿಗಳಲ್ಲಿ ಕಾಣಬಹುದು. ಕಾರಂತರ ಎಲ್ಲ ಕಾದಂಬರಿಗಳ ಪಾತ್ರಗಳು ತಮ್ಮ ಅನುಭವದಿಂದ ಕಂಡುಕೊಂಡ ನಂಬಿಕೆ, ಮೌಲ್ಯಗಳ ಮೇಲೆ ವಿಶ್ವಾಸವಿಟ್ಟುಕೊಂಡು ಬದುಕನ್ನು ಸಾಗಿಸುತ್ತವೆ. ಇಂತಹ ಪಾತ್ರಗಳನ್ನು 'ಒಂದು ಬದಿ ಕಡಲು'ವಿನಲ್ಲಿ ಕಾಣಬಹುದು. ಅಷ್ಟೇ ಏಕೆ, ವಿವೇಕ ಶಾನಭಾಗರ ಕಥೆಗಳಲ್ಲಿ ಬರುವ ಪಾತ್ರಗಳೂ ಕೂಡ ಇದೇ ಬಗೆಯವು. ಶಿವರಾಮ ಕಾರಂತರ 'ಬಾಳ್ವೆಯೆ ಬೆಳಕು' ಕೃತಿಯಲ್ಲಿನ ಈ ಮಾತುಗಳು ಈ ಸಂದರ್ಭದಲ್ಲಿ ಉಲ್ಲೇಖನಾರ್ಹ' :

''ಬಾಳ್ವೆಯ ಪ್ರಶ್ನೆಯು, ಒಬ್ಬರು ಬಾಳಿ, ಇನ್ನೊಬ್ಬರು ಉತ್ತರಿಸಿ, ಮೂರನೆಯವರು ಒಪ್ಪಿ ಸಾಗುವ ಪ್ರಶ್ನೆ ಎಂದೂ ಆಗಲಾರದು. ಅನಿವಾರ್ಯವಾಗಿರುವ ಬಾಳಿನ ರೀತಿಯನ್ನು ಕಂಡರೆ ಅದು ಬಾಳಿ, ಬದುಕಿ, ಅನುಭವಿಸಿ, ಹೋರಾಡಿ, ಪರಿಸ್ಥಿತಿಗಳಿಗೆ ಸಮನಾಗಿ ಹೊಂದಿಕೊಂಡು ಪರಿಣಾಮಗೊಳ್ಳಬೇಕಾದ ಸಮಸ್ಯೆಯೆಂದು ನಮಗೆ ಅನ್ನಿಸುತ್ತದೆ. ಅವನವನ ಜೀವನಕ್ಕೆ ಅವನವನೇ ದುಡಿದು ಉತ್ತರ ಗಳಿಸಬೇಕು. ಅದರಿಂದ ಮಾತ್ರ ಜೀವನ ಸಾರ್ಥಕ. ಹೀಗಾಗಲು

---

ರಸಾಯನ ವಿಜ್ಞಾನದ ಪ್ರಾಧ್ಯಾಪಕರಾಗಿದ್ದ ಡಾ|| ಕೆ. ಶ್ರೀನಿವಾಸನ್ ತಮ್ಮ ೮೭ನೇ ವಯಸ್ಸಿನಲ್ಲಿ ಸೆಪ್ಟೆಂಬರ್ ೨೪ರಂದು ನಿಧನ ಹೊಂದಿದರೆಂದು ಪ್ರಕಟಿಸಲು ವಿಷಾದಿಸುತ್ತೇವೆ. ಭಾರತ ಕಮ್ಯುನಿಸ್ಟ್ ಪಾರ್ಟಿಯ ಹಿತೈಷಿಯೂ, ಬೆಂಬಲಿಗರೂ ಆಗಿದ್ದ ಪ್ರಗತಿಪರ ಚಿಂತಕ ಶ್ರೀನಿವಾಸನ್ ಇವರಿಗೆ 'ಹೊಸತು' ತನ್ನ ಗೌರವಪೂರ್ವಕ ನಮನ ಸಲ್ಲಿಸುತ್ತದೆ.

ಸ್ವಾತಂತ್ರ್ಯ ಹೋರಾಟಗಾರರ ಕುಟುಂಬದಿಂದ ಬಂದ ಶ್ರೀನಿವಾಸನ್ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಮಾರ್ಕ್ಸ್‌ವಾದಿ ಸಿದ್ಧಾಂತದಲ್ಲಿ ಆಸಕ್ತರಾಗಿದ್ದರು. ಕರ್ನಾಟಕದಲ್ಲಿ ಕಮ್ಯುನಿಸ್ಟ್ ಚಳವಳಿ ಪ್ರಾರಂಭದ ಹಂತದಲ್ಲಿದ್ದಾಗ ಅವರು ಸಕ್ರಿಯ ಕಾರ್ಯಕರ್ತರಾಗಿದ್ದರು. ಆಸಕ್ತರನ್ನು ಸೇರಿಸಿ 'ಸ್ಟಡಿ ಸರ್ಕಲ್' ಕಟ್ಟಿ ಮಾರ್ಕ್ಸ್‌ವಾದಿ ಸಿದ್ಧಾಂತವನ್ನು ಬೋಧಿಸುವುದು ಅವರ ಮುಖ್ಯ ಕಾರ್ಯಕ್ಷೇತ್ರವಾಗಿತ್ತು. ಮೈಸೂರಿನಲ್ಲಿ ೧೯೪೦ರ ದಶಕದಲ್ಲಿ ಜರುಗಿದ ವಿದ್ಯಾರ್ಥಿ ಫೆಡರೇಶನ್ ಚಳುವಳಿಯಲ್ಲಿ ಭಾಗವಹಿಸುತ್ತಿದ್ದ ಶ್ರೀನಿವಾಸನ್ ಬೆಂಗಳೂರಿನಲ್ಲಿ ವಿದ್ಯಾರ್ಥಿ ಫೆಡರೇಶನ್ ಸ್ಥಾಪಕರಲ್ಲಿ ಒಬ್ಬರಾಗಿದ್ದರು. ಸಮಾನ ಮನಸ್ಕರನ್ನು ಸೇರಿಸಿ ಮಾರ್ಕ್ಸ್‌ವಾದದ ಅಧ್ಯಯನಕ್ಕಾಗಿ 'ಸ್ಟಡಿ ಸರ್ಕಲ್' ಒಂದನ್ನು ನಡೆಸುತ್ತಿದ್ದರು. 'ಜನಶಕ್ತಿ' ಪತ್ರಿಕೆ ಬೆಂಗಳೂರಿನಿಂದ ಪ್ರಾರಂಭವಾದಾಗ ಅವರು ಅದರ ಸಂಪಾದಕ ಮಂಡಲಿಯ ಸದಸ್ಯರಾಗಿದ್ದರು. 'ಶ್ರೀನಾಥ' ಎಂಬ ಹೆಸರಿನಲ್ಲಿ ಲೇಖನಗಳನ್ನು ಕಿರುಹೊತ್ತಿಗೆಗಳನ್ನು ಬರೆಯುತ್ತಿದ್ದರು. ಇವು ಜನಶಕ್ತಿ ಪ್ರಕಾಶನದಿಂದ ಪ್ರಕಟಗೊಂಡಿದ್ದವು. ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ರಸಾಯನ ವಿಜ್ಞಾನದ ಅಧ್ಯಾಪಕರಾಗಿ ವೃತ್ತಿಯನ್ನು ಆರಂಭಿಸಿದ ಅವರು ಸೇಂಟ್ ಜೋಸೆಫ್ ಕಾಲೇಜು, ವಿ.ವಿ.ಪುರಂ ಕಾಲೇಜುಗಳಲ್ಲಿ ಹಾಗೂ ಟೈಜೀರಿಯದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಅಮೆರಿಕದ ಪೆನ್ಸಿಲ್‌ವೇನಿಯ ಮತ್ತು ಬಫೆಲೋ ವಿಶ್ವವಿದ್ಯಾನಿಲಯಗಳಲ್ಲಿ ಸಂಶೋಧಕರಾಗಿ ಕೆಲಸ ಮಾಡಿದ ಶ್ರೀನಿವಾಸನ್ ನಿವೃತ್ತರಾದ ಮೇಲೆ ಬೆಂಗಳೂರಿನಲ್ಲೇ ನೆಲೆಸಿದ್ದರು. 'ಹೊಸತು' ಪತ್ರಿಕೆಯ ಅಭಿಮಾನಿಯಾಗಿದ್ದ ಅವರು ಅದಕ್ಕೆ ಲೇಖನಗಳನ್ನು ಬರೆದಿದ್ದರು.



ಪ್ರಾಧ್ಯಾಪಕ
ಕೆ. ಶ್ರೀನಿವಾಸನ್

ಬಾಳ್ವೆಯನ್ನು ನಾವು ನಿರಾಕರಿಸದೆ ಮೊದಲಿಗೇ ಒಪ್ಪಬೇಕು. ತಮ್ಮ ಜೀವನದಿಂದಲೇ 'ಜೀವನ ಏನು' ಎಂದು ತಿಳಿಯ ಲೆತ್ನಿಸಬೇಕು. ಅರಿವುಳ್ಳ ಬದುಕು ಸಹಾನುಭೂತಿಯುಳ್ಳ ನಡತೆ ಇವುಗಳಿಂದ ನಮ್ಮ ಬದುಕು ಅರಳಬೇಕು''.

ಈ ಕಾದಂಬರಿಯ ಮತ್ತೊಂದು ಬಹಳ ಮುಖ್ಯವಾದ ಆಯಾಮವೆಂದರೆ ಬದಲಾವಣೆಯನ್ನು ಕುರಿತದ್ದು. ಇದನ್ನು ಸಾಮಾಜಿಕ ಬದಲಾವಣೆಯೆಂದು ಕರೆಯಬಹುದು. ಸಮಾಜವು ನಿಂತ ನೀರಲ್ಲ, ಏಕಮುಖವಾದದ್ದಲ್ಲ ಎಂಬ ಮಾತನ್ನು ಆಗಾಗ್ಗೆ ಕೇಳುತ್ತಿರುತ್ತೇವೆ. ಸಮಾಜವು ಪರಸ್ಪರ ವಿರುದ್ಧ ಹಿತಾಸಕ್ತಿಗಳೊಂದಿಗೆ ಸಂಘರ್ಷಿಸಬೇಕು. ಈ ಸಂಘರ್ಷದಲ್ಲಿ ಅಡೆತಡೆಗಳನ್ನು ಎದುರಿಸಿ ಮುನ್ನುಗ್ಗುವ, ಇಲ್ಲವೇ ಅಸಾಧ್ಯವಾದ ಹೊಡೆತ ಬಿದ್ದು ಹಿಂದೆ ಸರಿಯುವ ಎರಡು ವಿರುದ್ಧ ಪರಿಣಾಮಗಳು ಇವೆ. ಬದಲಾವಣೆಗಳು ಇಡೀ ಸಮಾಜದ ಒಪ್ಪಿಗೆ ಪಡೆಯಬೇಕು. ಅದಾಗದಿದ್ದರೆ ಆ ಬದಲಾವಣೆಯಾಗುವುದಿಲ್ಲ. ಇಂಗ್ಲಿಷ್ ಶಿಕ್ಷಣ ಪ್ರಾರಂಭವಾದದ್ದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ. ಹೀಗಾಗಿ ಕನ್ನಡ ಸಾಹಿತ್ಯದ ಎಲ್ಲ ಪ್ರಯೋಗಗಳು ನಡೆದದ್ದು ದಕ್ಷಿಣ ಕನ್ನಡದಲ್ಲಿ. ಉತ್ತರ ಕನ್ನಡದ ಮೇಲೂ ಇದು ಪ್ರಭಾವ ಬೀರಿದೆ. ಇಂಗ್ಲಿಷ್ ಕಲಿಕೆ ಹಾಗೂ ರಾಜಾರಾಮ್ ಮೋಹನರಾಯ್ ಅವರ ಪ್ರಭಾವ, ಮಂಗಳೂರಿನಲ್ಲಿ ತನ್ನ ಒಂದು ಶಾಖೆಯನ್ನು ಪ್ರಾರಂಭಿಸಿದ್ದ ಆರ್ಯ ಸಮಾಜದ ಪ್ರಭಾವ, ಇವೆಲ್ಲವೂ ಗುಲ್ವಾಡಿ ವೆಂಕಟರಾವ್, ಬೋಳಾರ ಬಾಬುರಾವ್, ಅಣ್ಣಾಜಿರಾವ್ ಇವರುಗಳು ತಮ್ಮ ಕಾದಂಬರಿ, ಲೇಖನ, ಭಾಷಣಗಳಲ್ಲಿ ಸಾಂಪ್ರದಾಯಿಕ ಹಿಂದೂ ಧಾರ್ಮಿಕ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಪ್ರಶ್ನಿಸಿ, ವ್ಯಾಪಕ ಸುಧಾರಣೆಗೆ ಪ್ರಯತ್ನಿಸಿದ್ದರು. 'ಇಂದಿರಾಬಾಯಿ' ಕಾದಂಬರಿಯಿಂದ ಪ್ರಾರಂಭವಾದ ಈ ಸುಧಾರಣಾ ಮನೋಭಾವ ವಿವೇಕ ಶಾನಭಾಗರವರೆಗೂ ಒಂದು ಪ್ರಧಾನ ಧಾರೆಯಂತೆ ಹರಿದುಬಂದಿದೆ. ರಮಾಕಾಂತ ವಿಧವೆ ಯಮುನೆಯನ್ನು ಮದುವೆಯಾಗ ಬೇಕಾದಾಗ ಪುರಂದರನೊಂದಿಗೆ ಹೇಳಿಕೊಳ್ಳುವ ಮಾತುಗಳಿಂದ ವಿಧವಾ ವಿವಾಹಕ್ಕೆ ಸಮಾಜದಲ್ಲಿರುವ ವಿರೋಧ ಎಷ್ಟು ಅಗಾಧ ಪ್ರಮಾಣದ್ದು ಎಂಬುದು ಸ್ಪಷ್ಟವಾಗುತ್ತದೆ. ಈ ವಿರೋಧದ ನಡುವೆಯೂ ಜರುಗುವ ವಿಧವಾ ವಿವಾಹವು ಒಂದು ಬಂಡಾಯವೇ ಆಗಿದೆ. ಹಾಗೂ ಇದು ಸಮಾಜ ಸುಧಾರಣೆಯ ಒಂದು ಭಾಗವಾಗಿದೆ. ರಮಾಕಾಂತನ ಈ ಮಾತುಗಳನ್ನು ಓದಿ :

''ವಿಧವಾ ವಿವಾಹ ಹೊಸದಲ್ಲ. ನಮ್ಮ ದೊಡ್ಡ ದೊಡ್ಡ ನಾಯಕರು, ಎಲ್ಲ ವಿಚಾರವಾದಿಗಳು ಇದನ್ನು ಯಾವಾಗಲೋ ಹೇಳಿದ್ದಾರೆ. ಕೆಲವರು ಮಾಡಿಯೂ ತೋರಿಸಿದ್ದಾರೆ. ನಾನು ಯಾಕೆ ಯಾರಿಗೂ ಹೇಳಿಲ್ಲ ಅಂದರೆ, ಒಂದು ಸಲ ಸುದ್ದಿ ಹೊರಗೆ ಬಿದ್ದರೆ ಆಮೇಲೆ ಅದನ್ನು ನಿಲ್ಲಿಸಲು ನಡೆಯುವ ಸಾವಿರಾರು ಪ್ರಯತ್ನಗಳನ್ನು ದಾಟುವ ಶ್ರಮ ಸಾರ್ಥಕ ಅನ್ನಿಸದೆ ಹೋಗಬಹುದು. ಯಾವ ಯಾವ ರೀತಿಯಿಂದ ಇದನ್ನು ನಿಲ್ಲಿಸಲು ನನ್ನ ಮನೆಯವರು ಮತ್ತು ಸ್ವತಃ ಪಂಢರಿಯಕ್ಕ ಪ್ರಯತ್ನಿಸಬಹುದು ಎಂದು ನನಗೆ ಗೊತ್ತಿದೆ. ಆದರೆ ನಾನು ಒಂದು ದಿವಸ ಅವಳನ್ನು ಮದುವೆಯಾಗಿ ಊರಿನವರ ಬಾಯಿ ಮುಚ್ಚಿಸುತ್ತೇನೆ.''

ಇಲ್ಲಿ ಸಮಾಜದ ಬದಲಾವಣೆಯೆನ್ನುವುದು ಕಣ್ಣಿಗೆ



ಅಲ್ನೋಡಿ ಸಾರ್... ಜೈಲಿಂದ ತಪ್ಪಿಸ್ಕೊಂಡು ಗಾಂಧೀವೇಷದಲ್ಲಿ ನಿಂತಿದ್ದಾನೆ ಕಳ್ಳ...

ರಪನೆ ಹೊಡೆಯುವಂತಹುದಲ್ಲ. ಅದು ತೀವ್ರ ಸ್ವರೂಪದ್ದೂ ಅಲ್ಲ. ಬದಲಾವಣೆಯೆನ್ನುವುದು ಕಣ್ಣಿಗೆ ಕಾಣಿಸದಷ್ಟು ಆಂತರಿಕ ಸ್ವರೂಪದ್ದು, ಮಂದಗಾಮಿಯಾದ ಇಂತಹ ಬದಲಾವಣೆಯನ್ನು ಸೂಕ್ಷ್ಮಗ್ರಾಹಿಯಾದ ಸಂವೇದನಾಶೀಲ ಮನಸ್ಸು ಮಾತ್ರ ಗ್ರಹಿಸುತ್ತದೆ. ಕಾದಂಬರಿಯಲ್ಲಿನ ಸಾಂಪ್ರದಾಯಿಕ ಬದುಕು ಬದಲಾವಣೆಯಾಗುವ ಪರಿಯು ಸೂಕ್ಷ್ಮವಾದ್ದು. ಇದನ್ನು ಒಬ್ಬ ಸಮಾಜಶಾಸ್ತ್ರಜ್ಞ ಗುರುತಿಸಲು ಸಾಧ್ಯವಾಗದಿರುವಂತಹದ್ದು. ಸಮಾಜ ಶಾಸ್ತ್ರಜ್ಞನಿಗೆ ಬೇಕಾಗುವುದು ಅಂಕಿ-ಸಂಖ್ಯೆಗಳು ಮತ್ತು ಭೌತಿಕವಾದ ವಿಧಿವಿಧಾನಗಳು. ಆದರೆ ಕಾದಂಬರಿಕಾರನಿಗೆ ಅಭೌತಿಕವಾದ ವಿಚಾರಗಳ ಮೂಲಕ ಸೂಕ್ಷ್ಮವಾದ ಬದುಕಿನ ಸ್ವರೂಪವನ್ನು ಹಿಡಿದಿಡುವ ಸಾಮರ್ಥ್ಯ ಇರುತ್ತದೆ. ಹಾಗೆ ನೋಡಿದರೆ ಕಾದಂಬರಿ ಹುಟ್ಟಿಕೊಂಡಿದ್ದೇ ಸಾಮಾಜಿಕ ಬದಲಾವಣೆಗಳನ್ನು ಹಿಡಿದಿಡುವುದಕ್ಕಾಗಿ ಎಂದರೆ ತಪ್ಪಲ್ಲ. ಊಳಿಗಮಾನ್ಯ ವ್ಯವಸ್ಥೆ ಕುಸಿದು ಬಂಡವಾಳಶಾಹಿ ವ್ಯವಸ್ಥೆ ರೂಪುಪಡೆಯುತ್ತಿದ್ದ ಸಂದರ್ಭದಲ್ಲಿ ಮಧ್ಯಮ ವರ್ಗದ ಉದಯವಾಯಿತು. ಇಂತಹ ಮಧ್ಯಮ ವರ್ಗದ ಅಗತ್ಯಗಳನ್ನು ಪೂರೈಸುವುದಕ್ಕಾಗಿ ಕಾದಂಬರಿ ಪ್ರಕಾರ ಹುಟ್ಟಿಕೊಂಡಿತು.

ವಿವೇಕ ಶಾನಭಾಗರ ಈ ಕಾದಂಬರಿ ಮೇಲಿನ ಮಾತನ್ನು ಸ್ಪಷ್ಟಪಡಿಸುತ್ತದೆ. ಆಧುನಿಕತೆಯ ಕಡೆಗೆ ಸಾಗುವ ಸಮಾಜದ ಚಲನೆಯ ಸ್ವರೂಪವನ್ನು ಈ ಕಾದಂಬರಿ ಹಿಡಿದಿಟ್ಟಿದೆ. ಆಧುನಿಕತೆ ಮತ್ತು ಸಾಂಪ್ರದಾಯಿಕತೆ ಇವು ಪರಸ್ಪರ ವಿರೋಧಾತ್ಮಕ ಸ್ವರೂಪದ ಪರಿಕಲ್ಪನೆಗಳು. ಆದರೆ ಇವು ಬೇರ್ಪಡಿಸಲು ಸಾಧ್ಯವಾಗದಷ್ಟು ಒಂದೊಕ್ಕೊಂದು ಪೂರಕವಾಗಿಯೂ ಇವೆ. ಏಕೆಂದರೆ ಸಂಪ್ರದಾಯವೇ ಇದ್ದರೆ ಮನುಷ್ಯನ ಬದುಕು ನಿಂತ ನೀರಿನಂತಾಗುತ್ತದೆ. ಅದು ಯಾವತ್ತಿಗೂ ಚಲನಶೀಲ ವಾಗಿರಬೇಕು. ಚಲನಶೀಲತೆ ಇಲ್ಲದ ಸಮಾಜವಾಗಲಿ ಕುಟುಂಬವಾಗಲಿ ಇರುವುದೇ ಇಲ್ಲ. ಅದು ಆಧುನೀಕರಣಕ್ಕೆ, ಹೊಸ ಮೌಲ್ಯಗಳಿಗೆ, ಹೊಸ ಆಚಾರ-ವಿಚಾರಗಳಿಗೆ ಹೊಂದಿಕೊಳ್ಳುತ್ತಲೇ ಇರುತ್ತದೆ. ಇರಬೇಕು ಕೂಡ. ಆಧುನಿಕತೆಯು ತನ್ನ ಸಂಪರ್ಕಕ್ಕೆ ಬಂದಿರುವ ಪ್ರತಿಯೊಂದು ಸಮಾಜದಲ್ಲಿಯೂ ಪ್ರತಿಯೊಬ್ಬ ಮನುಷ್ಯ ನಲ್ಲಿಯೂ ಒಂದೇ ಬಗೆಯ ಸಾಂಸ್ಕೃತಿಕ ಪರಿಣಾಮಗಳಿಗೆ ಕಾರಣವಾಗುತ್ತದೆ ಎನ್ನುವಂತಿಲ್ಲ. ಆಧುನೀಕರಣದ ಪ್ರಕ್ರಿಯೆಯು ಸಾಂಪ್ರದಾಯಿಕತೆಗಿಂತಲೂ ಗತಿಶೀಲವಾದ್ದು ಮತ್ತು ಸ್ಥಿತಿಸ್ಥಾಪಕತ್ವವುಳ್ಳದ್ದು. ಎಲ್ಲಾ ಬಗೆಯ ಅರ್ಥಹೀನ ನಂಬಿಕೆ, ಆಚರಣೆ, ಮೌಲ್ಯಗಳನ್ನು ಕಿತ್ತೆಸೆಯುತ್ತಾ ಮನುಷ್ಯ ಮುನ್ನುಗ್ಗಿ ತನ್ನ ಬದುಕನ್ನು ರೂಪಿಸಿಕೊಳ್ಳುತ್ತಾನೆ. ಈ ಕಾದಂಬರಿಯ ಪ್ರಮುಖ ಪಾತ್ರಗಳು ಮಾಡುವುದು ಇದನ್ನೆ.

'ಒಂದು ಬದಿ ಕಡಲು' ಕಾದಂಬರಿ ಮಾವಿನ ಮರದಿಂದ ಬೀಳುವ ಕಾಯಿಗಳನ್ನು ಆರಿಸಿಕೊಳ್ಳುವುದ ರೊಂದಿಗೆ ಪ್ರಾರಂಭವಾಗಿ ಮಾವಿನಕಾಯಿಗಳನ್ನು ಮರದಿಂದ ಕಿತ್ತು ಕೆಳಗೆ ಹಾಕಿದಾಗ ಹಿಡಿದುಕೊಳ್ಳುವುದರೊಂದಿಗೆ ಮುಕ್ತಾಯವಾಗುತ್ತದೆ. ಮಾವಿನ ಮರ ಇಲ್ಲಿ ಸಾಂಕೇತಿಕವಾಗಿ ಬಂದಿದೆ. ಮಾವು ಫಲವಂತಿಕೆಯ ಸಂಕೇತ. ಮಕ್ಕಳಿಲ್ಲದ ದಂಪತಿಗಳು, ಋಷಿಗಳು, ಅತಿಮಾನುಷ ವ್ಯಕ್ತಿಗಳು ಇತ್ಯಾದಿಯವರು ಕೊಟ್ಟ ಮಾಂತ್ರಿಕ ಮಾವಿನ ಹಣ್ಣನ್ನು ಸೇವಿಸಿ ಬಂಜೆತನವನ್ನು ಕಳೆದುಕೊಳ್ಳುವುದು ಬಹಳಷ್ಟು ಜನಪದ ಕತೆಗಳಲ್ಲಿ ಬರುತ್ತದೆ. ಇದನ್ನು ವೃಕ್ಷಗಳ ರಾಜ ಎಂದು ಕರೆಯುತ್ತಾರೆ. ಶಿಷ್ಟ ಕವಿಗಳು ಕೋಗಿಲೆಗೂ ಮಾವಿನ ಮರಕ್ಕೂ, ಮಲ್ಲಿಗೆಗೂ ಮಾವಿನ ಮರಕ್ಕೂ ನಂಟನ್ನು ಕಲ್ಪಿಸಿದ್ದಾರೆ. ಬಟ್ಟೆ, ಒಡವೆಗಳ ರಚನೆ, ಚಿತ್ರಕಲೆ, ವರ್ಣಚಿತ್ರ ಇತ್ಯಾದಿಗಳಲ್ಲಿ ಮಾವಿನ ಹಣ್ಣಿನ ವಿನ್ಯಾಸವನ್ನು ಕಾಣಬಹುದು. ಬಲ ಮತ್ತು ವೀರ್ಯವೃದ್ಧಿಗಾಗಿ ಹಣ್ಣನ್ನು ರಸ ಮಾಡಿ ಹಾಲಿನೊಂದಿಗೆ ಬೆರೆಸಿ ಕುಡಿಯುವುದುಂಟು. ಮಾವಿನ ಎಲೆ, ತೊಗಟೆ, ಹೂ, ಕಾಯಿ, ಹಣ್ಣು, ಬೀಜ, ಬೇರು ಇವುಗಳೆಲ್ಲವೂ ಔಷಧೀಯ ಗುಣ ಹೊಂದಿವೆ. ಜನಪದ ಕತೆ ಕಾವ್ಯಗಳಲ್ಲಾಗಲಿ, ಕನ್ನಡ ಶಿಷ್ಟ ಕವಿಗಳಾಗಲಿ ತಮ್ಮ ತಮ್ಮ ಕೃತಿಗಳಲ್ಲಿ ಮಾವನ್ನು ಸಾಂಕೇತಿಕವಾಗಿ ಬಳಸಿದ್ದಾರೆ. ಮಾವು ಪ್ರಗತಿಯ ಜೀವ ಚೈತನ್ಯವನ್ನು ಉಕ್ಕಿಸುವ, ಜೀವ ಸಮೃದ್ಧಿಗೆ ಸಂಕೇತವಾಗಿ ಈ ಕಾದಂಬರಿಯಲ್ಲಿ ಬಂದಿದೆ.

ಈ ಕಾದಂಬರಿಯು ವಾಸ್ತವವಾದಿ ಮಾರ್ಗದಲ್ಲಿ ರಚನೆಯಾಗಿದೆ. ಮಾನವತಾವಾದಿ ದೃಷ್ಟಿಕೋನದಿಂದ ಗ್ರಹಿಸಿದ ಸಾಮಾಜಿಕ ಬದಲಾವಣೆಯನ್ನು ವಾಸ್ತವವಾದಿ ತಂತ್ರದಿಂದ ನಿರೂಪಿಸುವ ಮಾದರಿಯ ಕಾದಂಬರಿ ಇದು. ವಾಸ್ತವವಾದದಲ್ಲಿ ಸಾಮಾನ್ಯರ ಜೀವನಕ್ಕೆ, ಅವರ ದೈನಂದಿನ ಬದುಕಿನ ವಿವರಗಳಿಗೆ ಮಹತ್ವವಿರುತ್ತದೆ. ತಂತ್ರದಲ್ಲಿ ಸಂಕೀರ್ಣತೆ ಇರುವುದಿಲ್ಲ. ಯಾವುದೇ ರೀತಿಯ ವೈಭವೀಕರಣ, ಉತ್ಪ್ರೇಕ್ಷೆ ಇಲ್ಲದೆ ಬದುಕಿನ ವಿವರಗಳನ್ನು ಅವುಗಳನ್ನು ಇರುವ ಹಾಗೆಯೇ ಚಿತ್ರಿಸ ಲಾಗುತ್ತದೆ. ಇಲ್ಲಿ ವಿವರಗಳೇ ಅರ್ಥವನ್ನು ಧ್ವನಿಸುತ್ತವೆ. ಅರ್ಥವು ವಿವರಗಳಲ್ಲಿದೆ. ವಾಸ್ತವವಾದ, ಮಾನವತಾವಾದ ಹಾಗೂ ಆಧುನಿಕತೆ ಇವು ಒಂದರೊಡನೊಂದು ಬೆರೆತುಕೊಂಡಿರುವ ಈ ಕಾದಂಬರಿಯು ಶಿವರಾಮ ಕಾರಂತರ ಪರಂಪರೆಯ ಮುಂದುವರಿಕೆಯಾಗಿದೆ.

**ಎಚ್. ದಂಡಪ್ಪ ಕೊಂಡ್ರಹಳ್ಳಿ**
ನಂ. ೫೭೨೧, 'ಶ್ರೇಯಸ್', ೨ನೇ ಅಡ್ಡರಸ್ತೆ, ಯುಪಿಸಿಬಿ ಲೇಔಟ್
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

ಲ್ಯಾಟಿನ್ ಅಮೆರಿಕಾದ ಅತಿ ದೊಡ್ಡ ದೇಶ ಬ್ರೆಜಿಲ್ ಮತ್ತು ಬೊಲಿವಿಯಗಳಲ್ಲೂ ಎಡಪಕ್ಷಗಳು ವಿಜಯಗಳಿಸಿ ಪ್ರಗತಿ ಸಾಧಿಸುತ್ತಿವೆ. ಅಮೆರಿಕಾ ಈ ದೇಶಗಳ ಮೇಲೆ ಹೇರಲು ಬಯಸಿದ್ದ ಏಕಮುಕ್ತ ಮಾರುಕಟ್ಟೆ ಪ್ರಸ್ತಾಪವನ್ನು ತಿರಸ್ಕರಿಸಿ, ಲ್ಯಾಟಿನ್ ಅಮೆರಿಕಾ ಇಂದು ಪರ್ಯಾಯ ವ್ಯವಸ್ಥೆಯೊಂದನ್ನು ರೂಪಿಸಿದ್ದು, ಇತರ ಅಭಿವೃದ್ಧಿಶೀಲ ದೇಶಗಳಿಗೆ ಮಾದರಿಯಾಗುತ್ತಿದೆ. ಅಮೆರಿಕಾದ ಆರ್ಥಿಕ ಕಪಿಮುಷ್ಟಿಯಿಂದ ಕಳಚಿಕೊಂಡಿದ್ದರಿಂದಲೇ ಲ್ಯಾಟಿನ್ ಅಮೆರಿಕಾದ ಸಮಾಜವಾದಿ ಪಕ್ಷದ ನೇತೃತ್ವದ ದೇಶಗಳ ಮೇಲೆ ಈಚಿನ ಆರ್ಥಿಕ ಕುಸಿತದ ಪರಿಣಾಮ ಅಷ್ಟು ತೀವ್ರವಾಗಲಿಲ್ಲ. ಕೆರಿಬಿಯನ್‌ನ ಸಮಾಜವಾದಿ ರಾಷ್ಟ್ರ ಕ್ಯೂಬಾದೊಂದಿಗೆ ನಿಕಟ ಸಂಬಂಧ ಸ್ಥಾಪಿಸಿಕೊಂಡಿರುವ ವೆನಿಜ್ಯುವೇಲ ಮೊದಲಾದ ದೇಶಗಳು ಒಂದು ದಶಕದ ಅವಧಿಯಲ್ಲಿ ಸಾಕಷ್ಟು ಸುಧಾರಣೆಗಳನ್ನು ಜಾರಿಗೆ ತಂದಿವೆ.



# ದಕ್ಷಿಣ ಅಮೆರಿಕಾ : ಸಮಾಜವಾದಿಗಳ ಮುನ್ನಡೆ

ದಕ್ಷಿಣ ಅಮೆರಿಕಾದ ದೇಶಗಳಲ್ಲಿ ಕಳೆದ ಶತಮಾನದ ಕೊನೆಯಲ್ಲಿ ಪ್ರಾರಂಭವಾದ ಸಮಾಜವಾದಿಗಳ ಮುನ್ನಡೆ ಏಕಪ್ರಕಾರವಾಗಿದೆ. ಅಮೆರಿಕಾದ ಸಂಯುಕ್ತ ಸಂಸ್ಥಾನಗಳ ನೆರಳಿನಲ್ಲಿ 'ಬನಾನ ರಿಪಬ್ಲಿಕ್ಸ್' ಎಂದು ಕರೆಸಿಕೊಂಡು ಬಹುರಾಷ್ಟ್ರೀಯ ಕಂಪೆನಿಗಳಿಂದ ತೀವ್ರವಾದ ಶೋಷಣೆಗೀಡಾಗಿದ್ದ ದೇಶಗಳು ಒಂದೊಂದಾಗಿ ದೃಢವಾದ ಪ್ರಗತಿಯ ಹಾದಿಯಲ್ಲಿ ಅಡಿಯಿರಿಸಿವೆ. ೧೯೯೮ರಲ್ಲಿ ವೆನಿಜ್ಯುವೇಲದಲ್ಲಿ ಚಾವೆಜ್ ನೇತೃತ್ವದಲ್ಲಿ ಪ್ರಾರಂಭವಾದ ಸಮಾಜವಾದಿ ಪಾರ್ಟಿಯ ವಿಜಯದ ಪರಿಣಾಮ ಇತರ ದೇಶಗಳಿಗೂ ಹರಡಿದೆ. ಲ್ಯಾಟಿನ್ ಅಮೆರಿಕಾದ ಅತಿ ದೊಡ್ಡ ದೇಶ ಬ್ರೆಜಿಲ್ ಮತ್ತು ಬೊಲಿವಿಯಗಳಲ್ಲೂ ಎಡಪಕ್ಷಗಳು ವಿಜಯಗಳಿಸಿ ಪ್ರಗತಿ ಸಾಧಿಸುತ್ತಿವೆ. ಅಮೆರಿಕಾ ಈ ದೇಶಗಳ ಮೇಲೆ ಹೇರಲು ಬಯಸಿದ್ದ ಏಕಮುಕ್ತ ಮಾರುಕಟ್ಟೆ ಪ್ರಸ್ತಾಪವನ್ನು ತಿರಸ್ಕರಿಸಿ, ಲ್ಯಾಟಿನ್ ಅಮೆರಿಕಾ ಇಂದು ಪರ್ಯಾಯ ವ್ಯವಸ್ಥೆಯೊಂದನ್ನು ರೂಪಿಸಿದ್ದು, ಇತರ ಅಭಿವೃದ್ಧಿಶೀಲ ದೇಶಗಳಿಗೆ ಮಾದರಿಯಾಗುತ್ತಿವೆ. ಅಮೆರಿಕಾದ ಆರ್ಥಿಕ ಕಪಿಮುಷ್ಟಿಯಿಂದ ಕಳಚಿಕೊಂಡಿದ್ದರಿಂದಲೇ ಲ್ಯಾಟಿನ್ ಅಮೆರಿಕಾದ ಸಮಾಜವಾದಿ ಪಕ್ಷದ ನೇತೃತ್ವದ ದೇಶಗಳ ಮೇಲೆ ಈಚಿನ ಆರ್ಥಿಕ ಕುಸಿತದ ಪರಿಣಾಮ ಅಷ್ಟು ತೀವ್ರವಾಗಲಿಲ್ಲ. ಕೆರಿಬಿಯನ್‌ನ ಸಮಾಜವಾದಿ ರಾಷ್ಟ್ರ ಕ್ಯೂಬಾದೊಂದಿಗೆ ನಿಕಟ ಸಂಬಂಧ ಸ್ಥಾಪಿಸಿಕೊಂಡಿರುವ ವೆನಿಜ್ಯುವೇಲ ಮೊದಲಾದ ದೇಶಗಳು ಒಂದು ದಶಕದ ಅವಧಿಯಲ್ಲಿ ಸಾಕಷ್ಟು ಸುಧಾರಣೆಗಳನ್ನು ಜಾರಿಗೆ ತಂದಿವೆ. ಬಡಜನರಿಗೆ ಒತ್ತಾಸೆಯಾಗಿರುವ ಕಾರ್ಯಕ್ರಮಗಳನ್ನು ರೂಪಿಸಿ ಬಡತನದ ಸಂಖ್ಯೆಯನ್ನು ಕಡಿಮೆ ಮಾಡಿವೆ. ಉತ್ತಮವಾದ ಆಡಳಿತೆಯನ್ನು ನೀಡಿ, ಜನತೆಯ ಬೆಂಬಲ ಗಳಿಸಿ ಅಧಿಕಾರವನ್ನು ದೃಢಪಡಿಸಿಕೊಂಡಿವೆ.



೨೦೧೦ರ ಸೆಪ್ಟೆಂಬರ್ ತಿಂಗಳ ಅಂತ್ಯದಲ್ಲಿ ವೆನಿಜ್ಯುವೇಲದ ಪಾರ್ಲಿಮೆಂಟಿಗೆ ಮತ್ತು ಪ್ರಾಂತೀಯ ಶಾಸನಸಭೆಗಳಿಗೆ ನಡೆದ ಚುನಾವಣೆಗಳಲ್ಲಿ ಸಮಾಜವಾದಿ ಪಕ್ಷ ಶೇಕಡ ೬೦ಕ್ಕೂ ಹೆಚ್ಚು ಮತಗಳಿಸಿ ಜಯಭೇರಿ ಬಾರಿಸಿದೆ. ಅಧ್ಯಕ್ಷ ಹ್ಯೂಗೊ ಚಾವೆಜ್ ನೇತೃತ್ವದಲ್ಲಿರುವ ವೆನಿಜ್ಯುವೇಲದ ಯುನೈಟೆಡ್ ಸೋಷಲಿಸ್ಟ್ ಪಾರ್ಟಿ ೧೬೫ ಮಂದಿ ಸದಸ್ಯರಿರುವ ಪಾರ್ಲಿಮೆಂಟಿನಲ್ಲಿ ೧೦೦ ಸ್ಥಾನಗಳಲ್ಲಿ ಜಯಗಳಿಸಿದೆ. ದೇಶದ ೨೦ ಪ್ರಾಂತಗಳ ಶಾಸನಸಭೆಗಳಲ್ಲಿ ೧೭ರಲ್ಲಿ ಬಹುಮತಗಳಿಸಿವೆ. ಉಳಿದ ಮೂರರ ಫಲಿತಾಂಶ ಇನ್ನೂ ಬಂದಿಲ್ಲ. ಇನ್ನೆರಡು ವರ್ಷಗಳಲ್ಲಿ, ಎಂದರೆ ೨೦೧೨ರಲ್ಲಿ ಅಧ್ಯಕ್ಷೀಯ ಚುನಾವಣೆಗಳು ನಡೆಯಲಿವೆ. ವೆನಿಜ್ಯುವೇಲ ಕಳೆದ ಹನ್ನೆರಡು ವರ್ಷಗಳಲ್ಲಿ ಹಲವು ಕ್ಷೇತ್ರಗಳಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದೆ. ಕಡುಬಡವರ ಪ್ರಮಾಣ ಒಟ್ಟು ಜನಸಂಖ್ಯೆಯ ೨೦೦೩ರಲ್ಲಿ ಶೇಕಡ ೨೯.೮ ಇದ್ದುದು ೨೦೦೯ರ ವೇಳೆಗೆ ಶೇಕಡ ೭.೨ಕ್ಕೆ ಇಳಿದಿದೆ. ನಿರುದ್ಯೋಗದ ಪ್ರಮಾಣ ಅರ್ಧದಷ್ಟು ಇಳಿದಿದೆ. ನಿರಕ್ಷರತೆಯನ್ನು ಸಂಪೂರ್ಣವಾಗಿ ತೊಡೆದುಹಾಕಲಾಗಿದೆ. ವಿಶ್ವವಿದ್ಯಾನಿಲಯಗಳಿಗೆ ಹೋಗುವವರ ಸಂಖ್ಯೆ ಶೇಕಡ ೧೯.೩ರಷ್ಟು ಹೆಚ್ಚಾಗಿದೆ. ಪರಿಪೂರ್ಣವಾದ ಭೂ ಸುಧಾರಣೆಗಳನ್ನು ಜಾರಿಗೆ ತಂದು ರೈತರ ಏಳಿಗೆಯನ್ನು ಸಾಧಿಸಲಾಗಿದೆ. ಕ್ಯೂಬಾದ ವೈದ್ಯರುಗಳ ನೆರವಿನಿಂದ ಉಚಿತ ವೈದ್ಯಕೀಯ ಸೇವಾ ಸೌಲಭ್ಯವನ್ನು ಕಲ್ಪಿಸಲಾಗಿದೆ.

ಒಂದು ದಶಕದ ಅವಧಿಯಲ್ಲಿ ಇಷ್ಟೆಲ್ಲ ಸಾಧನೆ ಮಾಡಿರುವ ಪಕ್ಷಕ್ಕೆ ಜನತೆ ಬೆಂಬಲ ನೀಡುತ್ತಿರುವುದು ಅತಿಶಯವೇನಲ್ಲ. ಕಳೆದ ಬಾರಿ ಪಾರ್ಲಿಮೆಂಟಿಗೆ ಚುನಾವಣೆಗಳಾದಾಗ ವಿರೋಧ ಪಕ್ಷಗಳು, ಅಂದರೆ ಡೆಮಾಕ್ರಟಿಕ್ ಯೂನಿಟಿ ಮೂವ್‌ಮೆಂಟ್ ಎಂಬ ಸಮ್ಮಿಶ್ರ ಕೂಟ ಭಾಗವಹಿಸಲಿಲ್ಲ. ಈ ಬಾರಿ ಅವು ದೊಡ್ಡ ಪ್ರಮಾಣದಲ್ಲಿ ಸ್ಪರ್ಧಿಸಿತ್ತಲ್ಲದೆ, ಸಾಕಷ್ಟು ಬಿರುಸಿನ ಪ್ರಚಾರವನ್ನು ನಡೆಸಿದ್ದುವು. ಅಮೆರಿಕಾ ವಿರೋಧ ಪಕ್ಷಗಳಿಗೆ ನ್ಯಾಷನಲ್ ಎಂಡೋಮೆಂಟ್ ಫಾರ್ ಡೆಮಾಕ್ರಸಿ ಎಂಬ ಸಂಸ್ಥೆಯ ನಿಧಿಯಿಂದ ಹಾಗೂ ಇತರ ಏಜನ್ಸಿಗಳ ಮೂಲಕ ಡಾಲರುಗಳ ಹೊಳೆ ಹರಿಸಿತ್ತು. ಸುಮಾರು ೪೦-೫೦ ಮಿಲಿಯ ಡಾಲರುಗಳನ್ನು ಚುನಾವಣೆಯಲ್ಲಿ ವಿನಿಯೋಗಿಸಿತ್ತು. ಖಾಸಗಿ ಟಿವಿ ಚಾನೆಲ್‌ಗಳು, ಪತ್ರಿಕೆಗಳು ಅಬ್ಬರದ ಪ್ರಚಾರ ನಡೆಸಿದ್ದುವು. ಆದರೆ ಅದಾವುದೂ ಫಲಕಾರಿಯಾಗಲಿಲ್ಲ.

ದಕ್ಷಿಣ ಅಮೆರಿಕಾದ ಅತಿ ದೊಡ್ಡ ದೇಶ ಬ್ರೆಜಿಲ್‌ನಲ್ಲಿ ಈಗ ಅಧ್ಯಕ್ಷೀಯ ಚುನಾವಣೆಯ ಭರಾಟೆ. ಅಧ್ಯಕ್ಷ ಲೂಯಿ ಇನಾಸಿಯೊ ಲೂಲ ಡಿಸಿಲ್ವಾ ನೇತೃತ್ವದಲ್ಲಿರುವ ಎಡಪಕ್ಷ ವರ್ಕರ್ಸ್ ಪಾರ್ಟಿಯ ಅಭ್ಯರ್ಥಿಯಾಗಿ ದಿಲ್ಮಾ ರೊವುಸೆಫ್ ನಿಂತಿದ್ದಾರೆ. ಈಕೆ ಎಡಪಂಥೀಯ ಕ್ರಾಂತಿಕಾರಿ. ೧೯೭೦ರ ದಶಕದಲ್ಲಿ ಸರ್ವಾಧಿಕಾರದ ವಿರುದ್ಧದ ಹೋರಾಟದಲ್ಲಿ ಪೊಲೀಸರಿಂದ ಹಿಂಸೆಗೀಡಾದವರು ಮತ್ತು ಸರಕಾರಿ ಅಧಿಕಾರಿಯಾಗಿದ್ದವರು. ಚುನಾವಣೆಯ ಮೊದಲ ಸುತ್ತಿನಲ್ಲಿ ಶೇಕಡ ೪೭ರಷ್ಟು ಮತಗಳಿಸಿದ್ದಾರೆ. ವಿಜಯಗಳಿಸಲು ಕನಿಷ್ಠ ಶೇಕಡ ೫೦ರಷ್ಟು ಮತಗಳಿಸಬೇಕು. ಎರಡನೇ ಸುತ್ತಿನ ಮತದಾನ ಅಕ್ಟೋಬರ್ ತಿಂಗಳ ಅಂತ್ಯದಲ್ಲಿ ನಡೆಯಲಿದೆ. ಇದರಲ್ಲಿ ಆಕೆ ಜಯಗಳಿಸುವುದು ಖಚಿತ.

ಬ್ರೆಜಿಲ್ ಐಎಂಎಫ್ ಮತ್ತು ವರ್ಲ್ಡ್ ಬ್ಯಾಂಕ್‌ಗಳ ಸಾಲದ ಮಡುವಿನಲ್ಲಿ ಮುಳುಗಿ, ಆರ್ಥಿಕವಾಗಿ ದಿವಾಳಿಯ ಅಂಚಿನಲ್ಲಿದ್ದ ದೇಶ. ಲೂಲಾ ಆಡಳಿತೆಯಲ್ಲಿ ಜಾರಿಗೆ ತಂದ ಸುಧಾರಣೆಗಳ ಫಲವಾಗಿ ಅದು ಇಂದು ಆರ್ಥಿಕವಾಗಿ ಚೇತರಿಸಿಕೊಂಡು ಶೇಕಡ ೭.೫ರಷ್ಟು ಪ್ರಮಾಣದಲ್ಲಿ ಅಭಿವೃದ್ಧಿ ಸಾಧಿಸಿದೆ. ಸಮಾಜವಾದಿ ಪಥವನ್ನು ಆಯ್ಕೆ ಮಾಡಿಕೊಂಡಿರುವ ವರ್ಕರ್ಸ್ ಪಾರ್ಟಿಯ ನೇತೃತ್ವದಲ್ಲಿರುವ ಲೂಲಾ ತೈಲೋದ್ಯಮದಿಂದ ಬರುತ್ತಿರುವ ಆದಾಯದ ಬಹುಪಾಲನ್ನು ಬಡತನ ನಿವಾರಣೆಗಾಗಿ ಬಳಸುತ್ತಿದ್ದಾರೆ. ಇದರಿಂದ ಹತ್ತಾರು ಲಕ್ಷ ಬಡಜನರಿಗೆ ಪ್ರಯೋಜನವಾಗಿದೆ. ಆರ್ಥಿಕ ಮುನ್ನಡೆಗಾಗಿ ಹಲವು ಕ್ರಮಗಳನ್ನು ಸರಕಾರ ಕೈಗೊಂಡಿದೆ. ಹಾಗಾಗಿ, ಪಕ್ಷಕ್ಕೆ ಜನಬೆಂಬಲವಿದೆ. ಎರಡನೇ ಸುತ್ತಿನ ಮತದಾನದಲ್ಲಿ ವರ್ಕರ್ಸ್ ಪಾರ್ಟಿಯ ದಿಲ್ಮಾ ರೊವೂಸೆಫ್‌ಗೆ ಜಯವಾಗಲಿ ಎಂದು ಹಾರೈಸೋಣ.

**ಸೀಯಾರ್ಕೆ**

'ಚೌಜೀಸ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್

ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ವಸಾಹತುಶಾಹಿ ಇತಿಹಾಸ ಮತ್ತು ಚರಿತ್ರೆಯ ವಾಸ್ತವ

## ವಿಜಯನಗರ ಸಾಮ್ರಾಜ್ಯದ ಕುರಿತು ಒಂದು ಇಣುಕುನೋಟ

ಡಾ|| ಬಾರ್ಕೂರು ಉದಯ

ಬ್ರಿಟಿಷರ ಅಜೆಂಡಾದಲ್ಲಿ ಯಾವುದೇ ಕಾರಣಕ್ಕೂ ಹಿಂದೂ ಮತ್ತು ಮುಸ್ಲಿಂ ಸಮುದಾಯಗಳು ಒಂದಾಗಬಾರದು, ಅವರ ನಡುವೆ ಅಂತರವಿದ್ದರೆ ಮಾತ್ರ ತಮ್ಮ ಪ್ರಭುತ್ವಕ್ಕೆ ಸಂಘಟಿತ ವಿರೋಧ ವ್ಯಕ್ತವಾಗುವುದಿಲ್ಲ ಎಂಬ ನಂಬಿಕೆ ಗಟ್ಟಿಯಾಗಿ ನೆಲೆಯೂರಿತ್ತು. ಈ ಅಭಿಪ್ರಾಯದಲ್ಲಿ ವಿಜಯನಗರದ ಅರಸರಿಗೆ ಹಿಂದೂ ರಾಷ್ಟ್ರೀಯತೆ ಪ್ರೇರಣೆ ನೀಡಿದೆ ಎಂದು ಗ್ರಹಿಸಲಾಗಿದ್ದು, ಇವತ್ತಿನ ಹಿಂದೂ ರಾಷ್ಟ್ರೀಯವಾದ ಗತಕಾಲದಲ್ಲೂ ನಡೆದಿತ್ತು ಎಂದು ಸಮರ್ಥಿಸುವ ಹುನ್ನಾರ ಕಾಣುತ್ತದೆ.

ಒಂದನೆಯದಾಗಿ, ವಿಜಯನಗರ ಸಾಮ್ರಾಜ್ಯವನ್ನು ಇಸ್ಲಾಂ ಧರ್ಮದ ವಿರುದ್ಧ ಹಿಂದೂ ಧರ್ಮವನ್ನು ರಕ್ಷಿಸುವ ಅನಿವಾರ್ಯತೆ ಇತ್ತು ಎಂದು ಹೇಳುವುದು ಇತಿಹಾಸ ರಚನಾ ಕ್ರಮಕ್ಕೆ ವಿರುದ್ಧವಾಗುತ್ತದೆ. ಏಕೆಂದರೆ ಅದೊಂದು ಆಕಸ್ಮಿಕ ಹಾಗೂ ಪ್ರಾದೇಶಿಕ ಬೆಳವಣಿಗೆಯ ಫಲಿತಾಂಶವಾಗಿತ್ತು. ಜೊತೆಗೆ ವಿಜಯನಗರ ಸಾಮ್ರಾಜ್ಯದ ಪ್ರಭುತ್ವವನ್ನು ವಿಸ್ತರಿಸುವಲ್ಲಿ ಪ್ರಬಲ ಪ್ರತಿಸ್ಪರ್ಧಿಯಾಗಿ ಸವಾಲಾಗಿ ನಿಂತಿದ್ದು ಬಹಮನಿ ದೊರೆಗಳಲ್ಲ. ಬದಲು, ಒರಿಸ್ಸಾದ ಗಜಪತಿ ಸಾಮ್ರಾಟರು, ಹಿಂದೂ ಅರಸರು. ಮುಖ್ಯವಾಗಿ ವಿಜಯನಗರ ಕಾಲದ ವಾಸ್ತುಶಿಲ್ಪಗಳನ್ನು ಗಮನಿಸಿದರೆ, ಮುಸ್ಲಿಂ ಅರಸರ ವಾಸ್ತುಶೈಲಿ ಮತ್ತು ಇಸ್ಲಾಂ ನಾಗರಿಕತೆಯು ವಾಸ್ತುಶಿಲ್ಪದ ಮೇಲೆ ಹೆಚ್ಚು ಪ್ರಭಾವ ಬೀರಿದೆ ಎಂದು ಭಾಸವಾಗುತ್ತದೆ.

ಎರಡನೆಯದಾಗಿ, ವಿಜಯನಗರದ ಅರಸರು ಎಂದೂ ತಾವು ಹಿಂದೂ ಧರ್ಮದ ಉಳಿವಿಗಾಗಿ ಹೋರಾಡಬೇಕು ಎಂಬ ಧೋರಣೆಯನ್ನಾಗಲಿ, ದಕ್ಷಿಣ ಭಾರತದ ರಕ್ಷಣೆ ಮಾಡಬೇಕೆಂಬ ನಿಲುವನ್ನಾಗಲಿ ಇಟ್ಟುಕೊಂಡು ರಾಜ್ಯಾಡಳಿತ ನಡೆಸಿದರು ಎಂದು ವಾದಿಸಲಾಗದು. ವಿಜಯನಗರದ ಅರಸರು ನೀತಿವಂತ ರಾಜರಾಗಿ, ಈ ಹಿಂದೆ ಆಳ್ವಿಕೆ ನಡೆಸಿದ ಆಳರಸರ ಆದರ್ಶವನ್ನು ಪಾಲಿಸಿ, ಧರ್ಮಕ್ಕನುಸಾರವಾಗಿ ಆಡಳಿತ ನಡೆಸಿ ಆ ಕಾಲದ ಜನರ ಬೆಂಬಲ ಪಡೆದಿದ್ದರು. ಇಲ್ಲಿ ಧರ್ಮವೆಂಬ ಪದವನ್ನು ಬಳಸಿದಾಗ ಈಗ ಬಳಕೆಯಾಗುವ ಮತಧರ್ಮಕ್ಕೆ ಸಂಬಂಧಿಸಿದ್ದಲ್ಲ. ಅವರು ಪಾಲಿಸಿದ್ದು ಆ ಕಾಲದ ರಾಜಧರ್ಮವನ್ನು. ಅವರ ಕಾಲದ ಸೈನ್ಯದಲ್ಲಿ ಅನೇಕ ಮಂದಿ ಬಿಲ್ಲು ವಿದ್ಯೆಯಲ್ಲಿ ಪ್ರಾವೀಣ್ಯತೆ ಪಡೆದ ಮುಸ್ಲಿಮರಿದ್ದರು. ಅವರು ಆಡಳಿತದಲ್ಲಿ ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದರು. ಒಂದು ಸಮುದಾಯವನ್ನು ಓಲೈಸುವುದಾಗಲಿ, ದೂರವಿಡುವ ಸಣ್ಣತನವಾಗಲಿ ಆ ಕಾಲದ ರಾಜರು ಪಾಲಿಸಲಿಲ್ಲ. ಅದು ಆ ನೆಲದ ಗೌರವವನ್ನು, ಸಂಪ್ರದಾಯವನ್ನು ಎತ್ತಿಹಿಡಿಯುವ ಧರ್ಮ. ಎಲ್ಲ ಧರ್ಮದವರನ್ನು, ಪಂಥದವರನ್ನು ಸಮಾನವಾಗಿ ನೋಡಿಕೊಂಡು ಆಡಳಿತ ನಡೆಸುವುದೇ ರಾಜಧರ್ಮ. ಅದನ್ನೇ ವಿಜಯನಗರದ ಅರಸರು ಪಾಲಿಸಿದ್ದು.

ಮೂರನೆಯದಾಗಿ, ಸಾಮಾನ್ಯವಾಗಿ ನಾವು ಭಾರತೀಯ ಸಮಾಜದಲ್ಲಿ ಕಾಣುವುದು ಅರಸನಾದವನ ಮುಖ್ಯ ಕರ್ತವ್ಯವು ಅನಾದಿ ಕಾಲದಿಂದಲೂ ಬಂದಿರುವ ಸಾಮಾಜಿಕ ರಚನೆಯನ್ನು ರಕ್ಷಿಸುವುದು ಮತ್ತು ಪ್ರಮುಖವಾಗಿ ಬ್ರಾಹ್ಮಣ ವರ್ಗದವರು ಅನುಭವಿಸಿಕೊಂಡು ಬಂದ ವಿಶೇಷ ಹಕ್ಕುಗಳನ್ನು ರಕ್ಷಿಸುವುದು. ಈ ಸಂಪ್ರದಾಯವನ್ನೇ ಮುಂದುವರಿಸಿಕೊಂಡು ಬಂದ ವಿಜಯನಗರದ ಅರಸರು ವರ್ಗೀಕೃತ ಸಮಾಜದ ಹರಿಕಾರರಾಗಿ ವರ್ಣಾಶ್ರಮ ಧರ್ಮದ ನೀತಿ ರಿವಾಜುಗಳನ್ನು ಎತ್ತಿಹಿಡಿದರು. ಎಲ್ಲ ವಿಜಯನಗರದ ಅರಸರು ತಮ್ಮ ಆಸ್ಥಾನದಲ್ಲಿ ಬ್ರಾಹ್ಮಣ ಕವಿಗಳನ್ನು, ಸಾಹಿತಿಗಳನ್ನು ಪ್ರೋತ್ಸಾಹಿಸಿದರು. ವೇದ, ಉಪನಿಷತ್ತು, ಸಾಹಿತ್ಯ ಪ್ರಕಾರಗಳನ್ನು ಬ್ರಾಹ್ಮಣ ಪಂಡಿತರಿಗೆ ರಚಿಸಲು ಪ್ರೇರಣೆ ನೀಡಿದರು. ಅರಸರ ಆಸ್ಥಾನದಲ್ಲಿ ಬ್ರಾಹ್ಮಣರು ಬೇರೆ ಬೇರೆ ಹುದ್ದೆಗಳನ್ನು ಅಲಂಕರಿಸಿದ್ದರು. ಅವರ ಸೇವೆಗೆ ರಾಜನು ಭೂಮಿಯನ್ನು ಉಂಬಳಿಯಾಗಿ ನೀಡಿದ್ದ. ಇದು ಹಿಂದಿನಿಂದಲೂ ಬಂದಿರುವ ಸಂಪ್ರದಾಯ. ಅವರಿಗೆ ಭೂಮಿ ಮೇಲಿನ ತೆರಿಗೆ ವಿನಾಯಿತಿಯನ್ನು ಕೂಡ ನೀಡಲಾಗಿತ್ತು.

ಇನ್ನೊಂದೆಡೆ, ರಾಜನ ಅಸ್ತಿತ್ವ ಮತ್ತು ಪ್ರಭುತ್ವವು ನ್ಯಾಯಸಮ್ಮತವಾದುದೆಂದು ದೇವಾಲಯ ಮತ್ತು ಬ್ರಾಹ್ಮಣರು ರುಜುವಾತು ಮಾಡುವ ಸಂಪ್ರದಾಯಕ್ಕೆ ವಿಜಯನಗರದ ಅರಸರು ಹೆಚ್ಚು ಗೌರವ ಕೊಟ್ಟಿದ್ದರು. ರಾಜ್ಯ ಸ್ಥಾಪನೆ ಆದ ಮೇಲೆ ಧಾರ್ಮಿಕ ಅಂಗೀಕಾರ ಪಡೆದುಕೊಳ್ಳಲು ಪ್ರಯತ್ನಿಸಲಾಗುತ್ತದೆ. ಧರ್ಮಾಧಿಕಾರಿಗಳು ಸಹ ರಾಜಪ್ರಭುತ್ವದ ಆಶ್ರಯ ಪಡೆದುಕೊಳ್ಳಲು ಪ್ರಯತ್ನಿಸುತ್ತಾರೆ. ದೇವರ ಸೇವಕರಾಗಿ, ದೇವಾಲಯಗಳ ಸಂರಕ್ಷಕರಾಗಿ ಇದ್ದುಕೊಂಡು ತಮ್ಮ ರಾಜತ್ವಕ್ಕೆ ಕಾನೂನುಬದ್ಧವಾದ ರುಜುವಾತನ್ನು ದಕ್ಕಿಸಿಕೊಳ್ಳುತ್ತಿದ್ದರು. ಈ ಪದ್ಧತಿ ವಿಜಯನಗರ ಸಾಮ್ರಾಜ್ಯಕ್ಕೆ ಸೀಮಿತವಾದುದೇನಲ್ಲ. ಬಹುಶಃ ಇತಿಹಾಸದಲ್ಲಿ ಬಂದುಹೋದ ಎಲ್ಲಾ ಅರಸರು ತಮ್ಮ ಇರುವಿಕೆಯನ್ನು ಕಾನೂನುಬದ್ಧವಾಗಿ ಗುರುತಿಸಿಕೊಳ್ಳಲು ದೇವಾಲಯಗಳು ಮತ್ತು ಬ್ರಾಹ್ಮಣ. ಸಮುದಾಯಗಳು ಮಹತ್ವದ ಪಾತ್ರವಹಿಸಿರುವುದನ್ನು ಆಯಾ ಕಾಲದ ಶಾಸನಗಳನ್ನೇ ಅಧ್ಯಯನ ಮಾಡಿದರೆ ಬೆಳಕಿಗೆ ಬರುತ್ತದೆ. ಉದಾಹರಣೆಗೆ, ಹೊಯ್ಸಳರು. ಹಾಸನದ ವಿಸ್ತಾರವಾದ ಹಾಗೂ ಫಲವತ್ತಾದ ಭೂಭಾಗಕ್ಕೆ ಆರಂಭದ ದಿನಗಳಲ್ಲಿ ಹೊಯ್ಸಳರು ಹೊಸಬರು. ಆದರೆ, ಈ ಪ್ರದೇಶಗಳನ್ನು ಆಕ್ರಮಿಸಿಕೊಂಡ ಸಂದರ್ಭದಲ್ಲಿ ಸಾಮಾನ್ಯರ ಬೆಂಬಲ ದಕ್ಕಿಸಿಕೊಂಡಿದ್ದು ಧಾರ್ಮಿಕ ಮುಖಂಡರಿಂದ, ಮುಖ್ಯವಾಗಿ ಜೈನರು ಮತ್ತು ಬ್ರಾಹ್ಮಣರಿಂದ. ಅದನ್ನು ನಿರೀಕ್ಷಿಸಿಕೊಂಡೇ ಹೊಯ್ಸಳ ರಾಜರು ದೇವಾಲಯಗಳಿಗೆ, ಜೈನ ಬಸದಿಗಳಿಗೆ ಮತ್ತು ಬ್ರಾಹ್ಮಣ ಪಂಡಿತರಿಗೆ ಯಥೇಚ್ಛವಾಗಿ ಆರ್ಥಿಕ ಸಂಪತ್ತನ್ನು ಮತ್ತು ಭೂಮಿಯನ್ನು ಉಂಬಳಿಯಾಗಿ ನೀಡಿದರು. ಇದು ತಮ್ಮ ಪ್ರಭುತ್ವವನ್ನು ಪ್ರಭಾವೀ ಗುಂಪುಗಳ ಮೂಲಕ ಕಾನೂನು ಬದ್ಧವಾಗಿ ಗಟ್ಟಿಗೊಳಿಸಲು ಬಳಸಿದ ತಂತ್ರ.

ರಾಜಧಾನಿ ಹಂಪಿಯಲ್ಲಿ ಸಂಗಮ ವಂಶದವರು ಬಂದು ನೆಲೆಸುವ ನಿರ್ಧಾರವೇ ಇದಕ್ಕೆ ಪೂರಕವಾದ ಅಂಶವನ್ನು ಪ್ರದರ್ಶಿಸುತ್ತದೆ. ಹಂಪಿ ಪ್ರದೇಶದಲ್ಲಿರುವ ವಿರೂಪಾಕ್ಷ ದೇವಾಲಯ ಅದಾಗಲೇ ದೈವತ್ವದ ಖ್ಯಾತಿಯನ್ನು ಗಳಿಸಿಕೊಂಡುಬಂದ ದೇಗುಲ. ಈ ಆಲೋಚನೆಯ ಹಿಂದೆ ಸಂಗಮರಿಗೆ, ತಮ್ಮ ವಂಶ, ರಾಜಧಾನಿ ಮತ್ತು

ಸಾಮ್ರಾಜ್ಯದ ರಕ್ಷಕ ವಿರೂಪಾಕ್ಷನೆಂದೇ ಘೋಷಿಸಿಕೊಂಡು ಈ ದೇವರೆ ನಮ್ಮ ಒಡೆಯನೆಂದು ಒಪ್ಪಿಕೊಳ್ಳುವ ಇರಾದೆ ಇತ್ತು. ವಿಜಯನಗರದ ಅರಸರು ತಮ್ಮ ಧಾರ್ಮಿಕ ದತ್ತಿ ಉಲ್ಲೇಖಿಸುವ ತಾಮ್ರ ಶಾಸನಗಳಲ್ಲಿ ವಿರೂಪಾಕ್ಷ ದೇವರ ಹೆಸರನ್ನು ಕೆತ್ತನೆ ಮಾಡುವ ಪರಿಪಾಠ ಮಾಡಿಕೊಂಡು ಆ ದೇವರು ತಮಗೆ ಎಷ್ಟು ಆಪ್ತನೆಂದು ಸಾರ್ವಜನಿಕವಾಗಿ ಸಮರ್ಥಿಸಿಕೊಂಡರು. ಇನ್ನೊಂದು ನೆಲೆಯಲ್ಲಿ ಅವರು ವಿರೂಪಾಕ್ಷನನ್ನು ಸ್ವೀಕರಿಸಿಕೊಂಡಿರುವುದನ್ನು ಶ್ರುತಪಡಿಸುತ್ತಾರೆ. ಇಡೀ ಸಾಮ್ರಾಜ್ಯದೊಳಗೆ ದೇವಾಲಯಗಳಿಗೆ ದತ್ತಿ ನೀಡುವ ವಿಚಾರವನ್ನು ಉಲ್ಲೇಖಿಸುವ ಶಾಸನಗಳಲ್ಲಿ ವಿರೂಪಾಕ್ಷನ ಹೆಸರನ್ನು ನಮೂದಿಸುತ್ತಿದ್ದರು. ಈ ಧಾರ್ಮಿಕ ದತ್ತಿ ನೀಡುವವನಿಗೂ ವಿರೂಪಾಕ್ಷನು ಕೃಪೆ ತೋರಿಸುವನೆಂಬ ನಂಬಿಕೆ ಮತ್ತು ವಿರೂಪಾಕ್ಷನ ಹೆಸರಿನಲ್ಲಿ ಅಂತಹ ಶಾಸನಗಳನ್ನು ಹೊರಡಿಸಿದರೆ ಆ ಶಾಸನಗಳನ್ನು ಮುಂದಿನ ತಲೆಮಾರಿನವರು ಹಾಳುಗೆಡವುದಿಲ್ಲವೆಂಬ ಪ್ರತೀತಿ ಇದ್ದವು.

ಇನ್ನೊಂದು ರೂಪದಲ್ಲೂ ವಿರೂಪಾಕ್ಷನನ್ನು ಅವರು ಸಾರ್ವತ್ರಿಕವಾಗಿ ಒಪ್ಪಿಕೊಂಡಿರುವುದು ಬೆಳಕಿಗೆ ಬರುತ್ತದೆ. ರಾಜಧಾನಿಯ ಸುತ್ತಮುತ್ತ ಅರಸರು, ಅವರ ಸಂಬಂಧಿಕರು, ಅಧಿಕಾರಿಗಳು, ವರ್ತಕರು ಹಲವಾರು ಹಳ್ಳಿಗಳನ್ನು ಭೂದಾನವಾಗಿ ವಿರೂಪಾಕ್ಷ ದೇವರಿಗೆ ಉಂಬಳಿಯಾಗಿ ಬಿಟ್ಟುಕೊಟ್ಟು, ಅದರಿಂದ ಬರುವ ಆದಾಯದಿಂದ ದೇವಾಲಯದ ದೈನಂದಿನ ಧಾರ್ಮಿಕ ವಿಧಿವಿಧಾನಗಳನ್ನು ನೆರವೇರಿಸಲಾಗುತ್ತಿತ್ತು. ಸಂಗಮ ವಂಶದ ಅರಸರು ಬಂದು ಹಂಪಿಯನ್ನು ರಾಜಧಾನಿಯಾಗಿ ರೂಪಿಸಿ ಆಳ್ವಿಕೆ ನಡೆಸುವ ಮೊದಲು ಹಂಪಿ ಸಣ್ಣ ಪ್ರಮಾಣದಲ್ಲಿ ಬೆಳೆದಿತ್ತು. ಆದರೆ ೧೪ನೇ ಶತಮಾನದ ಎರಡನೆ ಅರ್ಧದಿಂದ ಈ ವಿರೂಪಾಕ್ಷ ದೇವಾಲಯದ ಕಟ್ಟಡವನ್ನು ವಿಸ್ತರಿಸಲಾಯಿತು. ಈ ವಿಸ್ತರಣೆಯನ್ನು ಹೆಚ್ಚು ಕೈಗೆತ್ತಿಕೊಂಡ ಅರಸರಲ್ಲಿ ಕೃಷ್ಣದೇವರಾಯ ಪ್ರಮುಖ. ೧೫೦೯-೧೦ರಲ್ಲಿ ತನ್ನ ಪಟ್ಟಾಭಿಷೇಕದ ಸಂದರ್ಭದಲ್ಲಿ ಈ ದೇವಾಲಯಕ್ಕೆ ಒಂದು ವಿಶಾಲ ಮಂಟಪವನ್ನು ಮತ್ತು ದೇವಾಲಯದ ಎದುರು ಒಂದು ಬೃಹತ್ ಗಾತ್ರದ ಗೋಪುರವನ್ನು ನಿರ್ಮಿಸಿದ ಹೆಗ್ಗಳಿಕೆ ಕೃಷ್ಣದೇವರಾಯನಿಗೆ ಸಲ್ಲುತ್ತದೆ. ಜೊತೆಗೆ ೧೬ನೇ ಶತಮಾನದಿಂದ ವಿಜಯನಗರ ಸಾಮ್ರಾಜ್ಯದ ವ್ಯಾಪ್ತಿಗೆ ಬರುವ ತೆಲುಗು, ಕನ್ನಡ ಭಾಷೆಯನ್ನಾಡುವ ಜನರು ನೆಲೆಸುವ ಪ್ರದೇಶಗಳಲ್ಲಿ ಸ್ಥಳೀಯ ಶೈಲಿಗೆ ಭಿನ್ನವಾದ ಶೈಲಿಯ ಬೃಹತ್ ದೇವಾಲಯಗಳ ರಚನೆ ಕೂಡ ದೊಡ್ಡ ಮಟ್ಟದಲ್ಲಿ ಕಂಡುಬರುತ್ತದೆ. ವಿಜಯನಗರದ ಪಟ್ಟಣಗಳಲ್ಲಿ ಸ್ಥಳೀಯ ಶೈಲಿಯ ದೇವಾಲಯಗಳ ಸಂಖ್ಯೆ ಹಿಂದಿಗಿಂತ ಇಳಿಮುಖ ಕಂಡಿತು. ವಿಜಯನಗರದ ಅರಸರು ಚೋಳರ ಕಾಲದಲ್ಲಿ ರಚಿಸಲ್ಪಡುವ ದೊಡ್ಡ ಗಾತ್ರದ ರಚನೆಯ ದೇವಾಲಯಗಳನ್ನೇ ಹೆಚ್ಚಾಗಿ ಕಟ್ಟಲಾರಂಭಿಸಿದರು. ಅಂದರೆ, ಹಂಪಿಯ ವಿರೂಪಾಕ್ಷ ದೇವಾಲಯಕ್ಕೆ ಹೆಚ್ಚುವರಿ ರಚನೆ ಮತ್ತು ಗೋಪುರದ ಸೇರ್ಪಡೆ ಕೃಷ್ಣದೇವರಾಯನಿಗೆ ವಿರೂಪಾಕ್ಷ ದೇವರ ಮೇಲೆ ಇಟ್ಟಿರುವ ನಂಬಿಕೆ ಮತ್ತು ತನ್ನ ವಂಶದ ದೇವರು ಎಂಬ ಪ್ರೀತಿಯನ್ನು ಗೌರವಿಸಿರುವುದು ವಿಶಿಷ್ಟವಾದುದು.

ಹಾಗೆಂದು ಕೇವಲ ವಿರೂಪಾಕ್ಷ ದೇವಾಲಯಕ್ಕೆ ಮಾತ್ರ ವಿಜಯನಗರದ ಅರಸರ ಪ್ರೋತ್ಸಾಹವಿದೆ ಎಂದೇನೂ ಅಲ್ಲ. ರಾಜಧಾನಿಯನ್ನು ಸುತ್ತುವರಿದ ಹಳ್ಳಿಗಳಲ್ಲಿರುವ ಹಾಗೂ ಸಾಮ್ರಾಜ್ಯದ ಉದ್ದಗಲಕ್ಕೂ ಇಂತಹ ಅನೇಕ ದೇವಾಲಯಗಳನ್ನು ಪ್ರೋತ್ಸಾಹಿಸಿದ್ದಾರೆ.

ಐದನೆಯದಾಗಿ, ಕೃಷ್ಣದೇವರಾಯನು ವಿಜಯನಗರದ ಅರಸರಲ್ಲಿ ವಿಶೇಷವಾಗಿ ಗುರುತಿಸಲ್ಪಡುವ ವ್ಯಕ್ತಿಯಾಗಿದ್ದು, ಧರ್ಮದ ಹೆಸರಿನಲ್ಲಿ ದತ್ತಿ, ದಾನವನ್ನು ಭೂಮಿ/ಹಣದ ರೂಪದಲ್ಲಿ ತಾನು ಆಕ್ರಮಿಸಿಕೊಂಡ ಎಲ್ಲ ಪ್ರದೇಶಗಳಲ್ಲಿರುವ ಮಠ, ಮಂದಿರಗಳಿಗೆ ಕೊಡುತ್ತಿದ್ದನು. ತನ್ನ ದಿಗ್ವಿಜಯದ ನಂತರ ಆಕ್ರಮಿಸಿಕೊಂಡ ಪ್ರದೇಶಗಳಲ್ಲಿರುವ ಎಲ್ಲ ದೇವಾಲಯಗಳಿಗೆ, ದಕ್ಷಿಣ ಆಂಧ್ರದಲ್ಲಿರುವ ತಿರುಪತಿ, ಕಾಳಹಸ್ತಿ, ತಮಿಳುನಾಡಿನ ಕಾಂಚೀಪುರಂ ಇತ್ಯಾದಿ ಸ್ಥಳಗಳಲ್ಲಿರುವ ದೇವಾಲಯಗಳಿಗೆ ಭೇಟಿಕೊಟ್ಟು, ಅಲ್ಲಿನ ದೇವಸ್ಥಾನಗಳಿಗೆ ಬೇರೆ ಬೇರೆ ದತ್ತಿಗಳನ್ನು ನಿಗದಿಪಡಿಸಿದನು. ಅಲ್ಲಿನ ಅಭಿವೃದ್ಧಿಗೆ ಸೂಕ್ತ ಸಲಹೆ ನೀಡಿ ಚಿನ್ನಾಭರಣಗಳನ್ನು ದಾನವಾಗಿ ನೀಡಿದ್ದನು. ಪ್ರತಿ ದಿಗ್ವಿಜಯೋತ್ಸವದ ಸಂದರ್ಭದಲ್ಲಿ ಆಕ್ರಮಿಸಿಕೊಂಡ ಪ್ರದೇಶದಲ್ಲಿರುವ ದೇವತೆಗಳಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದನು.

ವಿಜಯನಗರ ಅರಸರು ಹಿಂದೂಧರ್ಮ ಮತ್ತು ದೇವಾಲಯಗಳಿಗೆ ಇಷ್ಟೊಂದು ಪ್ರಮಾಣದಲ್ಲಿ ಪ್ರೋತ್ಸಾಹಿಸಿದುದೂ ಅಲ್ಲದೆ, ಬೇರೆ ಧರ್ಮ ಮತ್ತು ಸಂಸ್ಕೃತಿಯ ಅನುಯಾಯಿಗಳನ್ನು ಸಮಾನವಾಗಿ ನೋಡಿದ್ದರು ಎಂಬುದಕ್ಕೆ ಹಲವಾರು ದೃಷ್ಟಾಂತಗಳು ನಮಗೆ ದೊರಕುತ್ತವೆ. ಸುಮಾರು ೨೦೦ ವರ್ಷಗಳಷ್ಟು ಕಾಲ ವೈಭವದ ದಿನಗಳನ್ನು ವಿಜಯನಗರದ ಅರಸರು ಅನುಭವಿಸಿದ್ದಕ್ಕೆ ಕಾರಣಗಳಿವೆ. ದಖ್ಖನ್ನಿನ ಸುಲ್ತಾನರು ಅಳವಡಿಸಿಕೊಂಡ ತಂತ್ರಜ್ಞಾನಗಳನ್ನು ಇವರೂ ಪಾಲಿಸಿದ್ದರು. ಇದು ಮುಖ್ಯವಾಗಿ ಸೈನಿಕ ರಂಗದಲ್ಲಿ ಅಮೂಲ್ಯವಾದುದು. ಟರ್ಕರ ಬಿಲ್ಲುಗಾರಿಕೆ ಮತ್ತು ಅಶ್ವದಳದ ಉಪಯುಕ್ತತೆಯನ್ನು ಮನಗಂಡು ತಮ್ಮ ಸೈನ್ಯದ ಶಕ್ತಿಯನ್ನು ವೃದ್ಧಿಸಲು ಅದನ್ನು ಬಳಸಿಕೊಂಡಿದ್ದರು. ಮುಸ್ಲಿಂ ಧರ್ಮಕ್ಕೆ ಸೇರಿದ ಅನೇಕ ಮಂದಿಯನ್ನು ಸೈನ್ಯಕ್ಕೆ ಸೇರಿಸಿಕೊಂಡಿದ್ದರು. ನಾಯನ್‌ಕರ ಪದ್ಧತಿಯನ್ನು ಇಸ್ಲಾಂ ಧರ್ಮದ ಅನುಯಾಯಿಗಳಾದ ದಿಲ್ಲಿ ಸುಲ್ತಾನರನ್ನು ನೋಡಿ ಅನುಸರಿಸಿದ್ದರು. ದಿಲ್ಲಿ ಸುಲ್ತಾನರು ಇಕ್ತಾ ಪದ್ಧತಿಯಡಿ ಯೋಧರ ಶಕ್ತಿಯನ್ನು ಅನುಸರಿಸಿ ಭೂಮಿಯನ್ನು, ಅವರ ಸೇವೆಯನ್ನು ಪರಿಗಣಿಸಿ ಉಂಬಳಿಯಾಗಿ ಕೊಡುತ್ತಿದ್ದರು. ಇದನ್ನೇ ವಿಜಯನಗರದ ಅರಸರು ನಾಯನ್‌ಕರ ಪದ್ಧತಿಯಡಿಯಲ್ಲಿ ಅನುಸರಿಸಿದ್ದರು. ಪರ್ಶಿಯನ್ ಮತ್ತು ಅರೇಬಿಯನ್ ಭಾಷೆಯಲ್ಲಿ ಕಂದಾಯ ವಸೂಲಿ ಮತ್ತು ಆಡಳಿತಕ್ಕೆ ಸಂಬಂಧಿಸಿದ ಅನೇಕ ಶಬ್ದಗಳನ್ನು ಕನ್ನಡ, ಮರಾಠಿ ಮತ್ತು ತೆಲುಗು ಭಾಷೆಯಲ್ಲಿ ಇವರು ಬಳಸಿಕೊಂಡಿದ್ದರು. ಈ ತರಹದ ವಿಚಾರಗಳು ಇಸ್ಲಾಂ ಧರ್ಮದ ಪ್ರಭಾವ ವಿಜಯನಗರದ ಮೇಲೆ ಸಾಕಷ್ಟಿದೆ ಎಂಬುದನ್ನು ತೋರ್ಪಡಿಸುತ್ತವೆ.



ಏನ್ ಸಾರ್, ಪಾದಯಾತ್ರೆ ಹೋಗಿದ್ರಾ?
ಮುಖದಲ್ಲಿ ಒಳ್ಳೆ ಗಣೆಧಣೆಗಳ ಕಳೆ ಬಂದಿದೆ!

ಇದಲ್ಲದೆ, ವಾಸ್ತುಶಿಲ್ಪಗಳಲ್ಲಿ ಇಸ್ಲಾಮಿ ಶೈಲಿಗಳನ್ನು ಬಹಳಷ್ಟು ಅಳವಡಿಸಿಕೊಂಡಿರುವುದಕ್ಕೆ ಸಾಕ್ಷಿಗಳಿವೆ. ರಾಜಧಾನಿಗೆ ಸಮೀಪವಿರುವ ಅನೇಕ ವಾಸ್ತು ರಚನೆಗಳಲ್ಲಿ ಈ ಪ್ರಭಾವಗಳನ್ನು ನಾವು ಕಾಣಬಹುದು – ಲೋಟಸ್ ಮಹಲ್, ಎಲಿಫೆಂಟ್ ಸ್ಟೇಬಲ್ಸ್, ರಾಣಿಯರ ಸ್ನಾನದ ಕೆರೆಗಳು ಇತ್ಯಾದಿಗಳಲ್ಲಿ ಇಸ್ಲಾಮಿ ವಾಸ್ತುಶಿಲ್ಪ ಶೈಲಿ ಮತ್ತು ಬಣ್ಣಗಾರಿಕೆಯನ್ನು ನೋಡಲು ಸಾಧ್ಯವಿದೆ. ಅಂದರೆ, ವಿಜಯನಗರದ ಅರಸರು ಹೆಚ್ಚು ಕ್ರಿಯಾಶೀಲರಾಗಿದ್ದರು ಮತ್ತು ಜಾತ್ಯತೀತವಾಗಿ ಆಲೋಚನೆ ಮಾಡುತ್ತಿದ್ದರು ಎಂಬ ಅಂಶ ಗ್ರಾಸವಾಗುತ್ತದೆ. ೧೪೩೯ರಲ್ಲಿ ಕಟ್ಟಲಾದ ಮಸೀದಿಯು ಭಾರತೀಯ ಮತ್ತು ಇಸ್ಲಾಮಿ ಶೈಲಿಯಲ್ಲೇ ರಚಿಸಲಾಗಿದ್ದು, ಅದನ್ನು ಧರ್ಮಶಾಲೆ ಎಂದು ಕರೆಯಲಾಗಿತ್ತು. ಮಹಾನವಮಿ ಹಬ್ಬವನ್ನು ನಾಡಹಬ್ಬವನ್ನಾಗಿ ಎಲ್ಲರಿಗೂ ಒಪ್ಪಿಗೆಯಾಗುವಂತೆ ಮತ್ತು ಎಲ್ಲರ ಭಾಗವಹಿಸುವಿಕೆಯಿಂದ ಆಚರಿಸಲಾರಂಭಿಸಿದ್ದು ವಿಶಿಷ್ಟ ಪ್ರಯತ್ನ. ಎಲ್ಲಾ ಬಗೆಯ ಸಾಹಿತ್ಯ - ಸಂಸ್ಕೃತ, ಕನ್ನಡ ಮತ್ತು ತೆಲುಗು ಸಾಹಿತ್ಯವನ್ನು ಸಮಾನವಾಗಿ ಗೌರವಿಸಿರುವುದು ಇನ್ನೊಂದು ವಿಶಿಷ್ಟತೆ. ಈ ಮೂರು ಭಾಷೆಗಳಿಗೆ ಸಂಬಂಧಿಸಿದ ಸಾಹಿತ್ಯ ಮತ್ತು ಕತೆಗಳನ್ನು ರಚಿಸಲು ಸಂಬಂಧಿಸಿದವರನ್ನು ಬೆಂಬಲಿಸಲಾಗಿತ್ತು. ಕೃಷ್ಣದೇವರಾಯನೇ ಸ್ವತಃ ಸಾಹಿತಿ, ಕವಿಯಾಗಿದ್ದು, ಬೇರೆ ಬೇರೆ ಭಾಷೆಯ ಸಾಹಿತ್ಯ ಪ್ರಕಾರಗಳನ್ನು ಸಮಾನವಾಗಿ ಪ್ರೋತ್ಸಾಹಿಸಿದನು.

ಇವೆಲ್ಲವನ್ನು ಗಮನಿಸಿದರೆ, ವಿಜಯನಗರ ಅರಸರು ಜಾತ್ಯತೀತರಾಗಿದ್ದು, ಎಲ್ಲ ಧರ್ಮಗಳನ್ನು ಸಮಾನವಾಗಿ ನೋಡಿದ್ದರು, ಸಮಾನವಾಗಿ ಪ್ರೋತ್ಸಾಹಿಸಿದ್ದರು ಮತ್ತು ವಿವಿಧತೆಯಲ್ಲಿ ಏಕತೆ ಎಂಬ ನಾಣ್ಣುಡಿಗೆ ಬದ್ಧರಾಗಿ ಕಾರ್ಯನಿರ್ವಹಿಸಿದ್ದರು.

**ಡಾ|| ಬಾರ್ಕೂರು ಉದಯ**
ಪ್ರವಾಚಕರು, ಇತಿಹಾಸ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು



# ವಿಜ್ಞಾನ ವಿಜ್ಞಾನಿ ಮತ್ತು ಸಮಾಜ

ವಿಜ್ಞಾನ

ಇಂದಿನ ಸಮಾಜದ ತಳಹದಿ ವಿಜ್ಞಾನ ಎಂದರೆ ತಪ್ಪಾಗಲಾರದು. ತಂತ್ರಜ್ಞಾನದ ತಳಹದಿಯೂ ವಿಜ್ಞಾನವೆ. ನಮ್ಮ ಸುತ್ತಮುತ್ತ ನಾನಾ ಪ್ರಕ್ರಿಯೆಗಳು ಸದಾ ಜರುಗುತ್ತಲಿರುತ್ತವೆ. ಮೇಲ್ನೋಟಕ್ಕೆ ಅವು ಒಂದಕ್ಕೊಂದು ಸಂಬಂಧವಿಲ್ಲದಂತೆ ತೋರುವುವು. ಅವುಗಳ ಪರಸ್ಪರ ಸಂಬಂಧಗಳನ್ನು ಮತ್ತು ಮೂಲಕಾರಣಗಳನ್ನು ತಿಳಿದರೆ ಜೀವನದ ಹೋರಾಟ ಸುಲಭವಾಗುವುದು. ಇವುಗಳ ಹುಡುಕಾಟದಲ್ಲಿ ಮಾನವ ಬಹಳ ಹಿಂದಿನಿಂದಲೂ ತನ್ನನ್ನು ತಾನೇ ತೊಡಗಿಸಿಕೊಂಡಿದ್ದಾನೆ. ಈ ಹುಡುಕಾಟದ ಪ್ರಕ್ರಿಯೆಯನ್ನು ವಿಜ್ಞಾನವೆಂದು ಕರೆಯುವರು. ಇದು ಸುಮಾರು ೪೦೦ ವರ್ಷಗಳಿಂದ ಬೆಳೆದುಬಂದಿದೆ. ಆಧುನಿಕ ವಿಜ್ಞಾನಕ್ಕೆ ಇಟಲಿ ದೇಶದ ಗೆಲಿಲಿಯೊ ಗೆಲಿಲಿ ಎಂಬಾತನೇ ಮೂಲ.

ವಿಜ್ಞಾನ ಪ್ರಕ್ರಿಯೆಗೆ ಅನೇಕ ಮುಖಗಳಿವೆ. ಅವುಗಳಲ್ಲಿ ಮುಖ್ಯವಾದುವು :

**೧. ಪುನರಾವರ್ತನೆ** : ಸೂರ್ಯ ಪ್ರತಿದಿನ ಬೆಳಿಗ್ಗೆ ಹುಟ್ಟಿ ಸಂಜೆ ಮುಳುಗುವನು. ಇದನ್ನು ಚೆನ್ನಾಗಿ ಅಭ್ಯಾಸ ಮಾಡಿದರೆ ಸೂರ್ಯ ಹುಟ್ಟುವ ಮತ್ತು ಮುಳುಗುವ ಸಮಯವನ್ನು ನಿಖರವಾಗಿ ಮುಂಗಡವಾಗಿಯೇ ಊಹಿಸಬಹುದು. ಇದು ಮನುಕುಲದ ಮೊದಲ ವೈಜ್ಞಾನಿಕ ಆವಿಷ್ಕಾರ. ಹೀಗೆಯೇ ರಾತ್ರಿಯ ಆಕಾಶಕಾಯಗಳಾದ ಚಂದ್ರ, ಗ್ರಹಗಳು ಮತ್ತು ನಕ್ಷತ್ರಗಳ ಪುನರಾವರ್ತನೆಯ ಸ್ವರೂಪವನ್ನು ಮಾನವ ಕಂಡುಕೊಂಡ.

ವಾತಾವರಣದಲ್ಲಾಗುವ ಬದಲಾವಣೆಗಳೂ ಪುನರಾವರ್ತನೆಗೊಳ್ಳುತ್ತವೆ. ಬೇಸಿಗೆ, ಮಳೆಗಾಲ, ಚಳಿಗಾಲಗಳೆಲ್ಲವೂ ಸಮಯಕ್ಕೆ ಸರಿಯಾಗಿ ಪ್ರತಿವರ್ಷವೂ ಬರುತ್ತವೆ. ಈ ಬದಲಾವಣೆಗಳನ್ನು ಆಕಾಶಕಾಯಗಳ ಚಲನೆಗೆ ಜೋಡಿಸಿದ್ದು ಮಾನವನ ಮತ್ತೊಂದು ಮಹತ್ವಪೂರ್ಣ ವೈಜ್ಞಾನಿಕ ಆವಿಷ್ಕಾರ.

ಆಧುನಿಕ ವಿಜ್ಞಾನದಲ್ಲಿಯೂ ಪುನರಾವರ್ತನೆಯ ಅಧ್ಯಯನ ಬಹಳ ಮಹತ್ವಕಾರಿ. ಧ್ವನಿ, ಬೆಳಕು ಮತ್ತು ಇತರ ತರಂಗಗಳ ಪುನರಾವರ್ತನೆಯ ಸ್ವರೂಪ, ಪರಮಾಣುಗಳಲ್ಲಿನ ಪುನರಾವರ್ತಿತ ಚಲನೆ ಇತ್ಯಾದಿಗಳ ಆವಿಷ್ಕಾರ, ಘನವಸ್ತುಗಳಲ್ಲಿ ಅಣುಗಳ ಜೋಡಣೆಯಲ್ಲಿನ ಪುನರಾವರ್ತನೆ, ಪರಮಾಣುಗಳಲ್ಲಿ ಎಲೆಕ್ಟ್ರಾನ್, ನ್ಯೂಟ್ರಾನ್, ಪ್ರೋಟಾನ್‌ಗಳ ಪುನರಾವರ್ತಿತ ಜೋಡಣೆ, ಇತ್ಯಾದಿಗಳು ಇಂದಿನ ವಿಜ್ಞಾನಕ್ಕೆ ಭದ್ರ ತಳಪಾಯಗಳಾಗಿವೆ. ಮೆಂಡಲೀವ್ ರಚಿಸಿದ ಆವರ್ತ ಕೋಷ್ಟಕ ಆಧುನಿಕ ರಸಾಯನಶಾಸ್ತ್ರದ ಬೆಳವಣಿಗೆಗೆ ಬುನಾದಿಯಾಯಿತು. ಗ್ರಹಗಳ ಪುನರಾವರ್ತಿತ ಚಲನೆ ನ್ಯೂಟನ್‌ನ ಗುರುತ್ವಾಕರ್ಷಣ ನಿಯಮಕ್ಕೆ ದಾರಿಮಾಡಿಕೊಟ್ಟಿತು. ನಿಖರವಾಗಿ ಪುನರಾವರ್ತಿಸದ ಪ್ರಾಕೃತಿಕ ಘಟನೆಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ವಿಜ್ಞಾನಿಗಳು ಇಂದಿಗೂ ಪ್ರಯತ್ನಿಸುತ್ತಲೇ ಇದ್ದಾರೆ. ಉದಾಹರಣೆಗೆ, ಮಳೆ ಯಾವಾಗ, ಎಲ್ಲಿ, ಎಷ್ಟು ಬೀಳುತ್ತದೆ, ಭೂಕಂಪ ಎಲ್ಲಿ ಎಷ್ಟರಮಟ್ಟಿಗೆ ಯಾವಾಗ ಆಗುತ್ತದೆ ಮುಂತಾದ ಪ್ರಶ್ನೆಗಳಿಗೆ ವಿಜ್ಞಾನಿಗಳ ಬಳಿ ಇನ್ನೂ ಉತ್ತರವಿಲ್ಲ.

**೨ ವರ್ಗೀಕರಣ** : ಪ್ರಕೃತಿಯಲ್ಲಿ ನಾನಾ ತರಹದ ವಸ್ತುಗಳಿವೆ, ನಾನಾ ತರಹದ ಕ್ರಿಯೆಗಳು ನಡೆಯುತ್ತಿವೆ. ಪ್ರತಿಯೊಂದೂ ಮತ್ತೊಂದರಿಂದ ತೀರ ಭಿನ್ನವಾಗಿದ್ದರೆ ಪ್ರಕೃತಿಯ ವೈಜ್ಞಾನಿಕ ಅಧ್ಯಯನ ಅಸಾಧ್ಯ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಉದಾಹರಣೆಗೆ, ಪ್ರಾಣಿಗಳನ್ನು ಕಶೇರುಕಗಳು (ಬೆನ್ನುಲುಬುಳ್ಳವು) ಮತ್ತು ಅಕಶೇರುಕಗಳು (ಬೆನ್ನೆಲುಬು ಇಲ್ಲದವು) ಎಂದು ವರ್ಗೀಕರಿಸುತ್ತಾರೆ. ಅಂತೆಯೇ ಇನ್ನಿತರ ವರ್ಗೀಕರಣಗಳೂ ಸಾಧ್ಯ. ನಶಿಸಿಹೋಗಿ ಕೇವಲ ಪಳೆಯುಳಿಕೆಗಳಾಗುಳಿದಿರುವ ಪ್ರಾಣಿಗಳನ್ನೂ ಹೀಗೆ ವರ್ಗೀಕರಿಸಬಹುದು. ಒಂದೇ ವರ್ಗದ ಅಥವಾ ಗುಂಪಿನ ವಸ್ತುಗಳಲ್ಲಿ ಹೆಚ್ಚು ಸಾಮ್ಯತೆ ಇರುತ್ತದೆ. ವಿಂಗಡಣೆಗಳಿಗೆ ವಿವಿಧ ಆಧಾರಗಳಿರಬಹುದು. ಹೀಗೆ ವಿಂಗಡಿಸಿದ ಪ್ರಾಣಿಗಳನ್ನು ಕೂಲಂಕಷವಾಗಿ ಅಭ್ಯಸಿಸಿ ಅವುಗಳಲ್ಲಿನ ಸಾಮ್ಯತೆ ಮತ್ತು ವ್ಯತ್ಯಾಸವನ್ನು ಗಮನಿಸಿದ ಚಾರ್ಲ್ಸ್ ಡಾರ್ವಿನ್ ವಿಕಾಸ ವಾದವನ್ನು ರೂಪಿಸಿದ. ಇಂತಹ ಅಧ್ಯಯನ ಎಲ್ಲ ವೈಜ್ಞಾನಿಕ ಕ್ಷೇತ್ರಗಳಲ್ಲಿಯೂ ಉಂಟು. ಖಗೋಳಶಾಸ್ತ್ರದಲ್ಲಿ ನಕ್ಷತ್ರಗಳನ್ನು ಅವುಗಳ ಬಣ್ಣ, ಗಾತ್ರ ಮುಂತಾದವುಗಳ ಆಧಾರದ ಮೇಲೆ ವರ್ಗೀಕರಿಸುತ್ತಾರೆ.

ವಿಜ್ಞಾನಿ ತನ್ನ ಸಂಶೋಧನೆಗಳನ್ನು ಸಮಾಜದ ಪೋಷಣೆ ಇಲ್ಲದೆ ಮುಂದುವರಿಸಲು ಸಾಧ್ಯವಿಲ್ಲ, ತನಗೆ ಉಪಯೋಗವಾಗುವುದಾದರೆ ಮಾತ್ರ ಸಮಾಜ ವಿಜ್ಞಾನವನ್ನು ಪೋಷಿಸುವುದು. ಆದರೆ ವಿಜ್ಞಾನದಿಂದ ಸಮಾಜಕ್ಕೆ ಉಪಯೋಗವಾಗುತ್ತದೆಯೆ, ಯಾವಾಗ ಎಷ್ಟು ಪ್ರಯೋಜನವಾಗುತ್ತದೆ ಎಂದು ಪೂರ್ವಭಾವಿಯಾಗಿ ಹೇಳಲು ಸಾಧ್ಯವಿಲ್ಲ. ಇಂದಿನ ಒಂದು ಸಂಶೋಧನೆ ಮುಂದೆ ಎಂದೋ ಒಂದು ದಿನ ನಾವು ಊಹಿಸಲಾರದಂತಹ 'ಉಪಯೋಗ'ಕ್ಕೆ ಬರಬಹುದು. ಆದ್ದರಿಂದ ಸಮಾಜ ವಿಜ್ಞಾನದಿಂದ ಆಗುವ 'ಉಪಯೋಗ'ಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಬಾರದು. ವೈಜ್ಞಾನಿಕ ಸಂಶೋಧನೆಗಳಿಂದ ಪ್ರಕೃತಿಯ ಬಗ್ಗೆ ಮನುಷ್ಯನ ತಿಳುವಳಿಕೆ ಹೆಚ್ಚುವುದು. ಇದು ವಿಜ್ಞಾನದ ಮೂಲ ಉದ್ದೇಶ.

ಡಾ|| ಎಚ್. ಆರ್. ಪ್ರಭಾಕರ



ಘನ ವಸ್ತುಗಳನ್ನು ಅವುಗಳ ಸ್ಫಟಿಕಗಳ ರಚನೆಗನುಸಾರವಾಗಿ ವರ್ಗೀಕರಿಸಬಹುದು.

**೩. ವೀಕ್ಷಣೆ :** ಯಾವುದೇ ವಿಜ್ಞಾನದ ಅವಿಭಾಜ್ಯ ಅಂಗ ವೀಕ್ಷಣೆ. ಉದಾಹರಣೆಗೆ, ನಮ್ಮ ಪೂರ್ವಜರು ಸೂರ್ಯ ಉದಯಿಸುವ ದಿಕ್ಕನ್ನು ಅನೇಕ ವರ್ಷಗಳ ಕಾಲ ಪ್ರತಿದಿನವೂ ಗಮನಿಸಿ, ದಾಖಲಿಸಿ, ಒಂದು ವರ್ಷಕ್ಕೆ ೩೬೫ ದಿನಗಳೆಂದು ಕಂಡುಕೊಂಡಿರಬೇಕು. ಟೈಕೋ ಬ್ರಾಹೆ ಎಂಬ ವಿಜ್ಞಾನಿ ಅನೇಕ ವರ್ಷಗಳ ಕಾಲ ಗ್ರಹಗಳ ಚಲನೆಯನ್ನು ಅಭ್ಯಾಸ ಮಾಡಿ ಪಡೆದುಕೊಂಡ ಮಾಹಿತಿಯನ್ನು ತನ್ನ ಕಡತದಲ್ಲಿ ದಾಖಲಿಸಿದ್ದ. ಇವುಗಳನ್ನು ಅಭ್ಯಾಸ ಮಾಡಿದ ಕೆಪ್ಲರ್, ಗ್ರಹಗಳು ಸೂರ್ಯನ ಸುತ್ತ ದೀರ್ಘ ವೃತ್ತದ ಕಕ್ಷೆಗಳಲ್ಲಿ ಸುತ್ತುತ್ತವೆ ಎಂದು ಕಂಡುಹಿಡಿದ. ಹೀಗೆ ಟೈಕೋ ಬ್ರಾಹೆ ಮಾಡಿದ ವೀಕ್ಷಣೆಗಳು ಭೂಕೇಂದ್ರಿತ ವಿಶ್ವದಿಂದ ಸೂರ್ಯಕೇಂದ್ರಿತ ವಿಶ್ವಕ್ಕೆ ದಾರಿಮಾಡಿಕೊಟ್ಟಿತು.

ಜೀವಶಾಸ್ತ್ರದಲ್ಲಿ ಪ್ರಾಣಿಗಳ ದೇಹಗಳನ್ನು ಕತ್ತರಿಸಿ ಒಳಗಿರುವ ಭಾಗಗಳ ರಚನೆಯನ್ನು ಅಭ್ಯಾಸ ಮಾಡುವುದು ಬಹಳ ಹಿಂದಿನಿಂದ ಬೆಳೆದುಬಂದ ಪದ್ಧತಿ. ಎಡ್ವಿನ್ ಹಬಲ್ ಎಂಬ ವಿಜ್ಞಾನಿ ಗೆಲಾಕ್ಸಿಗಳ ವರ್ಣಪಟಲಗಳನ್ನು ದೂರದರ್ಶಕದ ಮೂಲಕ ವೀಕ್ಷಿಸಿ ಅವುಗಳು ನಮ್ಮಿಂದ ದೂರ ಓಡುತ್ತಿವೆ ಎಂದು ಕಂಡುಕೊಂಡ. ಇದರಿಂದಾಗಿ ವಿಜ್ಞಾನಿಗಳು ವಿಶ್ವದ ಉಗಮಕ್ಕೆ ಮಹಾಸ್ಫೋಟವೇ ಮೂಲವೆಂದು ಪ್ರತಿಪಾದಿಸಿದ್ದಾರೆ.

**೪. ಪ್ರಯೋಗ :** ಪ್ರಯೋಗ ಆಧುನಿಕ ವಿಜ್ಞಾನದ ಬಹುಮುಖ್ಯವಾದ ಅಂಗ. ಒಬ್ಬ ವಿಜ್ಞಾನಿ ಪ್ರಯೋಗಗಳಿಂದ ಕಂಡುಕೊಂಡ ಸತ್ಯವನ್ನು ಇತರ ವಿಜ್ಞಾನಿಗಳೂ ಅಂತಹುದೇ ಪ್ರಯೋಗಗಳನ್ನು ಮಾಡಿ ಪರೀಕ್ಷಿಸಬಹುದು. ಒಬ್ಬರು ಮಾಡಿದ ತಪ್ಪನ್ನು ಮತ್ತೊಬ್ಬರು ತಿದ್ದಬಹುದು. ಒಬ್ಬರು ಮಾಡಿದ ಪ್ರಯೋಗದ ನಿಖರತೆಯನ್ನು ಮತ್ತೊಬ್ಬರು ಹೆಚ್ಚಿಸಬಹುದು. ಉದಾಹರಣೆಗೆ, ಲೋಲಕದ ಆವರ್ತನ ಕಾಲವನ್ನು ಗೆಲಿಲಿಯೊ ತನ್ನ ನಾಡಿಯ ಮಿಡಿತದಿಂದ ಅಳೆದನಂತೆ. ಗಡಿಯಾರಗಳ ಅನ್ವೇಷಣೆಯಾದಂತೆ ಆವರ್ತನ ಕಾಲವನ್ನು ಹೆಚ್ಚು ನಿಖರವಾಗಿ ಅಳೆಯಲು ಸಾಧ್ಯವಾಯಿತು. ಇಂದು ಎಲೆಕ್ಟ್ರಾನಿಕ್ ಗಡಿಯಾರಗಳನ್ನು ಉಪಯೋಗಿಸಿ ಗೆಲಿಲಿಯೊ ಮಾಡಿದ ಪ್ರಯೋಗಗಳ ಇತಿಮಿತಿಯನ್ನು ಅನ್ವೇಷಿಸಬಹುದು. ಯಾವುದೇ ಪ್ರಯೋಗದಲ್ಲಿ ಮಾಪನ ಬಹುಮುಖ್ಯವಾದ ಅಂಗ. ಉದ್ದ, ವೇಗ, ಆವರ್ತನ ಕಾಲ, ಕಂಪನಾಂಕ, ತೂಕ, ದ್ರವ್ಯರಾಶಿ, ವೋಲ್ಟೇಜ್, ಕರೆಂಟ್, ಮುಂತಾದ ಅನೇಕ ಗುಣಗಳನ್ನು ಅಳೆಯಲು ವಿವಿಧ ಉಪಕರಣಗಳನ್ನು ಉಪಯೋಗಿಸುವರು. ಯಾವುದೇ ಪ್ರಯೋಗದ ಫಲಿತಾಂಶ ನೂರಕ್ಕೆ ನೂರು ನಿಖರತೆ ಒದಗಿಸುವುದಿಲ್ಲ. ಫಲಿತಾಂಶದಲ್ಲಿನ ಅನಿಶ್ಚಿತತೆ ಎಷ್ಟು ಎಂಬುದನ್ನು ಸ್ಪಷ್ಟವಾಗಿ ತಿಳಿಸುವುದು ಆಧುನಿಕ ವಿಜ್ಞಾನದ ಒಂದು ಮುಖ್ಯ ಸ್ವರೂಪ. ಇಂತಹ ಅನಿಶ್ಚಿತತೆಯನ್ನು ಕಡಿಮೆ ಮಾಡಲು ವಿಜ್ಞಾನಿಗಳು ಶ್ರಮಿಸುತ್ತಲೇ ಇರುತ್ತಾರೆ. ಉದಾಹರಣೆಗೆ, ಬೆಳಕಿನ ವೇಗವನ್ನು ತಿಳಿಯುವುದು ಬಹಳ ಅವಶ್ಯಕ. ಗೆಲಿಲಿಯೊ ಬಹಳ ಹಿಂದೆಯೇ ಇದಕ್ಕಾಗಿ ಶ್ರಮಿಸಿದ. ಆಧುನಿಕ ವಿಜ್ಞಾನದ ಅಳತೆಯಂತೆ ಬೆಳಕು ೨೯೯೭೯೨.೪೫೮ ಕಿ.ಮೀ./ಸೆಂ. ವೇಗದಲ್ಲಿ ಚಲಿಸುತ್ತದೆ – ಇದು ನಿರ್ವಾತ ಪ್ರದೇಶದಲ್ಲಿ. ಯಾವುದೇ ಮಾಧ್ಯಮದಲ್ಲಿ – ನೀರು, ಗಾಳಿ, ಗಾಜು ಇತ್ಯಾದಿ – ಬೆಳಕಿನ ವೇಗ ಕಡಿಮೆಯಾಗುತ್ತದೆ. ಆದರೆ ಬೆಳಕಿನ ವೇಗವನ್ನು ಹೆಚ್ಚಿಸುವುದು ಸಾಧ್ಯವಿಲ್ಲ ಎಂದು ಆಲ್ಬರ್ಟ್ ಐನ್‌ಸ್ಟೈನ್‌ನ ಸಾಪೇಕ್ಷತಾ ಸಿದ್ಧಾಂತ ಹೇಳುತ್ತದೆ. ಯಾವುದೇ ಪ್ರಯೋಗದಲ್ಲಿ ಬೆಳಕಿನ ವೇಗ ಹೆಚ್ಚೆಂದು ಕಂಡುಬಂದಲ್ಲಿ ಸಾಪೇಕ್ಷತಾ ಸಿದ್ಧಾಂತವನ್ನು ಪುನರ್ವಿಮರ್ಶಿಸಬೇಕಾಗುತ್ತದೆ. ಕಳೆದ ನೂರು ವರ್ಷಗಳಲ್ಲಿ ಇಂತಹ ಸಂದರ್ಭ ಬಂದಿಲ್ಲ. ಬಾಹ್ಯಾಕಾಶದಲ್ಲಿ ಈಥರ್ ಎಂಬ ಮಾಧ್ಯಮವಿದೆಯೆಂದೂ ಬೆಳಕು ಅದರಲ್ಲಿ ಚಲಿಸುವುದೆಂದೂ ಹಿಂದೆ ನಂಬಲಾಗಿತ್ತು. ಮೈಕೇಲ್‌ಸನ್ ಮತ್ತು ಮಾರ್ಲೆ ಎಂಬ ವಿಜ್ಞಾನಿಗಳು ಅತಿ ಸೂಕ್ಷ್ಮವಾದ ಪ್ರಯೋಗಗಳಿಂದ ಆ ಭಾವನೆ ತಪ್ಪೆಂದು ತೋರಿಸಿಕೊಟ್ಟರು. ಹೀಗೆ ಆಧುನಿಕ ವಿಜ್ಞಾನಕ್ಕೆ ಪ್ರಯೋಗವೇ ಮೂಲಾಧಾರ.

**೫. ಸಾಮಾನ್ಯೀಕರಣ ಮತ್ತು ನಿಯಮಗಳು :** ಇದು ಮತ್ತೊಂದು ಮುಖ್ಯವಾದ ವೈಜ್ಞಾನಿಕ ಪ್ರಕ್ರಿಯೆ. ಮೇಲಕ್ಕೆಸೆದ ಪದಾರ್ಥಗಳೆಲ್ಲ ಕೆಳಕ್ಕೆ ಬೀಳುವುವು ಎಂದು ಸಾಮಾನ್ಯೀಕರಿಸಿ ಹೇಳಬಹುದು. ಗೆಲಿಲಿಯೊ ಕೆಲವು ಪ್ರಯೋಗಗಳ ನಂತರ, ಒಂದು ನಿರ್ದಿಷ್ಟ ಎತ್ತರದಿಂದ ಕೆಳಗೆ ಬಿಟ್ಟ ಪದಾರ್ಥಗಳೆಲ್ಲಾ – ಅವುಗಳ ತೂಕ ಎಷ್ಟೇ ಇರಲಿ – ನೆಲವನ್ನು ಮುಟ್ಟಲು ಒಂದೇ ಸಮಯವನ್ನು ತೆಗೆದುಕೊಳ್ಳುತ್ತವೆ ಎಂದು ಗಮನಿಸಿದ. ಇಂತಹ ಸಾಮಾನ್ಯೀಕರಣ ಪ್ರಥಮ ನೋಟದಲ್ಲಿ ನಂಬಲು ಕಷ್ಟವಾಗಬಹುದು. ಆದರೆ ಇದು ವಿಜ್ಞಾನದ ಪ್ರಗತಿಗೆ ಬಹಳ ಮುಖ್ಯ. ವ್ಯಾಪ್ತಿ ಹೆಚ್ಚು ವಿಶಾಲವಾದಂತೆ ಸಾಮಾನ್ಯೀಕರಣ ಹೆಚ್ಚು ಉಪಯುಕ್ತವಾದ ನಿಯಮಗಳಿಗೆ ಎಡೆ ಮಾಡಿಕೊಡುತ್ತದೆ. ಉದಾಹರಣೆಗೆ, ಒಂದು ನಿರ್ದಿಷ್ಟ ಎತ್ತರದಿಂದ ಕೆಳಗೆ ಬೀಳಿಸಿದ ವಸ್ತು ನೆಲವನ್ನು ತಲುಪಲು ಬೇಕಾಗುವ ಸಮಯವನ್ನು ಒಂದು ಸಮೀಕರಣದ ಸಹಾಯದಿಂದ ತಿಳಿಯಬಹುದು. ಗ್ರಹಗಳು ದೀರ್ಘವೃತ್ತಗಳಲ್ಲಿ ಸುತ್ತುತ್ತವೆ ಎಂದು ಕೆಪ್ಲರ್ ಸಾಮಾನ್ಯೀಕರಿಸಿದ. ಸೂರ್ಯನಿಂದ ಗ್ರಹಗಳ ದೂರ ಮತ್ತು ಅವುಗಳ ಪ್ರದಕ್ಷಿಣಾವಧಿಯನ್ನು ಕುರಿತು ಖಚಿತ ನಿಯಮಗಳನ್ನು ರೂಪಿಸಿದ. ಇವು ಕೆಪ್ಲರ್‌ನ ನಿಯಮಗಳೆಂದೇ ಪ್ರಸಿದ್ಧವಾಗಿವೆ. ಈ ನಿಯಮಗಳು ಗ್ರಹಗಳಿಗಷ್ಟೇ ಅಲ್ಲ, ಉಪಗ್ರಹ ಮತ್ತು ಕೃತಕ ಗ್ರಹಗಳಿಗೂ ಅನ್ವಯವಾಗುವುವು. ಸೌರಮಂಡಲದ ಆಚೆ ಇರುವ ನಕ್ಷತ್ರಗಳ ಗ್ರಹಗಳಿಗೂ ಅನ್ವಯವಾಗುವುವು.

ನಮ್ಮ ಭೂಮಿಯಲ್ಲಿ ಇಂದು ಇರುವ ಜೀವಿಗಳಲ್ಲಿ ಬಹುತೇಕ ಜೀವಿಗಳು ನೂರು ಮಿಲಿಯ ವರ್ಷಗಳ ಹಿಂದೆ ಇರಲಿಲ್ಲ. ಆಗ ಇದ್ದ ಜೀವಿಗಳು ನಶಿಸಿಹೋಗಿವೆ. ಬದಲಾದ ವಾತಾವರಣವೇ ಇದಕ್ಕೆ ಕಾರಣ. ಬದಲಾವಣೆಗೆ ಹೊಂದಿಕೊಳ್ಳುವಂತಹ ಪ್ರಾಣಿಗಳು ಉಳಿಯುವುವು, ಹೊಂದಿಕೊಳ್ಳಲಾರದಂಥವು ಅಳಿಯುವುವು. ಇದು ವಿಕಾಸವಾದದ ನಿಯಮ. ಇದನ್ನು ಮೊದಲು ಕಂಡುಕೊಂಡವನು ಚಾರ್ಲ್ಸ್ ಡಾರ್ವಿನ್. ಹೀಗೆ ನಿಯಮಗಳನ್ನು ರೂಪಿಸುವುದು ಯಾವುದೇ ವಿಜ್ಞಾನದಲ್ಲಿ ಬಹಳ ಮುಖ್ಯವಾದ ಬೆಳವಣಿಗೆ.

**೬. ಸಿದ್ಧಾಂತ :** ಮೇಲೆ ವಿವರಿಸಿದ ವೈಜ್ಞಾನಿಕ ಪ್ರಕ್ರಿಯೆಗಳ ಕೊನೆಯ ಹಂತ ಸಿದ್ಧಾಂತ. ಇದರ ಉದ್ದೇಶ ಪ್ರಕೃತಿಯ ಮೂಲ ನಿಯಮಗಳನ್ನು ತಿಳಿಯುವುದು ಮತ್ತು ಅವುಗಳ ಮೂಲಕ 'ವಿವಿಧ' ಪ್ರಯೋಗಗಳ ಮತ್ತು ವೀಕ್ಷಣೆಗಳ ಫಲಿತಾಂಶಗಳನ್ನು ವಿವರಿಸುವುದು ಮತ್ತು ಮೊದಲೇ ಕಂಡುಕೊಂಡ ನಿಯಮಗಳನ್ನು ಅರ್ಥಮಾಡಿಕೊಳ್ಳುವುದು. ಉದಾಹರಣೆಗೆ, ಮೇಲಕ್ಕೆಸೆದ ಕಲ್ಲು ಕೆಳಗೆ ಬೀಳುವುದು, ಹಣ್ಣು ಮರದಿಂದ ಉದುರುವುದು, ಫಿರಂಗಿಯಿಂದ ಹಾರಿಸಿದ ಗುಂಡು ಪರಿಕ್ರಮಿಸುವ ಹಾದಿ, ಗ್ರಹಗಳು ಸೂರ್ಯನ ಸುತ್ತ ಸುತ್ತುವ ಪರಿ, ಕ್ಷಿಪಣಿಗಳ ಚಲನೆ ಮುಂತಾದವುಗಳನ್ನೆಲ್ಲ ನ್ಯೂಟನ್‌ನ ಗುರುತ್ವಾಕರ್ಷಣ ಸಿದ್ಧಾಂತದಿಂದ ಸುಲಭವಾಗಿ ವಿವರಿಸಬಹುದು. ಹ್ಯಾಲಿ ಎಂಬುವವನು ಈ ಸಿದ್ಧಾಂತವನ್ನು ಉಪಯೋಗಿಸಿ ಧೂಮಕೇತುವೊಂದು ೭೬ ವರ್ಷಗಳಿಗೊಮ್ಮೆ ಗೋಚರಿಸುವುದೆಂದು ಭವಿಷ್ಯ ನುಡಿದಿದ್ದನು. ಇದೀಗ ನಿಜವಾಗಿದೆ. ಇದೇ ಹ್ಯಾಲಿ ಧೂಮಕೇತು. ನ್ಯೂಟನ್‌ನ ಗುರುತ್ವಾಕರ್ಷಣ ಸಿದ್ಧಾಂತ ಮೂಲತಃ ಬಹಳ ಸರಳ. ಅದರ ಪ್ರಕಾರ ಪ್ರತಿಯೊಂದು ವಸ್ತುವೂ ಮತ್ತೊಂದು ವಸ್ತುವನ್ನು ತನ್ನೆಡೆಗೆ ಆಕರ್ಷಿಸುವುದು. ಆಕರ್ಷಣ ಬಲ ಎರಡು ವಸ್ತುಗಳ ದ್ರವ್ಯರಾಶಿಗಳ ಗುಣಲಬ್ಧದಂತೆ ಹೆಚ್ಚುವುದು ಮತ್ತು ಅವುಗಳ ದೂರದ ವಿಲೋಮ ವರ್ಗದಂತೆ ಕಡಿಮೆಯಾಗುವುದು. ಈ ನಿಯಮ ವಿಶ್ವದ ಎಲ್ಲ ವಸ್ತುಗಳಿಗೂ ಅನ್ವಯವಾಗುವುದು. ಒಂದು ಸಿದ್ಧಾಂತದ ಸರಳತೆ ಮತ್ತು ವ್ಯಾಪ್ತಿ ಹೆಚ್ಚಾದಂತೆ ಅದರ ಸೌಂದರ್ಯ ಹೆಚ್ಚುವುದು. ಅಂತಹ ಸಿದ್ಧಾಂತ ಸತ್ಯಕ್ಕೆ ಬಹಳ ಹತ್ತಿರವಾಗಿರುತ್ತದೆಂದು ಅನೇಕ ವಿಜ್ಞಾನಿಗಳ ಅನಿಸಿಕೆ. ಗುರುತ್ವಾಕರ್ಷಣ ಸಿದ್ಧಾಂತ ಅಂತಹದು. ಒಂದು ಕಾಲದಲ್ಲಿ ನ್ಯೂಟನ್‌ನ ಸಿದ್ಧಾಂತ ಪರಿಪೂರ್ಣವೆಂದು ಪರಿಗಣಿಸಲಾಗಿತ್ತು. ಆದರೆ ೧೯ನೆಯ ಶತಮಾನದ ಕೊನೆಗೆ ಹೊಸ ಪ್ರಯೋಗಗಳ

ಫಲಿತಾಂಶಗಳು ಬರಲಾರಂಭಿಸಿದವು. ಬುಧಗ್ರಹದ ಚಲನೆಯನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಯಿತು. ಜಲಜನಕ ಮುಂತಾದ ಧಾತುಗಳ ವರ್ಣಪಟಲಗಳ ಸರಳ ನಿಯಮಗಳನ್ನು ಯಾವ ಸಿದ್ಧಾಂತದಿಂದಲೂ ವಿವರಿಸಲು ಆಗುತ್ತಿರಲಿಲ್ಲ. ಹೀಗೆಯೇ ಬೆಳಕಿನ ವೇಗ, ಬೆಳಕಿನ ವಿದ್ಯುತ್ ಪರಿಣಾಮ ಮುಂತಾದವುಗಳನ್ನು ವಿವರಿಸಲು ನ್ಯೂಟನ್‌ನ ಸಿದ್ಧಾಂತ ಉಪಯೋಗಕ್ಕೆ ಬರಲಿಲ್ಲ. ಹೀಗಾಗಿ ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಭೌತಶಾಸ್ತ್ರದಲ್ಲಿ ಅಲ್ಲೋಲಕಲ್ಲೋಲವಾಯಿತು. ಆಗ ಎರಡು ಹೊಸ ಸಿದ್ಧಾಂತಗಳು ಹುಟ್ಟಿಕೊಂಡವು. ಒಂದು, ಖಂಡಶಾಸ್ತ್ರ ಅಥವಾ ಕ್ವಾಂಟಂ ಸಿದ್ಧಾಂತ. ಮತ್ತೊಂದು, ಸಾಪೇಕ್ಷತಾ ಸಿದ್ಧಾಂತ. ಕ್ವಾಂಟಂ ಸಿದ್ಧಾಂತ ಸೂಕ್ಷ್ಮಾತಿಸೂಕ್ಷ್ಮ ಕಣಗಳಿಗೆ – ಅಣು, ಪರಮಾಣು, ಎಲೆಕ್ಟ್ರಾನ್, ಪ್ರೋಟಾನ್ ಮುಂತಾದವುಗಳಿಗೆ ಅನ್ವಯವಾಗುತ್ತದೆ. ಸಾಪೇಕ್ಷತಾ ಸಿದ್ಧಾಂತ ಬೆಳಕಿನ ವೇಗಕ್ಕೆ ಹತ್ತಿರವಾದ ವೇಗದಿಂದ ಚಲಿಸುವ ವಸ್ತುಗಳಿಗೆ ಅನ್ವಯವಾಗುತ್ತದೆ. ಗುರುತ್ವಾಕರ್ಷಣೆಗೆ ಸಂಬಂಧಪಟ್ಟ ಅತಿ ಸೂಕ್ಷ್ಮ ಪ್ರಯೋಗಗಳ ಫಲಿತಾಂಶಗಳನ್ನು ಮತ್ತು ನಕ್ಷತ್ರ, ಗೆಲಾಕ್ಸಿ ಮುಂತಾದ ಆಕಾಶಕಾಯಗಳ ರಚನೆ ಮತ್ತು ಚಲನೆಗಳನ್ನು ಅರ್ಥಮಾಡಿಕೊಳ್ಳಲೂ ಸಾಪೇಕ್ಷತಾ ಸಿದ್ಧಾಂತ ಬಹಳ ಉಪಯೋಗಕಾರಿ. ಅಂದರೆ ನ್ಯೂಟನ್‌ನ ಸಿದ್ಧಾಂತ ತಪ್ಪೆಂದು ತಿಳಿಯಬೇಕೆ ? ಖಂಡಿತ ಹಾಗಲ್ಲ. ನ್ಯೂಟನ್‌ನ ಸಿದ್ಧಾಂತದ ವ್ಯಾಪ್ತಿಯೇ ಬೇರೆ. ಕ್ವಾಂಟಂ ಮತ್ತು ಸಾಪೇಕ್ಷತಾ ಸಿದ್ಧಾಂತಗಳ ವ್ಯಾಪ್ತಿಗಳೇ ಬೇರೆ. ಎಲ್ಲವನ್ನೂ ಎಲ್ಲಕಡೆಯೂ ಬಳಸಲಾಗುವುದಿಲ್ಲ. ಕ್ವಾಂಟಂ ಮತ್ತು ಸಾಪೇಕ್ಷತಾ ಸಿದ್ಧಾಂತಗಳು ಸರಳವಲ್ಲ. ಆದರೆ ಬಲ್ಲವರಿಗೆ ಅವುಗಳಲ್ಲಿನ ಆಂತರಿಕ ಸೌಂದರ್ಯ ಬಹಳ ಆಪ್ಯಾಯಮಾನ. ಈ ಸಿದ್ಧಾಂತಗಳು ಹಿಂದೆ ವಿವರಣೆ ಸಿಗದ ಅನೇಕ ಪ್ರಯೋಗಗಳ ಫಲಿತಾಂಶಗಳನ್ನು ಸಮರ್ಪಕವಾಗಿ ವಿವರಿಸಿವೆ. ಅಷ್ಟೇ ಅಲ್ಲ, ಈ ಸಿದ್ಧಾಂತಗಳ ಅನೇಕ ಮುನ್ಸೂಚನೆಗಳನ್ನು ಹೊಸ ಪ್ರಯೋಗಗಳು ನಿಜವೆಂದು ತೋರಿಸಿಕೊಟ್ಟಿವೆ. ಉದಾಹರಣೆಗೆ, ಕಪ್ಪು ಕುಳಿಗಳ ಅಸ್ತಿತ್ವವನ್ನು ಸಾಪೇಕ್ಷತಾ ಸಿದ್ಧಾಂತ ಮೊದಲೇ ಸೂಚಿಸಿತ್ತು; ಖಗೋಳ ವಿಜ್ಞಾನಿಗಳು ಅದನ್ನು ಅನೇಕ ವರ್ಷಗಳ ನಂತರ ಕಂಡುಹಿಡಿದರು. ವಿಜ್ಞಾನ ಬೆಳೆದಂತೆ ವಿಜ್ಞಾನಿಗಳ ಸಾಮರ್ಥ್ಯ ಹೆಚ್ಚುತ್ತದೆ.

ವೈಜ್ಞಾನಿಕ ಪ್ರಕ್ರಿಯೆ ಮೇಲೆ ಹೇಳಿದ ಕ್ರಮದಲ್ಲಿಯೇ ನಡೆಯಬೇಕೆಂದಿಲ್ಲ. ಕೆಲವು ವಿಜ್ಞಾನಿಗಳು ಕೇವಲ ಪ್ರಯೋಗಗಳನ್ನು ಮಾಡುವುದರಲ್ಲೇ ಆಸಕ್ತಿ ಹೊಂದಿದ್ದರೆ ಮತ್ತೆ ಕೆಲವರು ಸಿದ್ಧಾಂತಗಳನ್ನು ರೂಪಿಸುವುದರಲ್ಲಿ ಮಗ್ನರಾಗಿರುತ್ತಾರೆ. ಇನ್ನೂ ಕೆಲವರು ವೀಕ್ಷಣೆ ಮತ್ತು ವರ್ಗೀಕರಣ ಕಾರ್ಯದಲ್ಲಿ ಆಸಕ್ತಿಯುಳ್ಳವರಾಗಿರುತ್ತಾರೆ. ಒಬ್ಬರು ಮಾಡಿದ ಅನ್ವೇಷಣೆಯಿಂದ ಮತ್ತೊಬ್ಬರು ಪ್ರಚೋದಿತರಾಗುತ್ತಾರೆ. ಸಂಶೋಧನೆಯನ್ನು ನಡೆಸುವ ವಿಜ್ಞಾನಿಗಳು ತಮ್ಮ ಕಾರ್ಯಕ್ಷೇತ್ರದಲ್ಲಿ ಇದುವರೆಗೆ ನಡೆದಿರುವ ಮುನ್ನಡೆಯನ್ನು ಅರಿತಿರಬೇಕು. ಹಾಗೆಯೇ ತಮ್ಮ ಸಮಕಾಲೀನರು ಮಾಡುತ್ತಿರುವ ಸಂಶೋಧನೆಗಳ ಬಗ್ಗೆಯೂ ಮಾಹಿತಿಯನ್ನು ಪಡೆದಿರಬೇಕು. ಇಲ್ಲದಿದ್ದರೆ ಸಂಶೋಧನೆ ತಪ್ಪು ಹಾದಿಯಲ್ಲಿ ಹೋಗಬಹುದು. ಇಲ್ಲವೇ ಪುನರಾವರ್ತನೆ ಆಗಬಹುದು. ಇದಕ್ಕಾಗಿಯೇ ಪ್ರತಿಯೊಂದು ಕಾರ್ಯಕ್ಷೇತ್ರದಲ್ಲೂ ಅನೇಕ ನಿಯತಕಾಲಿಕ ಪತ್ರಿಕೆಗಳು ವಿವಿಧ ದೇಶಗಳಲ್ಲಿ ಪ್ರಕಟವಾಗುತ್ತವೆ.





ಆಗಿಂದಾಗ್ಗೆ ವಿಜ್ಞಾನಿಗಳು ಸಭೆ ಸೇರಿ ತಾವು ಮಾಡುತ್ತಿರುವ ಸಂಶೋಧನೆಗಳ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಾರೆ. ಆಧುನಿಕ ಸಂಶೋಧನೆಗಳನ್ನೊಳಗೊಂಡ ಪುಸ್ತಕಗಳೂ ಪ್ರಕಟವಾಗುತ್ತಿರುತ್ತವೆ. ವಿಜ್ಞಾನಿಯಾದವನು ಇವುಗಳನ್ನು ಓದಬೇಕು. ಇಂದು ವಿಜ್ಞಾನ ಹೆಮ್ಮರವಾಗಿ ಬೆಳೆದಿದೆ, ಬೆಳೆಯುತ್ತಲೇ ಇದೆ. ಯಾರ ಸಂಪರ್ಕವೂ ಇಲ್ಲದೆ ಮನೆಯಲ್ಲೋ, ಆಶ್ರಮದಲ್ಲೋ ಕುಳಿತು ವೈಜ್ಞಾನಿಕ ಸಂಶೋಧನೆಗಳನ್ನು ನಡೆಸುವುದು ಇಂದು ಸಾಧ್ಯವಿಲ್ಲ. ನೂರು ವರ್ಷಗಳ ಹಿಂದೆ ಆಲ್ಬರ್ಟ್ ಐನ್‌ಸ್ಟೈನ್ ಪೇಟೆಂಟ್ ಕಛೇರಿಯಲ್ಲಿ ಕುಳಿತು ಸಾಪೇಕ್ಷತಾ ಸಿದ್ಧಾಂತವನ್ನು ರೂಪಿಸಿದ್ದು ನಿಜ. ಆದರೆ ಇಂದು ಸ್ಥಿತಿ ಬದಲಾಗಿದೆ. ವಿಜ್ಞಾನ ಒಂದು ಸಾಮೂಹಿಕ ಚಟುವಟಿಕೆಯಾಗಿದೆ. ಹಾಗೆಂದ ಮಾತ್ರಕ್ಕೆ ವಿಜ್ಞಾನಿಗೆ ವೈಯಕ್ತಿಕ ಸ್ವಾತಂತ್ರ್ಯ ಇಲ್ಲವೆಂದಲ್ಲ. ಆದರೆ ಅದು ಹೆಚ್ಚು ಹೆಚ್ಚು ಸೀಮಿತವಾಗುತ್ತಿದೆ. ಒಂದು ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರು ಮತ್ತೊಂದು ಕಾರ್ಯಕ್ಷೇತ್ರಕ್ಕೆ ದಿಢೀರನೆ ಧುಮುಕುವುದು ಕಷ್ಟ ಮತ್ತು ಅಪಾಯಕಾರಿ ಕೂಡ. ಒಂದು ಉದಾಹರಣೆ ಇದನ್ನು ಸ್ಪಷ್ಟಪಡಿಸಬಹುದು. ಸುಮಾರು ಎಪ್ಪತ್ತು ವರ್ಷಗಳ ಹಿಂದೆ ವಿಜ್ಞಾನಿಗಳು ಪರಮಾಣುವನ್ನು ಭಜಿಸಿ ಶಕ್ತಿಯನ್ನು ಪಡೆಯುವ ವಿಧಾನವನ್ನು ಕಂಡುಕೊಂಡರು. ಇದು ಮಹಾ ವಿನಾಶಕಾರಿ ಪರಮಾಣು ಬಾಂಬುಗಳಿಗೂ ಮತ್ತು ಉಪಯುಕ್ತವಾದ ವಿದ್ಯುತ್ ಉತ್ಪಾದನಾ ಘಟಕಗಳಿಗೂ ದಾರಿಮಾಡಿಕೊಟ್ಟಿತು. ಹಾಗೆಯೇ ಪರಮಾಣು ಸಂಯೋಜನೆಯಿಂದಲೂ ಅಪಾರ ಶಕ್ತಿಯನ್ನು ಪಡೆಯಬಹುದು. ಇದು ಪರಮಾಣು ಬಾಂಬುಗಳಿಗಿಂತ ಹೆಚ್ಚು ವಿನಾಶಕಾರಿಯಾದ ಜಲಜನಕದ ಬಾಂಬುಗಳಿಗೆ ದಾರಿ ಮಾಡಿಕೊಟ್ಟಿತು. ಪರಮಾಣು ಸಂಯೋಜನೆಯಿಂದ ವಿದ್ಯುತ್ತನ್ನು ಉತ್ಪಾದಿಸುವಂತಾದರೆ ಜಗತ್ತಿನ ಇಂಧನ ಸಮಸ್ಯೆಗೆ ಶಾಶ್ವತ ಪರಿಹಾರ ದೊರೆತಂತಾಗುತ್ತದೆ. ಕಳೆದ ಆರು ದಶಕಗಳಿಂದ ಅನೇಕ ದೇಶಗಳ ಸಾವಿರಾರು ವಿಜ್ಞಾನಿಗಳು ಕೋಟ್ಯಂತರ ಡಾಲರುಗಳನ್ನು ಖರ್ಚು ಮಾಡಿ ಸಂಶೋಧನೆ ಮಾಡುತ್ತಿದ್ದಾರೆ. ಇಷ್ಟಾದರೂ ಪರಮಾಣು ಸಂಯೋಜನೆಯಿಂದ ವಿದ್ಯುತ್ತನ್ನು ಉತ್ಪಾದಿಸಲು ಸಾಧ್ಯವಾಗಿಲ್ಲ. ಇದಕ್ಕೆ ಮುಖ್ಯ ಕಾರಣ ಈ ಕ್ರಿಯೆಗೆ ಬೇಕಾದ ಹಲವು ಮಿಲಿಯನ್ ಡಿಗ್ರಿಗಳಷ್ಟು ಉಷ್ಣತೆ ಮತ್ತು ಇಂಧನದ ಸಾಂದ್ರತೆ. ಹೀಗಿರುವಲ್ಲಿ ಸುಮಾರು ೨೨ ವರ್ಷಗಳ ಹಿಂದೆ ಕೆಲವು ವಿದ್ಯುತ್ ರಸಾಯನವಿಜ್ಞಾನಿಗಳು ಒಂದು ಸಣ್ಣ ಗಾಜಿನ ಪಾತ್ರೆಯಲ್ಲಿನ ದ್ರವವೊಂದರಲ್ಲಿ ಸಾಮಾನ್ಯ ಉಷ್ಣತೆಯಲ್ಲಿ ಪರಮಾಣು ಸಂಯೋಜನೆಯಿಂದ ಶಕ್ತಿಯನ್ನು ಉತ್ಪಾದಿಸಿದ್ದಾಗಿ ಹೇಳಿಕೊಂಡು ಪ್ರಬಂಧವನ್ನು ಪ್ರಕಟಿಸಿ ಇದನ್ನು ಶೀತಲ ಸಂಯೋಜನೆ – ಕೋಲ್ಡ್ ಫ್ಯೂಷನ್ – ಎಂದರು. ಇದು ವಿಜ್ಞಾನ ಪ್ರಪಂಚದಲ್ಲಿ ಕೋಲಾಹಲವನ್ನುಂಟುಮಾಡಿ ಪರಮಾಣು ವಿಜ್ಞಾನಿಗಳನ್ನು ಬಡಿದೆಬ್ಬಿಸಿತು. ವಿಜ್ಞಾನಿಗಳಿಗೆ ತಿಳಿದ ಭೌತಶಾಸ್ತ್ರದ ನಿಯಮಗಳಂತೆ ಶೀತಲ ಸಂಯೋಜನೆ ಅಸಾಧ್ಯ. ವಿಶ್ವದ ನಾನಾ ಪ್ರಯೋಗಶಾಲೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಈ ಪ್ರಯೋಗವನ್ನು ಅನೇಕ ಬಾರಿ ಮಾಡಿ ನೋಡಿದರೂ ಪರಮಾಣು ಸಂಯೋಜನೆಯ ಯಾವ ಕುರುಹೂ ಕಾಣಲಿಲ್ಲ. ಕೊನೆಗೆ ವಿದ್ಯುತ್ ರಸಾಯನಶಾಸ್ತ್ರಜ್ಞರು ಪ್ರಕಟಿಸಿದ ಪ್ರಬಂಧದಲ್ಲಿ ಹುರುಳಿಲ್ಲವೆಂದು ಕೈಬಿಟ್ಟರು. ದಿಢೀರ್ ಖ್ಯಾತಿ ಮತ್ತು ಹಣ ಗಳಿಸುವ ಉದ್ದೇಶವೇ ಇಂತಹ

# ಹೈಕುಗಳು



ಬೆಳೆದು ನಿಂತು
ಬಾಗಿರುವ ಆ
ಪೈರುಗಳಲ್ಲಿ
ಬೆವರಿನ
ಪಾಲೂ ಇದೆ.



ಆಗಸದಲ್ಲಿದ್ದ
ಚಂದಿರ
ಮೀಯಲು,
ಈ ನೀರಿಗೆ
ಬಿದ್ದ.



ಅಲ್ಲಿ ಹೂವರಳಿದರೆ
ಈ ಗಾಳಿಗೆಷ್ಟು
ತವಕ?!
ಊರೆಲ್ಲಾ
ಸುದ್ದಿಮಾಡುವುದುಕ್ಕೆ



ಆ ಪುಟ್ಟ ಬೀಜದ
ಗರ್ಭದೊಳಗೆ
ಒಂದು ಕಾಡು
ಅವಿತು ಕುಳಿತಿದೆ.

ಸಂತೋಷ ಬ. ಅಂಗಡಿ
ಗ್ರಾಮ ಚಾವಡಿ ಎದಿರು, ಬ್ರಾಹ್ಮಣರ ಬೀದಿ
ಮುಂಡರಗಿ – ೫೮೨೧೧೮, ಗದಗ ಜಿಲ್ಲೆ

'ವೈಜ್ಞಾನಿಕ' ಪ್ರಮಾದಗಳಿಗೆ ಕಾರಣ. ಮತ್ತೆ ಮತ್ತೆ ಪರೀಕ್ಷಿಸದೆ, ಮತ್ತೆ ಮತ್ತೆ ಪ್ರಯೋಗಗಳನ್ನು ಮಾಡದೆ ವಿಜ್ಞಾನಿಗಳು ಯಾವುದನ್ನೂ ಸರಿಯೆಂದು ಸ್ವೀಕರಿಸುವುದಿಲ್ಲವೆಂಬುದಕ್ಕೆ ಇದೊಂದು ಉತ್ತಮ ನಿದರ್ಶನ. ಹಾಗೆಯೇ ವಿಜ್ಞಾನಿಗಳು ತಮ್ಮ ಪ್ರಯೋಗಗಳ ಫಲಿತಾಂಶಗಳನ್ನು ಪ್ರಕಟಿಸುವ ಮೊದಲು ಎಷ್ಟು ಜಾಗರೂಕರಾಗಿರಬೇಕೆಂಬುದಕ್ಕೂ ಇದು ಒಂದು ಉದಾಹರಣೆ.

**ವಿಜ್ಞಾನಿ**

ವಿಜ್ಞಾನ ವಸ್ತುನಿಷ್ಠ, ವ್ಯಕ್ತಿನಿಷ್ಠವಲ್ಲ. ಒಬ್ಬ ಬಹು ಹೆಸರಾಂತ ಮತ್ತು ಗೌರವಾನ್ವಿತ ವಿಜ್ಞಾನಿಯಾಗಿರಬಹುದು. ಆದರೂ, ಆತನ ಸಂಶೋಧನೆಯನ್ನಾಗಲೀ ಅಥವಾ ಅಭಿಪ್ರಾಯವನ್ನಾಗಲೀ ಇತರ ವಿಜ್ಞಾನಿಗಳು ಒರೆ ಹಚ್ಚದೇ ಒಪ್ಪುವುದಿಲ್ಲ. ಉದಾಹರಣೆಗೆ, ಐನ್‌ಸ್ಟೈನ್ ಮಹಾ ವಿಜ್ಞಾನಿ. ಸಾಪೇಕ್ಷ ಸಿದ್ಧಾಂತದ ಜನಕನಾದ ಈತ ಕ್ವಾಂಟಂ ಸಿದ್ಧಾಂತದ ತಳಹದಿಗೆ ಬೇಕಾಗುವ ಸಂಶೋಧನೆಗಳನ್ನು ಮಾಡಿದ್ದಾನೆ. ಕ್ವಾಂಟಂ ಸಿದ್ಧಾಂತದ ಒಂದು ಮೂಲತತ್ತ್ವ ಅನಿಶ್ಚಿತತೆ. ಇದರ ಪ್ರಕಾರ ಯಾವುದೇ ಅಣುವಿನಲ್ಲಿರುವ ಒಂದು ಎಲೆಕ್ಟ್ರಾನ್ ಯಾವಾಗ ಎಲ್ಲಿ ಇರುವುದೆಂದು ಹೇಳಲಾಗುವುದಿಲ್ಲ. ಅದು ಒಂದು ನಿರ್ದಿಷ್ಟ ಸ್ಥಳದಲ್ಲಿರುವ ಸಾಧ್ಯತೆಯನ್ನು ಅಂದಾಜು ಮಾಡಬಹುದಷ್ಟೆ, ನಿಖರವಾಗಿ ತಿಳಿಯುವುದು ಅಸಾಧ್ಯ. ಹಾಗೆಯೇ, ಒಂದು ಎಲೆಕ್ಟ್ರಾನ್ ಒಂದು ಸಣ್ಣ ರಂಧ್ರದ ಮೂಲಕ ಹಾಯ್ದಾಗ ಅದು ಎಲ್ಲಿ ಹೋಗುತ್ತದೆ ಎಂದು ನಿಖರವಾಗಿ ಹೇಳಲಾಗುವುದಿಲ್ಲ. ಆದರೆ ಅದು ಯಾವ ದಿಕ್ಕಿನಲ್ಲಿ ಹೋಗುವ 'ಸಾಧ್ಯತೆ' ಎಷ್ಟು ಎಂಬುದನ್ನು ಲೆಕ್ಕಾಚಾರ ಮಾಡಿ ನಿಖರವಾಗಿ ಹೇಳಬಹುದು. ಇದು ಒಂದು ರೀತಿ ದಾಳ ಹಾಕಿದಂತೆ. ಗರ ಎಷ್ಟು ಬೀಳುವುದೆಂದು ಹೇಳಲು ಸಾಧ್ಯವಿಲ್ಲ. ಐನ್‌ಸ್ಟೈನ್‌ಗೆ ಕ್ವಾಂಟಂ ಸಿದ್ಧಾಂತದ ಅನಿಶ್ಚಿತತೆಯ ಈ ದೃಷ್ಟಿಕೋನ ಸರಿಕಾಣಲಿಲ್ಲ. ''ಭಗವಂತ ದಾಳ ಹಾಕುವ ಜೂಜುಗಾರನಲ್ಲ'' ಎಂದು ಆತ ಹೇಳಿದ. ಆದರೆ ಇತರರು ಇದನ್ನು ಒಪ್ಪಲಿಲ್ಲ. ಮ್ಯಾಕ್ಸ್ ಬಾರ್ನ್ ಎಂಬ ಮತ್ತೊಬ್ಬ ಪ್ರಸಿದ್ಧ ವಿಜ್ಞಾನಿ, ''ದೇವರು ಏನು ಮಾಡಬೇಕೆಂದು ನೀನು ಹೇಳುವ ಅವಶ್ಯಕತೆ ಇಲ್ಲ'' ಎಂದು ಐನ್‌ಸ್ಟೈನ್‌ಗೆ ಹೇಳಿದನಂತೆ ! ಈಗ ಕ್ವಾಂಟಂ ಸಿದ್ಧಾಂತದಲ್ಲಿ ಅನಿಶ್ಚಿತೆಯ ತತ್ತ್ವ ಬಲವಾಗಿ ಬೇರೂರಿದೆ. ಐನ್‌ಸ್ಟೈನ್‌ನ ಅಭಿಪ್ರಾಯ ತಪ್ಪೆಂದು ಸಿದ್ಧವಾಗಿದೆ. ಹೀಗೆ ವಿಜ್ಞಾನದಲ್ಲಿ ವಿಜ್ಞಾನಿಯ ವೈಯಕ್ತಿಕ ಅಭಿಪ್ರಾಯಗಳು ಗೌಣ. ಆತನ ಸಂಶೋಧನೆ ಸರಿಯೆಂದು ಕಂಡುಬಂದಲ್ಲಿ ಎಲ್ಲರೂ ಅದನ್ನು ಒಪ್ಪುವರು.

ಆದರೆ ವಿಜ್ಞಾನಿ ಇಲ್ಲದೆ ವಿಜ್ಞಾನವಿಲ್ಲ. ವಿಜ್ಞಾನಿಯ ವ್ಯಕ್ತಿತ್ವ ಆತನ ಸಂಶೋಧನೆಯ ಮೇಲೆ ಪರಿಣಾಮ ಬೀರುವುದು ಸಹಜ. ವಿಜ್ಞಾನಿಯ ಆಲೋಚನಾ ಲಹರಿ ಸದಾ ತರ್ಕಬದ್ಧವಾಗಿಲ್ಲದಿರಬಹುದು. ಆಲ್ಬರ್ಟ್ ಐನ್‌ಸ್ಟೈನ್‌ನ ಸಾಪೇಕ್ಷತಾವಾದವನ್ನು ರೂಪಿಸುವಾಗ ಬೆಳಕಿನ ವೇಗ ನಿರ್ವಾತ ಪ್ರದೇಶದಲ್ಲಿ ಒಂದು ಸ್ಥಿರಾಂಕವೆಂದೂ ಮತ್ತು ಯಾವುದೇ ವಸ್ತು ಬೆಳಕಿಗಿಂತ ಹೆಚ್ಚು ವೇಗದಲ್ಲಿ ಚಲಿಸಲಾರದೆಂದೂ ಪ್ರಸ್ತಾವನೆಯಲ್ಲಿಯೇ ಮಂಡಿಸಿದನು. ಹಾಗೆ ಹೇಳಲು ಯಾವ ಬಲವಾದ ಕಾರಣಗಳೂ ಇದ್ದಂತೆ ಕಾಣುವುದಿಲ್ಲ. ಐನ್‌ಸ್ಟೈನ್ ಹುಟ್ಟಿರದಿದ್ದರೆ ಬೇರೆ ಯಾರಾದರೂ ಸಾಪೇಕ್ಷತಾವಾದವನ್ನು ಮಂಡಿಸುತ್ತಿದ್ದರೆ ? ಹೌದು ಎಂದು ಹೇಳಿದ ಐನ್‌ಸ್ಟೈನ್ ಕೆಲವು ವಿಜ್ಞಾನಿಗಳ ಹೆಸರನ್ನು ಸೂಚಿಸಿದ್ದಾನೆ. ಇರಬಹುದು. ಆದರೆ ಇಪ್ಪತ್ತನೇ ಶತಮಾನದ ಆದಿಯಲ್ಲಿ ಸಾಪೇಕ್ಷತಾವಾದ ಉದ್ಭವಿಸಲೇಬೇಕಾದ ಅನಿವಾರ್ಯ ಸಂದರ್ಭಗಳೇನೂ ಇರಲಿಲ್ಲ. ಬಹುಶಃ ಕೆಲವು ದಶಕಗಳ ನಂತರ ಹುಟ್ಟುತ್ತಿತ್ತೇನೋ.

ಒಬ್ಬ ವ್ಯಕ್ತಿಯ (ವಿಜ್ಞಾನಿಯ) ವ್ಯಕ್ತಿತ್ವ ಆತನು ಹುಟ್ಟಿ ಬೆಳೆದು ಪೋಷಿಸಲ್ಪಟ್ಟ ಸಮಾಜದಿಂದ ರೂಪಿತವಾಗಿರುತ್ತದೆ. ಆದರೆ ಎಲ್ಲರೂ ತಮ್ಮ ಪರಿಸರಕ್ಕೆ ಒಂದೇ ರೀತಿಯಲ್ಲಿ ಸ್ಪಂದಿಸುವುದಿಲ್ಲ. ವಿಜ್ಞಾನಿಯು ಮಾಡುವ ಸಂಶೋಧನೆಗಳೂ ಮತ್ತು ಪ್ರತಿಪಾದಿಸುವ ಸಿದ್ಧಾಂತಗಳೂ ಆತನ ವ್ಯಕ್ತಿತ್ವ ಮತ್ತು ಆತನು ಬೆಳೆದು ಬಂದ ಸಮಾಜಗಳಿಂದ ಪ್ರಭಾವಿತವಾಗಿರುತ್ತದೆ. ಈ ಸಂದರ್ಭದಲ್ಲಿ, ವಿಜ್ಞಾನಿಯ ಮತಧರ್ಮಗಳು ಅವರು ಮಾಡುವ ವೈಜ್ಞಾನಿಕ ಕೆಲಸದ ಮೇಲೆ ಪರಿಣಾಮವನ್ನುಂಟುಮಾಡುತ್ತದೆಯೇ ಎಂಬ ಪ್ರಶ್ನೆ ಉದ್ಭವಿಸುವುದು ಸ್ವಾಭಾವಿಕ. ಹಾಗೆಯೇ ಒಬ್ಬ ವ್ಯಕ್ತಿಯ ವೈಜ್ಞಾನಿಕ ಜ್ಞಾನ ಹೆಚ್ಚಾದಂತೆ, ಮತ, ಧರ್ಮ, ದೇವರು ಇತ್ಯಾದಿಗಳ ಬಗ್ಗೆ ಆತನ ಅಭಿಪ್ರಾಯ ಬದಲಾಗುವುದೆ ಎಂಬ ಪ್ರಶ್ನೆಯೂ ಸಹಜ. ಪ್ರತಿಯೊಂದು ಸಮಾಜದಲ್ಲಿಯೂ ಮತ, ಧರ್ಮ, ದೇವರು ಇತ್ಯಾದಿಗಳ ಬಗ್ಗೆ ಕೆಲವು ಅಭಿಪ್ರಾಯಗಳು ಅಥವಾ ನಂಬಿಕೆಗಳು ಬಹಳ ಆಳವಾಗಿ ಬೇರೂರಿವೆ. ಇವುಗಳನ್ನು ಪೋಷಿಸುವುದು ಕೆಲವರಿಗೆ ಲಾಭದಾಯಕವಾಗಿದೆ. ವೈಜ್ಞಾನಿಕವಾಗಿ ಕಂಡುಕೊಂಡ ಸತ್ಯಗಳು ಇಂತಹ ನಂಬಿಕೆಗಳಿಗೆ ವಿರುದ್ಧವಾಗಿದ್ದರೆ ತಿಕ್ಕಾಟ ಉದ್ಭವಿಸುವುದು ಸಾಧ್ಯ. ಖ್ಯಾತ ವಿಜ್ಞಾನಿ ಗೆಲಿಲಿಯೊ ಮತ್ತು ಅಂದಿನ ಕ್ರಿಶ್ಚಿಯನ್ ಧರ್ಮ-ಗುರುಗಳ ನಡುವೆ ಉಂಟಾದ ಘರ್ಷಣೆ ಜನಜನಿತ.

ಇಂದಿನ ವಿಜ್ಞಾನಿಗಳಿಗೂ ಮತ್ತು ಎರಡನೆಯ ಮಹಾಯುದ್ಧದ ಮೊದಲಿನ ವಿಜ್ಞಾನಿಗಳಿಗೂ ಬಹಳ ವ್ಯತ್ಯಾಸವಿದೆ. ಅಂದಿನವರನ್ನು ಹವ್ಯಾಸಿ ವಿಜ್ಞಾನಿಗಳೆಂದು ಮತ್ತು ಇಂದಿನವರನ್ನು ವೃತ್ತಿಪರ ವಿಜ್ಞಾನಿಗಳೆಂದೂ ಕರೆಯಬಹುದು. ಹಿಂದಿನವರಿಗೆ ತಮ್ಮ ಸಂಶೋಧನೆಯಲ್ಲಿ ಅಪಾರ ವೈಯಕ್ತಿಕ ಆಸಕ್ತಿ ಇದ್ದಿತು. ತಮ್ಮ ಸ್ವಂತ ಹಣದಿಂದಲೋ, ಇಲ್ಲವೇ ಅವರಿವರ ಸಹಾಯದಿಂದಲೋ ಸಂಶೋಧನೆಯನ್ನು ನಡೆಸುತ್ತಿದ್ದರು. ಕೆಲವರಿಗೆ ಮಾತ್ರ ಸರ್ಕಾರದ ಅಥವಾ ವಿಶ್ವವಿದ್ಯಾಲಯಗಳ ಪೂರ್ಣ ಬೆಂಬಲ ಸಿಗುತ್ತಿತ್ತು. ತಮಗೆ ಬೇಕಾದ ಉಪಕರಣಗಳನ್ನು ತಾವೇ ಸಿದ್ಧಪಡಿಸಿಕೊಳ್ಳುತ್ತಿದ್ದರು. ಕೆಲವರು ಬಹಳ ಕಾಲ ತಮ್ಮ ಸಂಶೋಧನೆಗಳನ್ನು ಗೋಪ್ಯವಾಗಿರಿಸಿಕೊಳ್ಳುತ್ತಿದ್ದರು, ನ್ಯೂಟನ್ ಮತ್ತು ಡಾರ್ವಿನ್ನರಂತೆ. ತಮ್ಮ

ಸಂಶೋಧನೆ ಪರಿಪೂರ್ಣವಲ್ಲವೆಂಬ ಭಾವನೆ, ಕೃತಿಚೌರ್ಯದ ಸಂಶಯ, ಇತರ ವಿಜ್ಞಾನಿಗಳು ತಮ್ಮ ಸಂಶೋಧನೆಗಳನ್ನು ಅಪಹಾಸ್ಯ ಮಾಡುವರೆಂಬ ಭೀತಿ ಅವರನ್ನು ಒಮ್ಮೊಮ್ಮೆ ಕಾಡುತ್ತಿದ್ದವು. ಅಂದಿನ ದಿನಗಳಲ್ಲಿ ವೈಜ್ಞಾನಿಕ ನಿಯತಕಾಲಿಕಗಳೂ ಸಮ್ಮೇಳನಗಳೂ ಬಹಳ ಕಡಿಮೆ. ಆ ಅವಧಿಯನ್ನು ವಿಜ್ಞಾನದಲ್ಲಿ ಮೂಲಭೂತ ಸಂಶೋಧನೆಗಳ ಸುಗ್ಗಿಯ ಕಾಲವೆಂದು ಹೇಳಬಹುದು.

ಎರಡನೆಯ ಮಹಾಯುದ್ಧದಲ್ಲಿ ಸರ್ಕಾರಗಳು ವಿಜ್ಞಾನಿಗಳನ್ನು ಯುದ್ಧಪರ ಸಂಶೋಧನೆಗಳಿಗೆ ಉಪಯೋಗಿಸಿಕೊಳ್ಳತೊಡಗಿದರು. ವಿಜ್ಞಾನಿಗಳಿಗೆ ಹೆಚ್ಚು ಹಣ ಮತ್ತು ಪ್ರೋತ್ಸಾಹ ದೊರೆಯಲಾರಂಭಿಸಿತು. ಆದರೆ ವಿಜ್ಞಾನಿಗಳು ತಮ್ಮ ವೈಯಕ್ತಿಕ ಆಸಕ್ತಿಗಳನ್ನು ಬದಿಗಿಟ್ಟು ಸರ್ಕಾರಗಳು ಹೇಳಿದ ವಿಷಯಗಳ ಮೇಲೆ ಸಂಶೋಧನೆ ಮಾಡಬೇಕಾಯಿತು. ಅನ್ವಯಿಕ ಸಂಶೋಧನೆ ಮತ್ತು ತಂತ್ರಜ್ಞಾನಕ್ಕೆ ಹೆಚ್ಚು ಪ್ರಾಮುಖ್ಯತೆ ದೊರೆಯಿತು. ಮಹಾಯುದ್ಧ ಮುಗಿದು ಶೀತಲ ಸಮರ ಶುರುವಾದಾಗ ಇದೇ ಪರಿಸ್ಥಿತಿ ಮುಂದುವರಿದರೂ ವಿಜ್ಞಾನಿಗಳಿಗೆ ಹೆಚ್ಚಿನ ಸ್ವಾತಂತ್ರ್ಯ ದೊರಕಿತು. ಹಾಗೆಯೇ ಸೌಲಭ್ಯಗಳೂ ಮತ್ತು ಅವಕಾಶಗಳೂ ಹೆಚ್ಚಿದವು. ಸರ್ಕಾರಗಳು ಪ್ರಯೋಗಶಾಲೆ ಮತ್ತು ವಿಶ್ವವಿದ್ಯಾಲಯಗಳಿಗೆ ಹೆಚ್ಚು ಹಣವನ್ನು ವಿತರಿಸಲಾರಂಭಿಸಿದವು. ವಿಜ್ಞಾನಿಗಳ ಸಂಖ್ಯೆ ಹೆಚ್ಚಾಗತೊಡಗಿತು. ವೈಜ್ಞಾನಿಕ ಉಪಕರಣಗಳು ಹೆಚ್ಚು ಜಟಿಲವಾದಂತೆ ಅವುಗಳನ್ನು ತಯಾರಿಸಲೆಂದೇ ಅನೇಕ ಉದ್ಯಮಗಳು ಹುಟ್ಟಿಕೊಂಡವು. ಹೊಸದಾಗಿ ಸ್ವತಂತ್ರವಾದ ಹಿಂದುಳಿದ ದೇಶಗಳೂ ವಿಜ್ಞಾನಕ್ಕೆ ಹೆಚ್ಚು ಪ್ರೋತ್ಸಾಹ ಕೊಡಲಾರಂಭಿಸಿದವು. ವಿಜ್ಞಾನಕ್ಕೆ ನೀಡುತ್ತಿದ್ದ ಪ್ರಾಮುಖ್ಯತೆ ಹೆಚ್ಚಿತು. ಇಂದಿನ ವಿಜ್ಞಾನ ಬಹಳ ದುಬಾರಿ. ವೈಜ್ಞಾನಿಕ ಸಮ್ಮೇಳನಗಳೂ ನಿಯತಕಾಲಿಕಗಳೂ ಅಸಂಖ್ಯವಾಗಿ ಬೆಳೆದಿವೆ. ಅಂತರ್ಜಾಲದಲ್ಲಿ ವಿಜ್ಞಾನಿಗಳು ಪರಸ್ಪರ ಸಂಪರ್ಕಿಸಿ ವಿಚಾರ ವಿನಿಮಯ ಮಾಡಿಕೊಳ್ಳುವುದು ಸಾಮಾನ್ಯವಾಗಿದೆ. ವಿಜ್ಞಾನಿಗಳು ಹಗಲಿರುಳೂ ವೈಜ್ಞಾನಿಕ ಚಿಂತನೆಯಲ್ಲೇ ಮುಳುಗಿರಬೇಕೆಂದಿಲ್ಲ. ಒಂದು ಗುಂಪಿನಲ್ಲಿರುವ ವಿಜ್ಞಾನಿ ತನ್ನ ಪಾಲಿನ ಕೆಲಸವನ್ನು ಮಾಡಿದರೆ ಸಾಕು, ಉಳಿದ ವಿಷಯಗಳಿಗೆ ಅಷ್ಟು ತಲೆ ಕೆಡಿಸಿಕೊಳ್ಳುವ ಅವಶ್ಯಕತೆ ಇರುವುದಿಲ್ಲ. ಒಂದು ಉದಾಹರಣೆ – ಚಂದ್ರನ ಮೇಲೆ ನೀರಿನ ಅಂಶ ಇದೆಯೆಂದು ಚಂದ್ರಯಾನದ ವಿಜ್ಞಾನಿಗಳು ಈಚೆಗೆ ಕಂಡುಹಿಡಿದಿರುವರು. ಮುಂದಿನ ಪ್ರಶ್ನೆ – ಅಲ್ಲಿಯಾವುದೇ ರೀತಿಯ ಜೀವಿ ಇದೆಯೇ ಎಂಬುದು.

ಸ್ವಾತಂತ್ರ್ಯ ಬಂದ ಕಳೆದ ೬೨ ವರ್ಷಗಳಲ್ಲಿ ವಿಜ್ಞಾನದ ಬೆಳವಣಿಗೆಗೆ ಭಾರತೀಯರ ಕೊಡುಗೆ ಎಷ್ಟು? ಅಮೇರಿಕ ಮತ್ತು ಇತರ ಪಾಶ್ಚಾತ್ಯ ದೇಶಗಳಿಗೆ ಹೋಲಿಸಿದರೆ ವಿಜ್ಞಾನಕ್ಕೆ ನಮ್ಮ ಕೊಡುಗೆ ಬಹಳ ಕಡಿಮೆ. ನಾವು ಚೀನಾ, ಜಪಾನ್ ದೇಶಗಳಿಗಿಂತಲೂ ಹಿಂದೆ ಇದ್ದೇವೆ. ಇದಕ್ಕೆ ನಮ್ಮ ಧಾರ್ಮಿಕ ನಂಬಿಕೆಗಳು ಕಾರಣ ಎಂಬ ಶಂಕೆ ಮೂಡಬಹುದು. ಆದರೆ ಇದು ಸರಿಯಲ್ಲ. ವಿದೇಶಗಳಲ್ಲಿ ನೆಲೆಸಿರುವ ಭಾರತೀಯ ಮೂಲದ ವಿಜ್ಞಾನಿಗಳು ಗಮನಾರ್ಹ ಸಾಧನೆಗಳನ್ನು ಮಾಡಿದ್ದಾರೆ. ಇವರೆಲ್ಲರೂ ಧಾರ್ಮಿಕ ಮನೋಭಾವದ ಕುಟುಂಬಗಳಿಂದ ಬಂದವರೇ. ಹಾಗೆಯೇ ಅನೇಕ ಖ್ಯಾತ ಪಾಶ್ಚಾತ್ಯ ವಿಜ್ಞಾನಿಗಳೂ ಧರ್ಮದಲ್ಲಿ ಶ್ರದ್ಧೆಯುಳ್ಳವರು. ಉದಾರಣೆಗೆ, ಗ್ರೆಗರ್ ಮೆಂಡಲ್ ಎಂಬಾತ ಆಸ್ಟ್ರಿಯಾ ದೇಶದ ಕ್ರೈಸ್ತ ಮಠದ ಸನ್ಯಾಸಿ. ಈತನಿಗೆ ವೈಜ್ಞಾನಿಕ ವಿಷಯಗಳಲ್ಲಿ ಆಸಕ್ತಿ ಇತ್ತು. ಆದರೆ ಆರ್ಥಿಕ ಮುಗ್ಗಟ್ಟಿನಿಂದಾಗಿ ಉನ್ನತ ವಿದ್ಯಾಭ್ಯಾಸವನ್ನು ಮುಂದುವರಿಸಲಾಗದೆ ಕ್ರೈಸ್ತ ಮಠವನ್ನು ಸೇರಬೇಕಾಯಿತು. ಅಲ್ಲಿ ವಿದ್ಯಾರ್ಥಿಗಳಿಗೆ ಗಣಿತ ಮತ್ತು ಭೌತಶಾಸ್ತ್ರಗಳನ್ನು ಕಲಿಸುವುದರ ಜೊತೆಗೆ ಸಸ್ಯಗಳಲ್ಲಿ ಅನುವಂಶಿಕತೆಯ ಬಗ್ಗೆ ಸಂಶೋಧನೆಯನ್ನು ಕೈಗೊಂಡ. ಅನುವಂಶಿಕತೆಯ ಮೂರು ನಿಯಮಗಳನ್ನು ಕಂಡುಹಿಡಿದ. ಅಂದಿನ ವಿಜ್ಞಾನಿಗಳಿಗೆ ಇದು ಅರ್ಥವಾಗಲಿಲ್ಲ. ಹಾಗಾಗಿ ಅವನ ಸಂಶೋಧನೆಗಳನ್ನು ಮರೆತುಬಿಟ್ಟರು! ಆತ ಸತ್ತ ಆರು ವರ್ಷಗಳ ನಂತರ ಹೊಸ ಪ್ರಯೋಗಗಳನ್ನು ಮಾಡಿ ಆ ನಿಯಮಗಳನ್ನು ಪುನಃ ಸಂಶೋಧಿಸಿದರು. ಇಂದು ಈ ನಿಯಮಗಳು ಆಧುನಿಕ ಜೀವಶಾಸ್ತ್ರದ ಅಡಿಗಲ್ಲಾಗಿವೆ. ಇಂತಹ ವಿಜ್ಞಾನಿ ಮೆಂಡಲ್ ಒಬ್ಬ ಸನ್ಯಾಸಿ ಮತ್ತು ಪರಮ ದೈವಭಕ್ತ. ಆದರೆ ಅವನ ವಿಜ್ಞಾನದಲ್ಲಿ ಯಾವ ಧಾರ್ಮಿಕ ಸೋಂಕೂ ಇರಲಿಲ್ಲ. ಈತನಿಗೆ ಚಾರ್ಲ್ಸ್ ಡಾರ್ವಿನ್‌ನ ವಿಕಾಸವಾದದಲ್ಲಿ ವಿಶ್ವಾಸ ಇರಲಿಲ್ಲ.

**ವಿಜ್ಞಾನ ಮತ್ತು ಸಮಾಜ**

ವಿಜ್ಞಾನಿ ಸಮಾಜದ ಪೋಷಣೆ ಇಲ್ಲದೆ ತನ್ನ ಸಂಶೋಧನೆಗಳನ್ನು ಮುಂದುವರಿಸಲು ಸಾಧ್ಯವಿಲ್ಲ. ತನಗೆ ಉಪಯೋಗವಾಗುವುದಾದರೆ ಮಾತ್ರ ಸಮಾಜ ವಿಜ್ಞಾನವನ್ನು ಪೋಷಿಸುವುದು. ಆದರೆ ವಿಜ್ಞಾನದಿಂದ ಸಮಾಜಕ್ಕೆ ಉಪಯೋಗವಾಗುತ್ತದೆಯೇ, ಯಾವಾಗ ಎಷ್ಟು ಪ್ರಯೋಜನವಾಗುತ್ತದೆ ಎಂದು ಪೂರ್ವಭಾವಿಯಾಗಿ ಹೇಳಲು ಸಾಧ್ಯವಿಲ್ಲ. ಇಂದಿನ ಒಂದು ಸಂಶೋಧನೆ ಮುಂದೆ ಎಂದೋ ಒಂದು ದಿನ ನಾವು ಊಹಿಸಲಾರದಂತಹ 'ಉಪಯೋಗ'ಕ್ಕೆ ಬರಬಹುದು. ಆದ್ದರಿಂದ ಸಮಾಜ ವಿಜ್ಞಾನದಿಂದ ಆಗುವ ಉಪಯೋಗಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಬಾರದು. ವೈಜ್ಞಾನಿಕ ಸಂಶೋಧನೆಗಳಿಂದ ಪ್ರಕೃತಿಯ ಬಗ್ಗೆ ಮನುಷ್ಯನ ತಿಳುವಳಿಕೆ ಹೆಚ್ಚುವುದು. ಇದು ವಿಜ್ಞಾನದ ಮೂಲ ಉದ್ದೇಶ. ಸಮಾಜ ಇದಕ್ಕೆ ಪ್ರಾಮುಖ್ಯತೆ ಕೊಡಬೇಕು. ಸರ್ಕಾರ, ವಿಜ್ಞಾನವನ್ನು ಪೋಷಿಸಬೇಕು. ವಿಜ್ಞಾನದಲ್ಲಿಯೂ ಅನೇಕ ಪ್ರಭೇದಗಳಿವೆ. ಅವುಗಳನ್ನು ಮೂಲಭೂತ, ಅನ್ವಯಿಕ ಮತ್ತು ತಾಂತ್ರಿಕ ಎಂದು ಕರೆಯಬಹುದು. ಕೇವಲ ಜ್ಞಾನಕ್ಕಾಗಿ ನಡೆಸುವುದು ಮೂಲಭೂತ ವಿಜ್ಞಾನ. ಉದಾಹರಣೆಗೆ, ಕೋಟ್ಯಂತರ ಕಿಲೋಮೀಟರುಗಳ ದೂರದಲ್ಲಿರುವ ನಕ್ಷತ್ರಗಳು, ಗೆಲಾಕ್ಸಿಗಳು ಮುಂತಾದವುಗಳನ್ನು ವಿಶೇಷ ದೂರದರ್ಶಕಗಳಿಂದ ವಿಜ್ಞಾನಿಗಳು ಅಭ್ಯಾಸ ಮಾಡುವರು. ಇದರಿಂದ ಹೆಚ್ಚು ಬೆಳೆ ಬೆಳೆಯುವುದಕ್ಕಾಗಲಿ, ಮೊಬೈಲ್ ಫೋನ್‌ಗಳನ್ನು ನಿರ್ಮಿಸುವುದಕ್ಕಾಗಲೀ ಸಾಧ್ಯವಿಲ್ಲ. ಮೂಲಭೂತ ಸಂಶೋಧನೆಗಳಿಂದ ಬಡತನ ನಿವಾರಣೆಯಾಗುವುದಿಲ್ಲ. ಅನ್ವಯಿಕ ಸಂಶೋಧನೆಗಳನ್ನು ಉಪಯುಕ್ತತೆಗಾಗಿಯೇ ಮಾಡಲಾಗುತ್ತದೆ. ಉದಾಹರಣೆಗೆ, ಬಿ.ಟಿ. ಬದನೆ. ಸಾಮಾನ್ಯವಾಗಿ ದೊರೆಯುವ ಬದನೆಕಾಯಿಗೆ ಹುಳುಗಳು ಬರುವ ಸಾಧ್ಯತೆ ಹೆಚ್ಚು. ವಿಜ್ಞಾನಿಗಳು ಈ ಗಿಡಗಳ ಜೀನ್‌ಗಳನ್ನು ಮಾರ್ಪಡಿಸಿ ಹೊಸ ತಳಿಯೊಂದನ್ನು ಸೃಷ್ಟಿಸಿದ್ದಾರೆ. ಇದೇ ಬಿ.ಟಿ.ಬದನೆ. ಇದಕ್ಕೆ ಹುಳುಗಳು ಬರುವುದು ಬಹಳ ಕಡಿಮೆ. ಹೀಗೆ ಉತ್ಪಾದನೆ ಅಧಿಕವಾಗಿ ರೈತರಿಗೆ ಲಾಭ ಹೆಚ್ಚಾಗುವುದು. ಆದರೆ ಇಂತಹ ಬಿ.ಟಿ. ಬದನೆಯಿಂದ ಏನೇನು ಅಪಾಯಗಳಿವೆ ಎಂಬುದನ್ನು ಪ್ರಯೋಗಗಳಿಂದ ತಿಳಿಯಬೇಕಾಗಿದೆ. ತಂತ್ರಜ್ಞಾನವೂ ಹೀಗೆಯೇ. ಉದಾಹರಣೆಗೆ, ಶಕ್ತಿಯುತ ರಾಕೆಟ್‌ಗಳನ್ನು ಅಭಿವೃದ್ಧಿಪಡಿಸಿದರೆ, ಅವುಗಳನ್ನು ಕ್ಷಿಪಣಿಗಳಂತೆ ಯುದ್ಧಕ್ಕಾಗಿಯಾದರೂ ಬಳಸಬಹುದು, ಇಲ್ಲವೆ ಉಪಗ್ರಹಗಳನ್ನು ಸರಿಯಾದ ಕಕ್ಷೆಯಲ್ಲಿ ಸ್ಥಾಪಿಸಲೂ ಉಪಯೋಗಿಸಬಹುದು.

ಆಕ್ಟೋಪಸ್ ಭವಿಷ್ಯ

ರಾಮಚಂದ್ರ ಕೊಪ್ಪಲು

...ನಮ್ಮಲ್ಲಿ ಮಠಾಧೀಶರು, ಜ್ಯೋತಿಷಿಗಳು ಇದ್ದಂಗೆ ಅಲ್ಲಿ ಆಕ್ಟೋಪಸ್...!!

ಮೂಲಭೂತ ಸಂಶೋಧನೆಗಳು ಎಂದೋ ಒಂದು ದಿನ ಅನ್ವಯಿಕವಾಗಬಹುದು. ಐನ್‌ಸ್ಟೈನ್‌ನ ಸಾಪೇಕ್ಷತಾವಾದ ಒಂದು ಮಹತ್ವಪೂರ್ಣ ಮೂಲಭೂತ ಸಂಶೋಧನೆ. ಆರಂಭದಲ್ಲಿ ಇದನ್ನು ಅರ್ಥಮಾಡಿಕೊಂಡವರು ಕೆಲವೇ ಮಂದಿ ವಿಜ್ಞಾನಿಗಳು. ಆದರೆ ಕೆಲವೇ ದಶಕಗಳಲ್ಲಿ ಈ ಸಂಶೋಧನೆ ಅಣ್ವಸ್ತ್ರಗಳ ಮತ್ತು ಪರಮಾಣು ವಿದ್ಯುತ್ ಸ್ಥಾವರಗಳ ಆವಿಷ್ಕಾರಕ್ಕೆ ಬುನಾದಿಯಾಯಿತು. ಆದ್ದರಿಂದ ಸರ್ಕಾರ ಮತ್ತು ಸಮಾಜ ದೂರದೃಷ್ಟಿಯಿಂದ ಎಲ್ಲ ರೀತಿಯ ಸಂಶೋಧನೆಗಳನ್ನೂ ಪ್ರೋತ್ಸಾಹಿಸಬೇಕು.

ದೇಶಕಾಲಕ್ಕನುಗುಣವಾಗಿ ಕೆಲವು ಸಂಶೋಧನೆಗಳನ್ನು ಸಮಾಜಕ್ಕೆ ಹಾನಿಕಾರಕ ಎಂದು ನಿಷೇಧಿಸಬಹುದು. ಇಂದು ಜೈವಿಕ ಮಾರಕಾಸ್ತ್ರಗಳ ಬಗ್ಗೆ ಸಂಶೋಧನೆಗಳನ್ನು ಎಲ್ಲ ದೇಶಗಳೂ ಪ್ರತಿಬಂಧಿಸಿವೆ. ಸ್ಟೆಮ್‌ಸೆಲ್ ಸಂಶೋಧನೆ ಮತ್ತು ಮಾನವನ ಕ್ಲೋನಿಂಗ್‌ಗಳನ್ನೂ ಅನೇಕ ದೇಶಗಳು ಪ್ರತಿಬಂಧಿಸಿವೆ. ಹಿಂದೆ ಸಂಶೋಧನೆಗಾಗಿ ಮನುಷ್ಯರ ಸತ್ತ ದೇಹಗಳನ್ನು ಕುಯ್ಯುವುದನ್ನು ಕೆಲವು ದೇಶಗಳಲ್ಲಿ ನಿಷೇಧಿಸಿದ್ದರು.

ಸರ್ಕಾರ ಮತ್ತು ವಿಜ್ಞಾನಿಗಳ ಸಂಬಂಧ ಕ್ಲಿಷ್ಟವಾದದ್ದು. ವಿಜ್ಞಾನಿಗಳನ್ನು ಸರ್ಕಾರಗಳು ತಮ್ಮ ಹಿಡಿತದಲ್ಲಿಟ್ಟುಕೊಂಡು ಅವರ ಸಂಶೋಧನೆಗಳನ್ನು ನಿಯಂತ್ರಿಸಲು ಯತ್ನಿಸುವುದು ಸಾಮಾನ್ಯ. ಎರಡನೆಯ ಮಹಾಯುದ್ಧದಲ್ಲಿ ಇದು ತೀವ್ರ ಸ್ವರೂಪವನ್ನು ಪಡೆಯಿತು. ಇದಕ್ಕೆ ಮುಖ್ಯ ಉದಾಹರಣೆ ಅಮೆರಿಕಾದ ಮ್ಯಾನ್‌ಹಟನ್ ಪ್ರಾಜೆಕ್ಟ್. ಅಲ್ಲಿನ ಲಾಸ್

# ಖುರ್ಚಿಯೊಳಗಿನ ತೇಗು

ಓಡೋಡಿ
ಮೇಳದೊಡನೆ ಆಟವಾಡಿ
ಅವನು ಖುರ್ಚಿಯ ಮೇಲೆ
ಕುಳಿತುಕೊಂಡ,
ಖುರ್ಚಿಯೂ ಅವನ ಮೇಲೆ
ಕುಳಿತುಕೊಂಡಿತು.

ಮೇಳದವರು
ಜಯಕಾರ ಹೇಳಿದರು
ಸುತ್ತೆಲ್ಲ
ಲಾಗಾ ಪಲ್ಟಿ ಹಾಕಿದರು.

ಹಸಿವಿನ ಈ ಕಾಲದಲಿ
ಖುರ್ಚಿಗಳು ತಿನ್ನಲು
ಚೆನ್ನಾಗಿರುತ್ತವೆ,
ಅವನು ಖುರ್ಚಿಯಲ್ಲಿ
ಕುಳಿತು ಕಾಗದವನ್ನು ತಿಂದ
ಖುರ್ಚಿ ಮತ್ತು ಕಾಗದಗಳು
ಅವನನ್ನು ತಿಂದವು.

ಕುಳಿತಲ್ಲಿಯೇ ತಿನ್ನುತ್ತ
ಕಾಗದ ಖುರ್ಚಿ
ಮತ್ತು ಅವನುಗಳು
ಪರಸ್ಪರ ಜೀರ್ಣವಾಗಿ
ವಿಸ್ತಾರವಾದ
ತೇಗುಗಳು ಹುಟ್ಟಿದವು.

ತೇಗುಗಳಿಂದ
ಯಾರ ಹೊಟ್ಟೆಯೂ
ತುಂಬಲಿಲ್ಲ !



ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೨೦, ಶಿರಸಿ (ಉತ್ತರ ಕನ್ನಡ)

ಆಲಮಾಸ್ ಎಂಬಲ್ಲಿ ನೂರಾರು ವಿಜ್ಞಾನಿಗಳನ್ನು ಓಪನ್ ಹೈಮರ್ ಎಂಬ ವಿಜ್ಞಾನಿಯ ನೇತೃತ್ವದಲ್ಲಿ ಕಳೆ ಹಾಕಿ ಅವರಿಗೆ ಸಾಕಷ್ಟು ಹಣವನ್ನು ಮತ್ತು ಇತರೆ ಎಲ್ಲ ಸೌಲಭ್ಯಗಳನ್ನು ಕೊಡಲಾಯಿತು. ಅವರ ಕೆಲಸ ಅಣ್ವಸ್ತ್ರಗಳನ್ನು ನಿರ್ಮಿಸುವುದು. ಅದನ್ನು ಅತ್ಯಂತ ಗೋಪ್ಯವಾಗಿರಿಸಿ ವಿಜ್ಞಾನಿಗಳ ವಾಕ್‌ಸ್ವಾತಂತ್ರ್ಯ, ಚಲನವಲನಗಳ ಮೇಲೆ ಕಟ್ಟುನಿಟ್ಟಾದ ನಿರ್ಬಂಧಗಳನ್ನು ಹೇರಲಾಗಿತ್ತು. ಹೀಗೆ ತಯಾರಿಸಿದ ಅಣು ಬಾಂಬುಗಳನ್ನೇ ಜಪಾನಿನ ಹಿರೋಷಿಮಾ ಮತ್ತು ನಾಗಸಾಕಿಗಳ ಮೇಲೆ ಸಿಡಿಸಲಾಯಿತು. ಇಂತಹ ಅಮಾನುಷ ಕೃತ್ಯವನ್ನು ಪ್ರಪಂಚ ಹಿಂದೆಂದೂ ಕಂಡಿರಲಿಲ್ಲ. ಇಂತಹುದೇ ಕೆಲಸಗಳು ಜರ್ಮನಿ, ರಷ್ಯಾ, ಇಂಗ್ಲೆಂಡ್ ದೇಶಗಳಲ್ಲೂ ನಡೆಯುತ್ತಿದ್ದವು. ಇಂದು ದೇಶದ 'ರಕ್ಷಣೆ'ಯ ಹೆಸರಿನಲ್ಲಿ ಪ್ರತಿಯೊಂದು ದೇಶದಲ್ಲಿಯೂ ಸಂಶೋಧನಾ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಇವರು ಮಾಡುವ ಕೆಲಸಗಳನ್ನು ಸರ್ಕಾರಗಳ ಅನುಮತಿ ಇಲ್ಲದೆ ಪ್ರಕಟಿಸುವಂತಿಲ್ಲ. ಪ್ರಪಂಚದಲ್ಲಿ ವಿಜ್ಞಾನಕ್ಕಾಗಿ ಸರ್ಕಾರಗಳು ಖರ್ಚುಮಾಡುತ್ತಿರುವ ಹಣದಲ್ಲಿ ಬಹುಪಾಲು ಇಂತಹ ಗೋಪ್ಯ ಸಂಶೋಧನೆಗಳಿಗೇ ಮೀಸಲಾಗಿದೆ. ಇದು ಸಮಾಜಕ್ಕೆ ಆರೋಗ್ಯಕರವಲ್ಲ.

ಜನಸಾಮಾನ್ಯರಿಗೂ ವಿಜ್ಞಾನಕ್ಕೂ ಮತ್ತು ವಿಜ್ಞಾನಿಗಳಿಗೂ ಇರುವ ಸಂಬಂಧ ಬಹಳ ಮುಖ್ಯ. ವಿಜ್ಞಾನಿಗಳು ಬರುವುದೇ ಜನಸಾಮಾನ್ಯರ ಗುಂಪಿನಿಂದ. ಇಂದಿನ ವಿದ್ಯಾರ್ಥಿಗಳೇ ಮುಂದೆ ವಿಜ್ಞಾನಿಗಳಾಗುವವರು. ಆದ್ದರಿಂದ ವಿಜ್ಞಾನದ ಅರಿವು ಸಮಾಜದಲ್ಲಿ, ಅದರಲ್ಲಿಯೂ ವಿಶೇಷವಾಗಿ ವಿದ್ಯಾರ್ಥಿಗಳಲ್ಲಿರಬೇಕಾದುದು ಅನಿವಾರ್ಯ. ಇದಕ್ಕಾಗಿ ಸರ್ಕಾರ, ಮಾಧ್ಯಮಗಳು, ಶಾಲಾ-ಕಾಲೇಜುಗಳು ಮತ್ತು ಇತರ ಸಂಘಸಂಸ್ಥೆಗಳು ಕೆಲಸ ಮಾಡಬೇಕು.

ಎಲ್ಲ ಸಮಾಜಗಳಲ್ಲಿಯೂ ಅನೇಕ ನಂಬಿಕೆಗಳು ಬೇರೂರಿರುತ್ತವೆ. ಇವುಗಳಿಗೆ ಅನೇಕ ಚಾರಿತ್ರಿಕ, ಸಾಂಸ್ಕೃತಿಕ ಕಾರಣಗಳಿರಬಹುದು. ಉದಾಹರಣೆಗೆ, ಜ್ಯೋತಿಷ ಶಾಸ್ತ್ರ. ಮೊದಲೇ ಹೇಳಿದಂತೆ ಮಾನವ ಬಹಳ ಹಿಂದೆಯೇ ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳ ಚಲನೆಗಳಿಗೂ ಮತ್ತು ಭೂಮಿಯ ಮೇಲೆ ಬದಲಾಗುವ ಋತುಮಾನಗಳಿಗೂ ಇರುವ ಸಂಬಂಧವನ್ನು ತಿಳಿದುಕೊಂಡ. ಇದರಿಂದಾಗಿ ಬೀಜ ಬಿತ್ತುವ ಕಾಲ, ಬೆಳೆ ಕೊಯ್ಯುವ ಕಾಲ, ಬೇಟೆಮಾಡುವ ಕಾಲ ಮುಂತಾದವನ್ನು ಆಕಾಶಕಾಯಗಳ ಸ್ಥಾನವನ್ನು ನೋಡಿ ತಿಳಿಯಲು ಸಾಧ್ಯವಾಯಿತು. ಮೂಢನಂಬಿಕೆಗಳನ್ನಾಧರಿಸಿದ ಕೆಲವು ಪದ್ಧತಿಗಳು, ಆಚಾರ, ನಿಯಮಗಳು ವ್ಯಕ್ತಿಗೆ ಮತ್ತು ಸಮಾಜಕ್ಕೆ ಹಾನಿಕಾರಕ.

ವೈಜ್ಞಾನಿಕ ಸಂಶೋಧನೆ, ವಿದ್ಯಾಭ್ಯಾಸ, ಸಮಾಜ ಸುಧಾರಣೆ – ಇವುಗಳಿಗೆ ಅಡ್ಡಬರುವ ಅವೈಜ್ಞಾನಿಕವಾದ ಮತ್ತು ಅಸಂಬದ್ಧವಾದ, ಧಾರ್ಮಿಕ ಎಂದು ಹೇಳಿಕೊಳ್ಳುವ ಪದ್ಧತಿಗಳನ್ನೆಲ್ಲ ಸಮಾಜದ ಎಲ್ಲ ವರ್ಗಗಳೂ ವಿರೋಧಿಸಿ ತೊಡೆದುಹಾಕಬೇಕು. ಇಲ್ಲದಿದ್ದರೆ ನಾವು ಆರ್ಥಿಕವಾಗಷ್ಟೆ ಅಲ್ಲದೆ ಬೌದ್ಧಿಕವಾಗಿಯೂ ಹಿಂದುಳಿದ ರಾಷ್ಟ್ರವಾಗಿಯೇ ಉಳಿಯಬೇಕಾಗುತ್ತದೆ.

ಡಾ|| ಎಚ್. ಆರ್. ಪ್ರಭಾಕರ
ನಂ. ೩೦೨, ಆರ್.ವಿ. ಅಪಾರ್ಟ್‌ಮೆಂಟ್ಸ್
ಶ್ರೀರಾಮಮಂದಿರ ರಸ್ತೆ
ಬಸವನಗುಡಿ, ಬೆಂಗಳೂರು - ೫೬೦ ೦೦೪

## ಚೆಕ್



ಗೆಳತಿ
ನೀ ಕೊಟ್ಟ ಚೆಕ್ಕನ್ನು ಕ್ಯಾಷ್ ಮಾಡಿಸಲು
ಬ್ಯಾಂಕಿಗೆ ಹೋದಾಗ,
ಅದನ್ನಿಡಿದ ಕ್ಯಾಷಿಯರ್
ಮುಸಿ ಮುಸಿ ನಗುವುದ ನಾ ಕಂಡೆ,
ಯಾಕೆಂದು ನಾ ಕೇಳಿದಾಗ,
ನೀ ಅದರಲ್ಲಿ ಬರೆದಿದ್ದೆ,
ಮೂವತ್ತು ಸಾವಿರದಾ ಬದಲಾಗಿ,
"ಮುತ್ತುಗಳು ಸಾವಿರ."

ವೆಂಕಟೇಶ ಕೆ. ಜನಾದ್ರಿ
ಲೆಕ್ಕಪತ್ರ ಅಧೀಕ್ಷಕ ಈ.ಕ.ರ.ಸಾ.
ನಿಗಮ, ಕೇಂದ್ರ ಕಛೇರಿ ಸಾರಿಗೆ ಸದನ, ಗುಲಬರ್ಗಾ




**ಅ**ಮೃತಸರದ ರೈಲು ದಿಲ್ಲಿಯ ನಿಜಾಮುದ್ದೀನ್ ನಿಲ್ದಾಣ ತಲುಪಿದ ಕೂಡಲೇ ಅದೇ ರೈಲು ನಿಲ್ದಾಣದಿಂದ ಮಥುರಾ ರೈಲು ಹತ್ತಿದೆವು. ಅದೇ ದಿನ ೧೨ ಗಂಟೆ ಹೊತ್ತಿಗೆ ದೆಹಲಿಯಿಂದ ೧೪೧ ಕಿಲೋಮೀಟರ್ ದೂರದ ಮಥುರಾ ತಲುಪಿದೆವು. ಹೋಟೆಲ್‌ನಲ್ಲಿ ಇಳಿದು ನಮ್ಮ ಸ್ನಾನಾದಿಗಳನ್ನು ಮುಗಿಸಿ ಮಥುರಾ ನೋಡಲು ಹೊರಡಲಿದ್ದೆವು.

ಮಥುರಾ ಎರಡು ಕಾರಣಗಳಿಂದಾಗಿ ಹೆಚ್ಚು ಪ್ರಸಿದ್ಧಿ ಪಡೆದಿದೆ. ಮೊದಲನೆಯದಾಗಿ, ಅದು ಐತಿಹಾಸಿಕವಾಗಿ ಪ್ರಸಿದ್ಧ ಸ್ಥಳ. ಕುಶಾನರ ರಾಜಧಾನಿ. ವಿಶ್ವ ಪ್ರಸಿದ್ಧ ಮಥುರಾ ಸ್ಕೂಲ್ ಆಫ್ ಆರ್ಟ್ಸ್‌ನ ಕೇಂದ್ರ ಸ್ಥಾನ. ಎರಡನೆಯದಾಗಿ, ಪೌರಾಣಿಕ ಪುಣ್ಯಕ್ಷೇತ್ರ. ಶ್ರೀ ಕೃಷ್ಣನ ಜನ್ಮಸ್ಥಳ ಹಾಗೂ ಆತನ ಬಾಲ್ಯ ಮತ್ತು ಪ್ರೌಢಾವಸ್ಥೆಯ ಹೆಚ್ಚಿನ ಚಟುವಟಿಕೆಗಳು ಮಥುರೆ ಮತ್ತು ಅದರ ನೆರೆಯ ಹಳ್ಳಿಗಳಾದ ಗೋಕುಲ ಮತ್ತು ವೃಂದಾವನದಲ್ಲಿ ನಡೆದಿವೆ.

ಮಥುರಾ ಸ್ಕೂಲ್ ಆಫ್ ಆರ್ಟ್ಸ್‌ಅನ್ನು ನೋಡಬೇಕು ಎಂಬುದು ನಾನು ಇಂಡಾಲಜಿ ಕಲಿಯುತ್ತಿದ್ದಾಗಿನ ಕನಸು. ಆ ಕನಸನ್ನು ಹೊತ್ತುಕೊಂಡು ಮಥುರಾ ಪ್ರವಾಸ ಮಾಡಿದ್ದ ನನಗೆ ಈಗ ಮಥುರಾ ಸ್ಕೂಲ್ ಆಫ್ ಆರ್ಟ್ಸ್ ನೋಡಲು ವೇಳೆ ಸಾಕಾಗದು, ಇವತ್ತು ರಾತ್ರಿಯ ಒಳಗೆ ಗೋಕುಲ, ಮಥುರಾ ವೃಂದಾವನದ ಪ್ರವಾಸ ಮುಗಿಸಬೇಕಿದೆ ಎಂಬ ಹೆಗ್ಗಡೆಯವರ ಹೇಳಿಕೆಯಿಂದ ಅಸಮಾಧಾನವಾಯಿತು ನನಗಂತೂ ಮಥುರಾ ದೇವಸ್ಥಾನವನ್ನು ನೋಡದೆ ಇದ್ದರೂ ಸರಿ ವಸ್ತು ಪ್ರದರ್ಶನಾಲಯವನ್ನು ನೋಡಲೇಬೇಕಿತ್ತು. ಹೆಗ್ಗಡೆಯವರು ನಮ್ಮ ಪ್ರಯಾಣಕ್ಕೆ ಟ್ಯಾಕ್ಸಿಯ ಬಗ್ಗೆ ವಿಚಾರಿಸಲಾಗಿ, ''ಟ್ಯಾಕ್ಸಿ ಬರುವವರೆಗೆ ನೀವು ಮಥುರಾ ಸ್ಕೂಲ್ ಆಫ್ ಆರ್ಟ್ಸ್ ನೋಡಿ. ಅದು ಇಲ್ಲೇ ಇದೆ. ನಡೆದು ಹೋಗಿ'' ಎಂದ ಹೋಟೆಲ್ ಮ್ಯಾನೇಜರ್. ನನ್ನ ಕನಸು ನನಸಾಯಿತು.

**ಮಥುರಾ ಸ್ಕೂಲ್ ಆಫ್ ಆರ್ಟ್ಸ್ :** ಮಥುರಾವನ್ನು ಶ್ರೀರಾಮನ ಸಹೋದರ ಶತ್ರುಘ್ನ ಶೋಧಿಸಿದ್ದ ಎನ್ನುವ ಮಾತಿದೆ. ಇಲ್ಲಿಯೇ ಶ್ರೀ ಕೃಷ್ಣನ ಜನನವಾಯಿತು ಎನ್ನುವುದು ನಂಬಿಕೆ. ಆ ನಂಬಿಕೆಯನ್ನು ಪುಷ್ಟೀಕರಿಸುವಂತಹ ಕೆಲವು ಸಂಗತಿಗಳು ಇಲ್ಲಿ ಕಾಣಸಿಗುತ್ತವೆ ಎನ್ನುವುದು ಕೆಲವು ಇತಿಹಾಸಕಾರರ ಮಾತು. ಐತಿಹಾಸಿಕವಾಗಿ ಮಥುರಾವನ್ನು ೨೫೦೦ ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ಯಲಾಗುತ್ತದೆ. ಗೌತಮ ಬುದ್ಧ ಸ್ವತಃ ಇಲ್ಲಿ ತನ್ನ ಬಿಕ್ಕುಗಳ ಸಂಘವನ್ನು ಸ್ಥಾಪಿಸಿದ್ದ. ಅಲೆಗ್ಸಾಂಡರನ ಅನಂತರ ಭಾರತಕ್ಕೆ ಬಂದ ಕುಶಾನರು ಇಲ್ಲಿ ತಮ್ಮ ಇನ್ನೊಂದು ರಾಜಧಾನಿಯನ್ನು ಸ್ಥಾಪಿಸಿದ್ದರು. ಇವರು ಬೌದ್ಧಧರ್ಮದಿಂದ ಪ್ರಭಾವಿತರಾಗಿ ಆ ಧರ್ಮವನ್ನು ಸ್ವೀಕರಿಸಿ, ಪ್ರೋತ್ಸಾಹಿಸಿ ಅದರ ಉನ್ನತಿಗೆ ಕಾರಣರಾದರು. ಕುಶಾನರ ಪ್ರಸಿದ್ಧ ಅರಸ ಕಾನಿಷ್ಕನ ಕಾಲದಲ್ಲಿ (ಕ್ರಿ.ಶ. ೭೮) ಮಥುರಾ ವಿಶ್ವ ಪ್ರಸಿದ್ಧವಾಗಿತ್ತು. ಕ್ರಿ.ಶ. ೪೦೦ರಲ್ಲಿ ಇಲ್ಲಿಗೆ ಬಂದ ಚೀನಾ ಪ್ರವಾಸಿಗ ಫಾಹಿಯಾನ್ ಇಲ್ಲಿ ಬೌದ್ಧ ಬಿಕ್ಕುಗಳ ೨೦ ಸಂಘಗಳಿದ್ದು, ಅವುಗಳಲ್ಲಿ ಸುಮಾರು ಮೂರು ಸಾವಿರ ಬೌದ್ಧ ಬಿಕ್ಕುಗಳು ವಾಸವಾಗಿದ್ದರು ಎನ್ನುತ್ತಾನೆ. ಪಾಶ್ಚಾತ್ಯ ದೇಶಗಳೊಂದಿಗೆ ಇದ್ದ ವಾಣಿಜ್ಯ ಮಾರ್ಗವೂ ಮಥುರಾ ಆಗಿದ್ದರಿಂದ ಈ ದಾರಿಯಲ್ಲಿ ಬಂದ ಕ್ರಿ.ಶ. ೧೦೧೭ರಲ್ಲಿ ಮಹ್ಮದ್ ಗಜ್ನಿ ಮಥುರಾದ ಮೇಲೆ ಆಕ್ರಮಣ ಮಾಡಿ ಬೌದ್ಧಧರ್ಮದ ಅವಸಾನಕ್ಕೆ ಮುಹೂರ್ತ ಬರೆದು ಹೋದ. ಅವನ ಅನಂತರ ಕ್ರಿ. ಶ. ೫೦೦ರಲ್ಲಿ ದಿಲ್ಲಿಯಿಂದ ಸಿಕಂದರ್ ಲೋಧಿ ಬಂದು ಬೌದ್ಧಧರ್ಮದ ಮೇಲೆ ಮತ್ತೆ ಗದಾಪ್ರಹಾರ ಮಾಡಿದ. ಕೊನೆಯದಾಗಿ, ಅಳಿದುಳಿದ ಬೌದ್ಧಧರ್ಮಕ್ಕೆ ಔರಂಗಜೇಬನು ಮರಣಗಂಟೆಯನ್ನು ಬಾರಿಸಿದ. ಇವರೆಲ್ಲರಿಂದ ಭಗ್ನಗೊಂಡ ಕ್ರಿ.ಶ. ಆರಂಭ ಕಾಲದ ಬೌದ್ಧ ಮತ್ತು ಜೈನ ವಿಗ್ರಹಗಳು ಇಲ್ಲಿವೆ. ಜೊತೆಗೆ ಅನೇಕ ಹಿಂದೂ ದೇವರ ವಿಗ್ರಹಗಳೂ ಇಲ್ಲಿಯ ಮಥುರಾ ಸ್ಕೂಲ್ ಆಫ್ ಆರ್ಟ್ಸ್‌ನಲ್ಲಿವೆ.

ಕುಶಾನರ ದೊರೆ ಕಾನಿಷ್ಕನ ಕಾಲದವರೆಗೆ ಸ್ತೂಪ, ಬೋಧಿವೃಕ್ಷ, ಧರ್ಮಚಕ್ರ, ಆನೆ, ಜಿಂಕೆ ಇತ್ಯಾದಿಗಳ ಮೂಲಕ ಬುದ್ಧನನ್ನು ಮತ್ತು ಅವನಿಗೆ ಸಂಬಂಧಿಸಿದಂತೆ ಇತರೆ ವಿಷಯಗಳನ್ನು ಸಂಕೇತಿಸಲಾಗುತ್ತಿತ್ತು. ಸುಮಾರು



**ಹೋಲಿಯ ಎರಡು ತಿಂಗಳು ಶ್ರೀಕೃಷ್ಣ–ರಾಧಾರ ಜನ್ಮಸಂಭ್ರಮವನ್ನೂ ವೃಂದಾವನದಲ್ಲಿ ಸಡಗರದಿಂದ ಆಚರಿಸುತ್ತಾರೆ. ಇಲ್ಲಿ ರಾಧಾ – ಮಾಧವರ ಅನೇಕ ಮಂದಿರಗಳಿವೆ. ಗೋವಿಂದಜೀ ಟೆಂಪಲ್, ರಾಧಾ ದಾಮೋದರ ಮಂದಿರ, ಜೀವ ಗೋಸ್ವಾಮಿ, ರಾಧಾ ಗೋಕುಲಾನಂದ ಟೆಂಪಲ್, ರಾಧಾ ಗೋಪಿನಾಥ್ ಟೆಂಪಲ್, ರಾಧಾ ರಾಮನ್ ಮಂದಿರ – ಹೀಗೆ ವಿವಾಹೇತರ ಪ್ರಿಯಕರನಾಗಿ ಕೃಷ್ಣನೊಂದಿಗೆ ರಾಸಲೀಲೆಯಲ್ಲಿ ತೊಡಗಿರುವ ರಾಧಾಳನ್ನು ಆರಾಧನೆ ಮಾಡುವುದು ಒಂದು ವಿಶೇಷ. ಕೃಷ್ಣನ ಧರ್ಮಪತ್ನಿಯರ ಬಗ್ಗೆ ಮಥುರಾ, ಗೋಕುಲ, ವೃಂದಾವನ ಮೌನವಾಗಿವೆ.**

ಡಾ॥ ಇಂದಿರಾ ಹೆಗ್ಗಡೆ

ಕ್ರಿ.ಶ.೧ ಮತ್ತು ೨ನೆಯ ಶತಮಾನಗಳಲ್ಲಿ ಮಾನವ ರೂಪದಲ್ಲಿ ಬುದ್ಧನ ಶಿಲ್ಪಗಳನ್ನು ರಚಿಸುವ ಸಂಪ್ರದಾಯ ಆರಂಭವಾಯಿತು. ಕುಶಾನರ ಪ್ರಸಿದ್ಧ ದೊರೆ ಕಾನಿಷ್ಕ ಇಂಡೊ-ಬ್ಯಾಕ್ಟ್ರಿಯನ್ ಸಂತತಿ ಆದುದರಿಂದ ಈತ ಗಾಂಧಾರ ಶೈಲಿಯ ಶಿಲ್ಪ ರಚನೆಯನ್ನು ಪ್ರೋತ್ಸಾಹಿಸಿ ಬೆಳೆಸಿದ. ಮುಂದೆ ಗುಪ್ತರ ಕಾಲದಲ್ಲಿ ಹಿಂದೂ ದೇವರ ಶಿಲ್ಪಗಳು ರಚನೆಯಾಗತೊಡಗಿದುವು. ಗುಪ್ತರ ಕಾಲದ ಶಿಲ್ಪಗಳಲ್ಲಿ ಅಂತಹ ತೇಜಸ್ಸು ಇದ್ದು, ಇವುಗಳು ಹೃದಯದ ಭಾಷೆಯಿಂದ ಮಾತನಾಡುತ್ತವೆ.

ಕಾನಿಷ್ಕನ ಕಾಲದಲ್ಲಿ ಬುದ್ಧನ ಪ್ರಥಮ ಶಿಲ್ಪ ರಚನೆಯಾಯಿತು. ಇದು ಯಕ್ಷ ಕಲ್ಪನೆಯಲ್ಲಿ ಮೂಡಿದೆ. ಗಾಂಧಾರ ಶೈಲಿಯ ಪ್ರಭಾವದಲ್ಲಿ ನಿರ್ಮಿಸಲಾಗಿರುವ ಮಾನವ ಶಿಲ್ಪಗಳಲ್ಲಿ ಮೀಸೆ ಇರುವುದಿಲ್ಲ, ಆದರೆ ಗಡ್ಡ ಇದೆ. ಗಾಂಧಾರದ ಹವಾಮಾನಕ್ಕೆ ತಕ್ಕಂತೆ ಮೈ ತುಂಬಾ ಉಡುಗೆ ಧರಿಸಿದ ಬುದ್ಧ ಮತ್ತು ಬೋಧಿಸತ್ವರ ಶಿಲ್ಪಗಳು ಗಾಂಧಾರ ಶೈಲಿಯ ವಿಶೇಷ. ಇಂತಹ ಅನೇಕ ಶಿಲ್ಪಗಳು ಇಲ್ಲಿವೆ. ಬುದ್ಧನ ನಿಂತ ಭಂಗಿಯ, ಪದ್ಮಾಸನದಲ್ಲಿ ಮತ್ತು ವಿವಿಧ ಮುದ್ರೆಯಲ್ಲಿ ಕುಳಿತ ಅನೇಕ ಶಿಲ್ಪಗಳು ಇವೆಯಾದರೂ ಹೆಚ್ಚಿನವು ಭಿನ್ನವಾಗಿವೆ. ಸಿಂಹಾಸನದಲ್ಲಿ ಕುಳಿತ ಭಂಗಿಯಂತಹ ಕಾನಿಷ್ಕನ ಸುಂದರ, ಬೃಹತ್ ಶಿಲ್ಪವೂ ಸ್ವಲ್ಪ ಭಿನ್ನವಾಗಿದೆ. ಗ್ರೀಕ್ ಶೈಲಿಯಿಂದ ಪ್ರಭಾವಿತಗೊಂಡಿರುವ ಈ ಶಿಲ್ಪಗಳು ಈಗಲೂ ಜೀವ ತುಂಬಿ ನಿಂತಿವೆ. ವಿಶೇಷವಾಗಿ ಬುದ್ಧನ ವಿವಿಧ ಭಂಗಿಯ ಶಿಲ್ಪಗಳು ನಮ್ಮನ್ನು ಪ್ರಭಾಸುತ್ತವೆ. ಕುಬೇರ, ಅಗ್ನಿ ಮುಂತಾದ ವಿಗ್ರಹಗಳನ್ನೂ ಒಳಗೊಂಡಂತೆ ಅನೇಕ ಜೈನ ಹಿಂದೂ ಶಿಲ್ಪಗಳೂ ಇವೆ. ಕುಶಾನರ ಮತ್ತು ಗುಪ್ತರ ಕಾಲದ ಶಿಲ್ಪಗಳೂ ಬಹಳಷ್ಟು ಭಿನ್ನವಾಗಿವೆ.

ಭಾರತೀಯ ಐತಿಹಾಸಿಕ ಪರಂಪರೆಗೆ ಕನ್ನಡಿ ಹಿಡಿಯುವ ಈ ವಸ್ತು ಪ್ರದರ್ಶನಾಲಯಕ್ಕೆ ಪ್ರವಾಸಿಗರ ಕೊರತೆ ಕಂಡಿತು. ನಾವು ಭಾರತದ ಇತರ ಭಾಗಗಳಿಗೆ ಹೋದಾಗಲೆಲ್ಲ ಅಲ್ಲಿ ವಿದೇಶಿಯರ ಸಂಖ್ಯೆ ಹೆಚ್ಚಾಗಿಯೇ ಇರುತ್ತಿತ್ತು. ಇಲ್ಲಿ ವಿದೇಶಿಯರು ಕಣ್ಣಿಗೆ ಬೀಳಲಿಲ್ಲ. ಸರಕಾರ ಪ್ರವಾಸೋದ್ಯಮಕ್ಕೆ ಹೆಚ್ಚಿನ ಗಮನ ನೀಡಿದಂತೆ ಇಲ್ಲ. ಇಲ್ಲಿಯ ರಸ್ತೆಗಳಲ್ಲಿ ಇರುವ ಗುಂಡಿಗಳಿಂದಾಗಿ ಸೈಕಲ್ ರಿಕ್ಷಾವನ್ನು ಚಲಾಯಿಸುವವರು ಪಾಡುಪಡುತ್ತಿದ್ದಾರೆ.

ನಾವು ಮರಳಿ ಹೋಟೆಲಿಗೆ ಬಂದು ನಮಗಾಗಿ ಕಾದಿದ್ದ ಗಾಡಿ ಹತ್ತಿ ಮಥುರಾ, ವೃಂದಾವನ ಹಾಗೂ ಗೋಕುಲ ದರ್ಶನಕ್ಕೆ ಹೊರಟೆವು. ನಮ್ಮ ಪಟ್ಟಿಯಲ್ಲಿ ಮಥುರಾದಿಂದ ೧೧ ಕಿಲೋಮೀಟರ್ ಉತ್ತರದಲ್ಲಿ ಇರುವ ವೃಂದಾವನ ಮೊದಲಿಗೆ ಇತ್ತು.

ವೃಂದಾವನ ಎಂದರೆ ತುಳಸೀ ತೋಟ. ಈಗಲೂ ಇಲ್ಲಿ ತುಳಸೀ ತೋಟಗಳು ಇವೆಯಂತೆ. ವೃಂದಾವನ ಕೃಷ್ಣ -ಗೋಪಿಕೆಯರ ರಾಸಲೀಲೆಯ ಕೇಂದ್ರ. ಇಲ್ಲಿಯವರ ಪ್ರಕಾರ ಪ್ರೌಢಾವಸ್ಥೆಗೆ ತಲುಪಿದ ವಿವಾಹಿತೆ ರಾಧಾಳನ್ನು ಕೃಷ್ಣ ಒಲಿಸಿಕೊಂಡುದು ವೃಂದಾವನದಲ್ಲಿ. ಶ್ರೀಕೃಷ್ಣನು ಗೋಪಿಕೆಯರೊಂದಿಗೆ ಇಲ್ಲಿ ಹಲವು ಕಾಲ ಕಳೆದಿದ್ದ. ಮುಂದೆ ಆತ ದ್ವಾರಕೆಗೆ ಹೋದಾಗ ಗೋಪಿಕೆಯರು ಅವನೊಂದಿಗೆ ಹೋಗುತ್ತಾರೆ.

ಹೋಲಿಯ ಎರಡು ತಿಂಗಳು ಶ್ರೀಕೃಷ್ಣ-ರಾಧಾರ ಜನ್ಮಸಂಭ್ರಮವನ್ನೂ ವೃಂದಾವನದಲ್ಲಿ ಸಡಗರದಿಂದ ಆಚರಿಸುತ್ತಾರೆ. ಇಲ್ಲಿ ರಾಧಾ-ಮಾಧವರ ಅನೇಕ ಮಂದಿರಗಳಿವೆ. ಗೋವಿಂದಜೀ ಟೆಂಪಲ್, ರಾಧಾ ದಾಮೋದರ ಮಂದಿರ, ಜೀವ ಗೋಸ್ವಾಮಿ, ರಾಧಾ ಗೋಕುಲಾನಂದ ಟೆಂಪಲ್, ರಾಧಾ ಗೋಪಿನಾಥ್ ಟೆಂಪಲ್, ರಾಧಾ ರಾಮನ್ ಮಂದಿರ – ಹೀಗೆ ವಿವಾಹೇತರ ಪ್ರಿಯಕರನಾಗಿ ಕೃಷ್ಣನೊಂದಿಗೆ ರಾಸಲೀಲೆಯಲ್ಲಿ ತೊಡಗಿರುವ ರಾಧಾಳನ್ನು ಆರಾಧನೆ ಮಾಡುವುದು ಒಂದು ವಿಶೇಷ. ಕೃಷ್ಣನ ಧರ್ಮಪತ್ನಿಯರ ಬಗ್ಗೆ ಮಥುರಾ, ಗೋಕುಲ, ವೃಂದಾವನ ಮೌನವಾಗಿವೆ.

**ಗೋವಿಂದ್‌ಜೀ ಮಂದಿರ :** ವೃಂದಾವನದಲ್ಲಿ ಇರುವ ಗೋವಿಂದ್‌ಜೀ ದೇವ್ ಮಂದಿರ ಭಾರತೀಯ, ಪರ್ಶಿಯನ್ ಮತ್ತು ಗ್ರೀಕ್ ವಾಸ್ತು ಶೈಲಿಯಿಂದ ಕೂಡಿದೆ. ಏಳು ಅಂತಸ್ತುಗಳ ಗೋವಿಂದ್‌ಜೀ ದೇವ್ ಮಂದಿರವನ್ನು



ಜೈಪುರ ದೊರೆ ಮಾನ್ ಸಿಂಗ್ ಕ್ರಿ.ಶ. ೧೫೯೦ರಲ್ಲಿ ಕಟ್ಟಿದ್ದ. ಇದರಲ್ಲಿ ಮಾರ್ಬಲ್, ಬೆಳ್ಳಿ ಮತ್ತು ಬಂಗಾರವನ್ನು ಬಳಸಲಾಗಿತ್ತು. ಹಾಲ್‌ನ ಮಧ್ಯಭಾಗದ ಮೇಲ್ಛಾವಣಿಯಲ್ಲಿ ಕಾಣುವ ಸುಂದರ ತಾವರೆಯು ಅನೇಕ ಟನ್‌ಗಳಷ್ಟು ಭಾರವಿದೆಯಂತೆ. ಇದನ್ನು ಕಟ್ಟಲು ಸಾವಿರಾರು ಕಾರ್ಮಿಕರು ೫ ವರ್ಷಗಳ ಕಾಲ ಶ್ರಮಿಸಿದ್ದರು. ತನ್ನ ದಾಸಿಯ ಮಗಳು ಜೋಧಾಳನ್ನು ತನ್ನ ಮಗಳಂತೆ ಸಂಭ್ರಮದಿಂದ ಅಕ್ಬರನಿಗೆ ಮದುವೆ ಮಾಡಿಕೊಟ್ಟ ಈತ ಅಕ್ಬರನ ಸೇನೆಯಲ್ಲಿ ಸೇನಾಧಿಪತಿಯಾಗಿದ್ದ. ಇದನ್ನು ಕಟ್ಟಲು ಅಕ್ಬರನು ಆಗ್ರಾದಿಂದ ಕೆಂಪು ಕಲ್ಲನ್ನು ಪೂರೈಸಿದ್ದ. ಆದರೆ ಮುಂದೆ ಔರಂಗಜೇಬನು ಇದನ್ನು ಕೆಡವಲು ಪ್ರಯತ್ನಿಸುತ್ತಾನೆ. ಆತನ ಜನರು ಕಟ್ಟಡದ ಕೆಲವು ಅಂತಸ್ತುಗಳು ಉರುಳಿಸುವಾಗ ಇಡೀ ಭೂಮಿಯು ನಡುಗತೊಡಗುತ್ತದೆ. ಆಗ ಬೆದರಿದ ಔರಂಗಜೇಬ ಮತ್ತು ಅವನ ಜನರು ಮಂದಿರವನ್ನು ಬಿಟ್ಟು ಓಡಿದ್ದರು ಎಂದು ಕಥೆ ಹೇಳುತ್ತಾರೆ.

ಮಂದಿರದ ಮೆಟ್ಟಿಲೇರಿದರೆ ವಿಶಾಲ ಚಾವಡಿಯ ಒಳಗೆ ಪ್ರವೇಶ ಪಡೆಯುತ್ತೇವೆ. ಚಾವಡಿಯ ಕೊನೆಯಲ್ಲಿ ಶ್ರೀ ಕೃಷ್ಣನ ಸುಂದರ ಶಿಲ್ಪ ಕಾಣುತ್ತದೆ. ಗೋವಿಂದ್‌ಜೀ ಶಿಲ್ಪದ ಎಡಕ್ಕೆ ಚೈತನ್ಯ, ಬಲಕ್ಕೆ ನಿತ್ಯಾನಂದ ಶಿಲ್ಪವಿದೆ. ಕೆಳಭಾಗದಲ್ಲಿ ರಾಧಾ-ಕೃಷ್ಣರ ಪುಟ್ಟ ಶಿಲ್ಪಗಳಿವೆ. ನಾವು ಹೋದಾಗ ಮಂದಿರದ ಜೀರ್ಣೋದ್ಧಾರ ಕಾರ್ಯ ನಡೆಯುತ್ತಿತ್ತು.

ಇಲ್ಲಿ ದೊರಕುವ ಮಾಹಿತಿಯಂತೆ ಈ ಮಂದಿರದ ಮೂಲ ಶಿಲ್ಪವು ಜೈಪುರ ಅರಮನೆಯ ಬಳಿ ಇರುವ ಗೋವಿಂದ್‌ಜೀ ಮಂದಿರದಲ್ಲಿದೆ. ಔರಂಗಜೇಬನ ದಾಳಿಯ ಬಗ್ಗೆ ಅರಿವಿದ್ದ ಮಾನ್‌ಸಿಂಗನು ಶಿಲ್ಪವನ್ನು ಜೈಪುರಕ್ಕೆ ಕೊಂಡುಹೋಗಿ ಅರಮನೆಯ ಮಲಗುವ ಕೋಣೆಗೆ ಕಾಣುವಂತೆ ಕಟ್ಟಿಸುತ್ತಾನೆ.

**ವೃಂದಾವನದ ವಿಧವೆಯರ ಆಶ್ರಮ:** ವೃಂದಾವನದಲ್ಲಿ ವಿಧವೆಯರ ಆಶ್ರಮವಿದೆ. ಸ್ವತಂತ್ರ ಭಾರತದ ಪ್ರತಿಷ್ಠಿತ ಕುಟುಂಬಗಳಿಂದ ಹೊರದೂಡಲ್ಪಟ್ಟ ಎಲ್ಲಾ ವಯಸ್ಸಿನ ಅನೇಕ ವಿಧವೆಯರು ಇಲ್ಲಿಯ ಮೀರಾ ಮಂದಿರದಲ್ಲಿ ಆಶ್ರಯ ಪಡೆದಿದ್ದಾರೆ. ಇವರು ಭಿಕ್ಷಾಪಾತ್ರೆ ಹಿಡಿದು ಅಂಗಡಿ, ಆಶ್ರಮ ಮತ್ತು ದೇವಸ್ಥಾನಗಳ ನಡುವೆ ಸುತ್ತುತ್ತಾರೆ. ಉಳಿದ ಸಮಯದಲ್ಲಿ ಮೀರಾ ಆಶ್ರಮದಲ್ಲಿ ಭಜನೆ ಹಾಡುತ್ತಾರೆ. ಸುಮಾರು ಅರ್ಧದಷ್ಟು ವಿಧವೆಯರು ಬಂಗಾಳದಿಂದಲೇ ಬರುತ್ತಾರೆ ಎಂದು ನಮ್ಮ ಗೈಡ್ ತಿಳಿಸಿದ. ಚಾವಡಿ ತುಂಬಾ ಬಿಳಿ ಸೀರೆ ಉಟ್ಟ ವಿಧವೆಯರು ಹರಟುತ್ತಿದ್ದರು. ಫೋಟೋ ತೆಗೆಯಲು ಅನುಮತಿ ಸಿಗಲಿಲ್ಲ.

ಮೀರಾ ಮಂದಿರದ ಹಿಂಭಾಗದ ಕೋಣೆಯ ಸಂದಿಯಿಂದ ಹೋದರೆ ಒಂದು ಹಾಲ್ ಸಿಗುತ್ತದೆ. ಅಲ್ಲಿ ರಾಧಾ-ಮಾಧವರ ಸುಂದರ ಶಿಲ್ಪಗಳ ಪೀಠವನ್ನು ಪರದೆಯ ಹಿಂದೆ ಮರೆಮಾಡಿದ್ದಾರೆ. ನಮ್ಮನ್ನು ಕೂರಿಸಿ 'ನಾನೇ ರಾಧಾ. ಹೆಗ್ಗಡೆಯವರೇ ಕೃಷ್ಣ'ಎಂದ ಪೂಜಾರಿ. ನಾನು ರಾಧಾ ಆಗುವುದೂ ಬೇಡ, ಈತ ಕೃಷ್ಣ ಆಗುವುದೂ ಬೇಡ ಎಂದೆ. ಆದರೂ ಅಲ್ಲಿದ್ದವರು 'ಬೋಲೋ ರಾಧಾ, ಬೋಲೊ ಕೃಷ್ಣಾ' ಎಂದು ತಾಳ ಹಾಕಿ ಹಾಡಲು ಒತ್ತಾಯಿಸಿದರು. ಜೊತೆಗೆ ವೃಂದಾವನದ ವಿಧವೆಯರ ನಿತ್ಯ ದಾಸೋಹಕ್ಕೆ ದಾನ ನೀಡಿದವರ ಪಟ್ಟಿಯನ್ನು ಮತ್ತು ಮೊತ್ತವನ್ನು ಹೇಳುತ್ತಾ ಹೋದರು. ಅವರ ಪಟ್ಟಿಯಲ್ಲಿ ಹೆಚ್ಚಾಗಿ ಕೋಟ್ಯಧೀಶರ ಹೆಸರುಗಳೇ ಇದ್ದುವು. ನೆಲದ ಮೇಲಿನ ಮಾರ್ಬಲ್‌ನಲ್ಲಿ ಅವರ ಹೆಸರುಗಳನ್ನು ಕೆಂಪು ಬಣ್ಣದಿಂದ ಬರೆಯಲಾಗಿತ್ತು. 'ಇವರು ನಮ್ಮ 'ಮಂಡೆ'ಯನ್ನೂ ಬೋಳಿಸುತ್ತಾರೆ' ಎಂದರು ಹೆಗ್ಗಡೆಯವರು ತುಳು ಭಾಷೆಯಲ್ಲಿ. ನಾವು ಹುಲಿಯ ಬೋನಿಗೆ ಹೊಕ್ಕಂತೆ ಚಡಪಡಿಸಿದೆವು. ನಮ್ಮಂತಹ ಸಾಮಾನ್ಯರಿಂದಲೂ ದಾನ ಕೇಳುವುದು ಕಡಿಮೆ ಮೊತ್ತವೇನಲ್ಲ, ಒಂದು ಲಕ್ಷದಿಂದ ಆರಂಭಿಸಿದರು. ನಮ್ಮಲ್ಲಿ ಅಷ್ಟು ಹಣ ಎಲ್ಲಿದೆ ಎಂದರೆ ''ಕ್ರೆಡಿಟ್ ಕಾರ್ಡ್ ನಡೆಯುತ್ತದೆ'' ಎಂಬ ಬುದ್ಧಿವಂತಿಕೆಯ ಮಾತು. ಅವರ ಕೈಗೆ ಸಿಕ್ಕ ಪಾಪಕ್ಕೆ ಪರಿಹಾರವಾಗಿ ೫೦೦ ರೂ. ಕೊಡುತ್ತೇವೆ ಎಂದೆವು. ದೇವರ ಗುಂಡದ ಪರದೆಯೇ ಸರಿಯಲಿಲ್ಲ. ಎದ್ದು ಬರಲು ಮನಸ್ಸಾದರೂ ಅಪರಿಚಿತರ ಅಂತಃಪುರದಿಂದ ಹಾಗೆ ಬರಲೂ ಸಾಧ್ಯವಿರಲಿಲ್ಲ. ಕೊನೆಗೆ ಒಂದೂವರೆ ಸಾವಿರ ರೂ. ನೀಡಿ ಹಾಲ್‌ನಿಂದ ಹೊರಗೆ ಓಡಿಬಂದೆವು. ಬಿಡುಗಡೆಯ ಉಸಿರು ಬಿಡೋಣ ಎಂದರೆ ಅಲ್ಲೇ ರಾಧಾ-ಕೃಷ್ಣರ



ವಿಗ್ರಹಗಳನ್ನು ಚಮತ್ಕಾರಿಕವಾಗಿ ಗಾಜಿನ ಓಣಿಯಲ್ಲಿ ಪ್ರತಿಫಲಿಸಿ ತೋರಿಸಿದರು. ನಾನು ನೋಡಲು ನಿಂತೆ. ಹೆಗ್ಗಡೆಯವರು ಬಾ...ಬಾ.. ಎನ್ನುತ್ತಾ ಮುಂದೆ ನಡೆದರು. ಅಲ್ಲಿದ್ದವರು ದಾನ ನೀಡಬೇಕೆಂದು ನನ್ನನ್ನು ಒತ್ತಾಯಿಸಿದರು. ನಾನು ಹೆಗ್ಗಡೆಯವರ ಹಿಂದೆ ಓಡಿದೆ. ಹೊರ ಜಗುಲಿಯಲ್ಲೂ ಕಾಳಿಯ ಮರ್ದನವನ್ನು ತೋರಿಸಿ ಅಲ್ಲೂ ಬೇಡಿಕೆಯಿಟ್ಟರು. ಇಲ್ಲಿಂದ ಹೊರಬರುವಾಗ ಜೈಲಿನಿಂದ ಬಿಡುಗಡೆ ಹೊಂದಿದ ಸಂತೋಷ.

ತನ್ನನ್ನು ಬಯಸಿದ ಯಾವ ಗೋಪಿಕೆಯರನ್ನೂ ಆತ ನಿರಾಶೆಗೊಳಿಸುತ್ತಿರಲಿಲ್ಲ ಎಂಬ ನಂಬಿಕೆಯನ್ನು ಸಂಕೇತಿಸುವ ಕೃಷ್ಣ ಗೋಪಿಕೆಯರ ರಾಸಲೀಲೆಯ ಅನೇಕ ಬಿಡಿಬಿಡಿ ಚಿತ್ರಗಳನ್ನು ವೃಂದಾವನದ ರಾಧಾ-ಕೃಷ್ಣ ಮಂದಿರದ ಗೋಡೆಯಲ್ಲಿ ಕೆತ್ತಿದ್ದಾರೆ. ನನಗೆ ಇಲ್ಲಿ ಪುರಂದರದಾಸರ ಕೀರ್ತನೆ ನೆನಪಾಯಿತು. ಹೆಗ್ಗಡೆಯವರಿಗೆ ಹೇಳಿದೆ, ''ಹಸನಾದ ಹೆಣ್ಣ ಮೇಲೆ ಕುಸುಮವ ತಂದಿಕ್ಕಿ ಶಶಿಮುಖಿಯರಿಗೆಲ್ಲ ಬಸಿರು ಮಾಡಿದ ಕೃಷ್ಣ'' ಹಾಡಿನ ಈ ಭಾಗವನ್ನು ಮಾತ್ರ ಹೇಳಿ, ''ಪುರಂದರದಾಸರು ಏನು ಹೇಳುತ್ತಿದ್ದಾರೆ?'' ಎಂದೆ ''ಸಾಮಾನ್ಯ ಮನುಷ್ಯನಾದ ನನಗೆ ಸಾಮಾನ್ಯ ಅರ್ಥವೇ ಹೊಳೆಯುತ್ತದೆ'' ಎಂದರು. ಬಹುಶಃ ದ್ವಾಪರಯುಗದಲ್ಲಿ ಮಹಿಳೆಯರ ನಡತೆಯನ್ನು ಪ್ರಶ್ನಿಸುತ್ತಿರಲಿಲ್ಲವೋ ಏನೋ? ಪುರುಷರಂತೆ ಅವರಿಗೂ ಮನಮೆಚ್ಚಿದ ಪುರುಷನನ್ನು ಸೇರುವ ಅವಕಾಶ ಇದ್ದಿರಬಹುದು. ಮದುವೆಯಾಗಿದ್ದರೂ ಸರಿ. ಕೇರಳದಲ್ಲಿ ಕಳೆದ ಶತಮಾನದವರೆಗೆ ಇಂತಹ ಪದ್ಧತಿ ಉಳಿದು ಬಂದಿತ್ತು ಎನ್ನುತ್ತಾರಲ್ಲ! ಐದು ಗಂಡಂದಿರ ಮಡದಿಯನ್ನು ಪತಿವ್ರತೆ ಎಂದು ಗೌರವಿಸಿರುವ ಕಾರಣವೂ ಇಂತಹ ಸಂಸ್ಕೃತಿಯ ಪ್ರಭಾವದಿಂದಲೇ ಇರಬಹುದು.

ಗೋಪಿಯರ ಮತ್ತು ರಾಧೆಯ ಜೊತೆ ಶ್ರೀ ಕೃಷ್ಣನ ರಾಸಲೀಲೆ ಗೋಕುಲದಲ್ಲಿ ಆರಂಭವಾದರೆ ವೃಂದಾವನದಲ್ಲಿ ಉತ್ಕಟಾವಸ್ಥೆಯಲ್ಲಿ ಇತ್ತು. ಸ್ಥಳೀಯರ ಪ್ರಕಾರ ಶ್ರೀ ಕೃಷ್ಣ ರಾಧಾಳನ್ನು ಮೊದಲು ಭೇಟಿಯಾಗಿದ್ದು ಗೋಕುಲದಲ್ಲಿ. ಆದರೆ ವೃಂದಾವನದ ಅವರ ರಾಸಲೀಲೆಯೇ ಹೆಚ್ಚು ಪ್ರಸಿದ್ಧಿ. ವಿವಾಹಿತೆಯಾದ ಪ್ರಿಯತಮೆ ರಾಧೆಯನ್ನು ಕೊನೆಯವರೆಗೂ ಶ್ರೀ ಕೃಷ್ಣ ಮದುವೆಯಾಗಿರಲಿಲ್ಲ...

ಅಲ್ಲಿಂದ ನಾವು ಗಾಯತ್ರಿ ಮಂದಿರ ನೋಡಲು ಬಂದೆವು. ದಂಪತಿಗಳಿಬ್ಬರು ಕಟ್ಟಿಸಿದ ಸುಂದರ ಗಾಯತ್ರಿ ಮಂದಿರ. ಅಮೃತಶಿಲೆಯ ಗಾಯತ್ರಿ ಶಿಲ್ಪದಲ್ಲಿ ಮೊಗ ತೇಜೋಪೂರ್ಣವಾಗಿ ಮೂಡಿದೆ. ಈ ಮಂದಿರದ ಒಳಾಂಗಣವನ್ನು ಬಣ್ಣಬಣ್ಣದ ಗಾಜುಗಳಿಂದ ವಿನ್ಯಾಸಗೊಳಿಸಲಾಗಿದೆ. ಇದರ ಅಂಗಣದಲ್ಲಿ ಗೋವರ್ಧನಗಿರಿಯನ್ನು ಎತ್ತಿ ಹಿಡಿದ ಕೃಷ್ಣನ ದೃಶ್ಯವನ್ನು ರಚಿಸಿದ್ದಾರೆ. ಅದೂ ಸುಂದರವಾಗಿ ಸಹಜ ವಿನ್ಯಾಸದಿಂದ ಕೂಡಿದೆ. ಗಿರಿಯ ಅಡಿಯಲ್ಲಿ ಆಸರೆ ಪಡೆದ ಗೋವು ಮತ್ತು ಜನರ ಶಿಲ್ಪಗಳೂ ಸುಂದರವಾಗಿವೆ.

**ಶ್ರೀಕೃಷ್ಣ ಜನ್ಮಭೂಮಿ:** ವೃಂದಾವನದಲ್ಲಿ ರಾಧಾ-ಕೃಷ್ಣರ ಅನೇಕ ದೇವಾಲಯಗಳು ಇದ್ದರೂ ಅವೆಲ್ಲವನ್ನೂ ಬಿಟ್ಟು 'ಶ್ರೀಕೃಷ್ಣ ಜನ್ಮಸ್ಥಾನ' ಮಂದಿರಕ್ಕೆ ಬಂದೆವು. ನಮ್ಮ ಡ್ರೈವರ್ ಹಿಂಬಾಗಿಲಿನಿಂದ ಹೋದರೆ ಬೇಗ ಪ್ರವೇಶಿಸಬಹುದು ಎಂದ. ನಾವು ಹಾಗೇ ಮಾಡಿದೆವು. ತಪಾಸಣೆ ಬಿಗಿಯಾಗಿತ್ತು. ಇಡೀ ಜನ್ಮಸ್ಥಾನದಲ್ಲಿ ನೂರಾರು ಸೈನಿಕರು ಅಲ್ಲಲ್ಲಿ ಓಡಾಡಿಕೊಂಡಿದ್ದರು. ಗಡಿಯಲ್ಲಿ ಕಾಯುವ ಕಾವಲು ಪಡೆಯಂತೆ ದೇವಸ್ಥಾನಗಳ ಗೋಪುರಗಳ ಮೇಲೂ ನಿಂತು ಪಹರೆ ಕಾಯುತ್ತಿದ್ದರು. ಈ ಮಂದಿರ ಪದೇಪದೇ ಮುಸ್ಲಿಂ ಧಾಳಿಕೋರರ ಆಕ್ರಮಣಕ್ಕೆ ಒಳಗಾಗಿತ್ತು. ಭಾರತದಲ್ಲಿ ಯಾವ ಮಂದಿರವೂ ಇದರಷ್ಟು ಧಾಳಿಗಳಿಗೆ ಒಳಗಾಗಿರಲಿಲ್ಲವೆನ್ನುತ್ತಾರೆ. ಔರಂಗಜೇಬನು ಈ ಜನ್ಮಭೂಮಿಯ ಕಟ್ಟಡವನ್ನು ಕೆಡವಿ ಸಂಕೀರ್ಣದೊಳಗೆ ಮಸೀದಿಯನ್ನು ಕಟ್ಟುತ್ತಾನೆ. ಹೀಗಾಗಿ ಕೃಷ್ಣ ಜನಿಸಿದ ಕೋಣೆ ಮತ್ತು ಮಸೀದಿಗೆ ಒಂದೇ ಗೋಡೆ ಇದೆ. ಕೃಷ್ಣ ಜನಿಸಿದ ಕೋಣೆಗೆ ಹೋಗುವಾಗ ದುರ್ಗೆಯ ಕೋಣೆ ಸಿಗುತ್ತದೆ. ದುರ್ಗೆ ಬೆನ್ನುಹಾಕಿದ ಗೋಡೆ, ಕೃಷ್ಣನ ಬಂದೀಖಾನೆಯ ಕೋಣೆಯ ಹಾಗೂ ಮಸೀದಿಗೆ ಒಂದೇ ಗೋಡೆ. ದುರ್ಗೆಯ ಕೋಣೆಯಿಂದ ಓಣಿಯಲ್ಲಿ ನಡೆದು 'ಶ್ರೀ ಕೃಷ್ಣ ಜನ್ಮಸ್ಥಾನ' ಕ್ಷೇತ್ರ-ಕೋಣೆಗೆ ಬರುತ್ತೇವೆ.

ಶ್ರೀ ಕೃಷ್ಣ ಜನಿಸಿದ ಸ್ಥಳವೇ 'ಶ್ರೀ ಕೃಷ್ಣ ಜನ್ಮಸ್ಥಾನ' ಮಂದಿರ. ಜನ್ಮಭೂಮಿಯ ಒಟ್ಟು ಸಂಕೀರ್ಣ ವಿಶಾಲ ಪ್ರದೇಶದಲ್ಲಿದೆ. ಇದರಲ್ಲಿ ಎರಡು ಮುಖ್ಯ ಭಾಗಗಳಿವೆ. ಮೊದಲನೆಯದು ಕೃಷ್ಣ ಜನಿಸಿದ, ವಸುದೇವ ದೇವಕಿಯರು ಇದ್ದ ಬಂದೀಖಾನೆ. ಮಸೀದಿ ಮತ್ತು ಬಂದೀಖಾನೆಯ ನಡುವೆ ಇರುವ ಓಣಿಯಲ್ಲಿ ಹೋಗಿ ಶ್ರೀ ಕೃಷ್ಣ ಜನಿಸಿದ ಕೋಣೆ ನೋಡಬಹುದು. ಬಂದೀಖಾನೆಯನ್ನು ಹೋಲುವ ಜನ್ಮಸ್ಥಳವನ್ನು ದಾಟಿ ಮಹಡಿ ಹತ್ತಿ ಬಂದರೆ ದೊಡ್ಡ ಮಂದಿರಕ್ಕೆ ಪ್ರವೇಶ ಪಡೆಯಬಹುದು. ಎತ್ತರದ ಅಡಿಪಾಯ ಇರುವ ಇದು ಬೃಹತ್ತಾಗಿ ಕಾಣುವ ಸುಂದರ ಮಂದಿರ. ಇದರೊಳಗೆ ಮುಖ್ಯ ದೇವರಾಗಿ ರಾಧಾ-ಕೃಷ್ಣರ ಸುಂದರ ಆಕರ್ಷಕ ವಿಗ್ರಹಗಳಿವೆ.

ಈ ಶಿಲ್ಪಗಳ ವೇದಿಕೆ ಕೂಡ ಎತ್ತರದಲ್ಲಿದೆ. ಹೆಚ್ಚು ಹತ್ತಿರದಿಂದ ನೋಡದಂತೆ ತಡೆ ನಿರ್ಮಿಸಿದ್ದಾರೆ. ಮೇಲ್ಭಾಗದಲ್ಲಿ ಮತ್ತು ಇದರ ಗೋಡೆಯಲ್ಲಿ ಕೃಷ್ಣನ ವಿವಿಧ ಪವಾಡಗಳ ಮತ್ತು ಬಾಲ್ಯದ ಬಗ್ಗೆ ಚಿತ್ರಗಳನ್ನು ಬಿಡಿಸಲಾಗಿದೆ. ಇತರೆ ಅನೇಕ ಹಿಂದೂ ದೇವರ ವಿಗ್ರಹಗಳೂ ಪೂಜಿಸಲ್ಪಡುತ್ತಿವೆ. ಇತಿಹಾಸಕಾರರ ಪ್ರಕಾರ ಈಗಿನ ದೇವಸ್ಥಾನ ಕ್ರಿ.ಶ. ೧೦ನೆಯ ಶತಮಾನದಲ್ಲಿ ರಚನೆಗೊಂಡಿದೆ. ದೇವಸ್ಥಾನದ ಹೊರಗಡೆ ಸುಂದರವಾಗಿ ಕಟ್ಟಿದ ಅನೇಕ ಮೆಟ್ಟಿಲುಗಳುಳ್ಳ ವಿಶಾಲವಾದ ಕೆರೆ ಇದೆ. ನಾವಿಲ್ಲಿ ಭೇಟಿ ಕೊಟ್ಟಾಗ ಕೃಷ್ಣನ ಜಾತಿಯಾದ ಗೋವಳರ ದಂಡೇ ಬಂದಿತ್ತು. ರಾಧೆಯ ಚಿತ್ರದಲ್ಲಿರುವಂತೆ ಉಡುಗೆಯಲ್ಲಿ ಗೋಪಿಕಾ ಸ್ತ್ರೀಯರು ಬಂದಿದ್ದರು. ಇಲ್ಲಿಂದ ನಾವು ನೇರವಾಗಿ ಸೇತುವೆಯ ಮೂಲಕ ಗೋಕುಲಕ್ಕೆ ಹೋದೆವು.

* * *

**ಗೋಕುಲ:** ಮಥುರಾದಿಂದ ಹತ್ತು ಕಿಲೋಮೀಟರ್ ಪೂರ್ವಕ್ಕೆ (ಈಶಾನ್ಯಕ್ಕೆ) 'ಮಹಾಬನ್' ಮತ್ತು ಗೋಕುಲ ಇದೆ. 'ಮಹಾಬನ್' ಅಂದರೆ ಮಹಾ ಕಾಡು ಎಂದು. ಶ್ರೀಕೃಷ್ಣ ಬಾಲ್ಯ ಕಳೆದ ಕ್ಷೇತ್ರ ಇದು. ಗೋಕುಲ ಕೂಡ ಪುಟ್ಟ ಹಳ್ಳಿ. ಹಳ್ಳಿಯ ನಡುವೆ ನಂದನ ಅರಮನೆ ಇದೆ. ನಂದನ ಅರಮನೆಯನ್ನು 'ಅಸ್ಸಿ ಕಂಬ' ಅರ್ಥಾತ್ ೮೦ ಕಂಬಗಳು ಎಂದೂ ಕರೆಯುತ್ತಾರಂತೆ. ಒಂದು ಕೋಣೆಯಲ್ಲಿ ವೃಂದಾವನದ ರಾಧಾ-ಕೃಷ್ಣರ ವಿಗ್ರಹವನ್ನು ಹೋಲುವ ಗೋಕುಲನಾಥ - ರಾಧಾ-ಕೃಷ್ಣರ ವಿಗ್ರಹಗಳಿವೆ. ಹೊರ ಭಾಗದ ಕೋಣೆಯಲ್ಲಿ ಮಲಗಿದ್ದ ಪೂತನಿಯ ಮೇಲೆ ಕುಳಿತು ಮಗು ಕೃಷ್ಣ ಮೊಲೆಯುಣ್ಣುವ ದೃಶ್ಯ ಶಿಲ್ಪ ಇದೆ. ಕೃಷ್ಣನನ್ನು ತೊಟ್ಟಿಲು ಹಾಕಿದ ಕೋಣೆ, ಯಶೋದೆಯ ಬಾಣಂತಿ ಕೋಣೆ – ಹೀಗೆ ವಿಶಾಲ ಅರಮನೆಯಲ್ಲಿ ಹಲವಾರು ಕೋಣೆಗಳಿವೆ. ಶಿವನು ಮಗು ಕೃಷ್ಣನನ್ನು ನೋಡಲು ಬಂದಾಗ ಯಶೋದೆ, ''ನೀನು ಕತ್ತಿನಲ್ಲಿ ಸರ್ಪವನ್ನು ಧರಿಸಿ ಬಂದಿದ್ದೀಯಾ. ಮಗು ಬೆದರುತ್ತಾನೆ'' ಎಂದು ಶಿವನನ್ನು ವಾಪಸು ಕಳಿಸಿದಳಂತೆ. ಆ ಚಿತ್ರವೂ ಇದೆ. ಯಶೋದೆ ಮತ್ತು ನಂದರ ಮನೆಗೆ ಸಮೀಪ ಮನೆಗೆ ಹೋಗುವ ರಸ್ತೆ ಬದಿ ಒಂದು ಕೆರೆ ಇದೆ. ಕೆರೆಯ ದಂಡೆಯ ಮೇಲೆ ಒಂದು ಪುಟ್ಟ ಮರ ಇದೆ. ''ಕೃಷ್ಣ ಗೋಪಿಕೆಯರ ಸೀರೆಯನ್ನು ಒಟ್ಟುಮಾಡಿ ಇದೇ ಮರ ಹತ್ತಿ ಕುಳಿತುದು'' ಎಂದು ಪ್ರವಾಸಿಗರಿಗೆ ತೋರಿಸುತ್ತಾರೆ.

ನಂದರ ಮನೆಯ ಅಂಗಳದಲ್ಲಿ ಹಸುವೊಂದನ್ನು ಕಟ್ಟಿಹಾಕಿದ್ದರು. ಅದಕ್ಕೆ ಕೈಮುಗಿದು ಅರಮನೆ ಮಂದಿರದ ಒಳಗೆ ಪ್ರವೇಶ ಮಾಡಲು ನಮಗೆ ಸೂಚಿಸಿದರು. ಮಂದಿರದ ಒಳಗೆ ಹೋಗುವ ದಾರಿಯಲ್ಲಿ ಅರಮನೆಯ ಓಣಿಯಲ್ಲಿ ಹೀಗೆ ಎಲ್ಲೆಲ್ಲೂ ಗೋವುಗಳಿವೆ. ಸಗಣಿ ಮತ್ತು ಗಂಜಲದ ರಸ್ತೆಯ ಮೇಲೆಯೇ ಓಡಾಡಬೇಕು. ಈಗಲೂ ಇಲ್ಲಿ ಪಶುಪಾಲನೆಯೇ ಮುಖ್ಯ ವೃತ್ತಿ. ಗೋಕುಲ, ಮಥುರಾ ವೃಂದಾವನದ ಹಾಲಿನಿಂದ ತಯಾರಿಸಿದ ಸಿಹಿತಿಂಡಿಗಳು ಉತ್ತರದ ಕಡೆ ಬಹಳ ಪ್ರಸಿದ್ಧಿಯಾಗಿವೆ. ಇಲ್ಲಿ ಮಣ್ಣಿನ ಲೋಟಾಗಳಲ್ಲಿ ಸಿದ್ಧಪಡಿಸಿಟ್ಟ ಗಟ್ಟಿಯಾಗಿರುವ ಲಸ್ಸಿಯನ್ನು ಎಲ್ಲಾ ಕಡೆ ಮಾರುತ್ತಾರೆ. ಇದು ಸ್ವಾದಿಷ್ಟವಾಗಿದ್ದು ಗಂಟಲಲ್ಲಿ ಇಳಿಯದಷ್ಟು ದಪ್ಪ ಮತ್ತು ರುಚಿಯಾಗಿರುತ್ತದೆ. ಬಾಯಿ ಚಪ್ಪರಿಸುತ್ತಾ ಕುಡಿಯಬೇಕು.

* * *

**ದ್ವಾರಕಾಧೀಶ್ವರ ಟೆಂಪಲ್:** ಮಥುರಾ ನಗರದ ಮಧ್ಯೆ ಬಜಾರ್‌ನಲ್ಲಿ ಇರುವ ದ್ವಾರಕಾಧೀಶ್ವರ ಮಂದಿರ ಯಮುನಾ ನದಿಗೆ ಮುಖ ಮಾಡಿ ಇದೆ. ಕ್ರಿ.ಪೂ. ೪೦೦ರಲ್ಲಿ ಈ ಮಂದಿರ ಕೊಡೆಯಾಕಾರದ ಸಣ್ಣ ಗುಡಿಯಂತೆ ಇತ್ತು. ಕಾಲಾಂತರದಲ್ಲಿ ಅನೇಕ ಬಾರಿ

ಪುನರ್ನಿರ್ಮಾಣಕ್ಕೆ ಒಳಗಾಗಿದೆ. ಮಥುರಾ ನಗರದ ಮಧ್ಯದಲ್ಲಿರುವ ದ್ವಾರಕಾಧೀಶ ಮಂದಿರವನ್ನು ಗ್ವಾಲಿಯರ್‌ನ ಅರಸನ ಖಜಾನಾಧಿಕಾರಿ ೧೮೧೪ರಲ್ಲಿ ಕಟ್ಟಿದ್ದ. ೧೯೬೦ರಲ್ಲಿ ಕೇಂದ್ರ ಪುರಾತತ್ತ್ವ ಇಲಾಖೆ ಇದನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಇದು ಸುಂದರ ಕಟ್ಟಡವಾಗಿದ್ದು ಒಳಾಂಗಣ ವಿನ್ಯಾಸವೂ ಶೋಭಾಯಮಾನವಾಗಿದೆ. ಈ ಸುಂದರ ಮಂದಿರವನ್ನು ಕೃಷ್ಣ ಮತ್ತು ಆತನ ಪ್ರಿಯತಮೆ ರಾಧಾಳಿಗೆ ಸಮರ್ಪಿಸಲಾಗಿದೆ.

ಕಂಸನ ಕೋಟೆಯಿಂದ ತಿರುವು ಪಡೆದು ಯಮುನೆ ಈ ಮಂದಿರದ ಮುಂದಿನಿಂದ ಹರಿಯುತ್ತಾಳೆ. ಮಂದಿರದ ಪ್ರವೇಶದ್ವಾರವು ವಿಶ್ರಾಮ್‌ಘಾಟ್‌ನ ಎದುರಾಗಿ ಇದೆ. ಕಂಸನನ್ನು ಕೊಂದ ನಂತರ ಶ್ರೀ ಕೃಷ್ಣ ವಿಶ್ರಾಮ್‌ಘಾಟ್‌ನಲ್ಲಿ ಕುಳಿತು ವಿಶ್ರಮಿಸಿದ್ದನಂತೆ. ದ್ವಾರಕಾಧೀಶ ಮಂದಿರದ ರಾತ್ರಿಯ ಪೂಜೆ ಆದ ಮೇಲೆ ಈ ವಿಶ್ರಾಮ್‌ಘಾಟ್‌ನಲ್ಲಿ ನಿಂತು ಯಮುನೆಗೆ ಆರತಿ ಬೆಳಗಲಾಗುತ್ತದೆ. ಈ ಘಾಟ್‌ನ ಸುತ್ತ ಅನೇಕ ದೇವಸ್ಥಾನಗಳಿವೆ. ಮಥುರೆಯ ಭಾಗದಲ್ಲಿ ಅನೇಕ ಯಮುನಾ ಘಾಟ್‌ಗಳಿವೆ.




ದೋಣಿ ವಿಹಾರ ಮಾಡಲು ಇಲ್ಲಿ ಅವಕಾಶ ಇದೆ. ನದಿಯ ಕೆಳಭಾಗದಲ್ಲಿ ಅಣೆಕಟ್ಟು ಕಟ್ಟಲಾಗಿದೆ. ಹೀಗಾಗಿ ದ್ವಾರಕಾಧೀಶನ ಮುಂದೆ ಇರುವ ಯಮುನೆ ತುಂಬಿದ ಬಸುರಿಯಂತೆ ಇದ್ದಾಳೆ. ಮಥುರಾ ನಗರಕ್ಕೆ ಕುಡಿಯುವ ನೀರು ಯುಮುನಾ ನದಿಯಿಂದಲೇ ಪೂರೈಕೆಯಾಗುತ್ತದೆ.

ಮಹಾಬನ್ ಕಾಡು ಇರುವ ಗೋಕುಲದ ಎದುರು ಭಾಗದ ದಡದಲ್ಲಿ ಮಥುರಾ ನಗರದಲ್ಲಿ ಕಂಸನ ಕೋಟೆ (?) ಇದೆ. ಯುಮುನಾ ನದಿಯ ಆ ದಡದಲ್ಲಿ ಗೋಕುಲ ಹಾಗೂ ಮಹಾಬನ್ ಇದ್ದರೆ ಈ ದಡದಲ್ಲಿ ಮಥುರಾ ನಗರ ಇದೆ. ವಸುದೇವನು ಯಮುನೆಯನ್ನು ದಾಟಿ ಮಥುರಾದಿಂದ ಗೋಕುಲಕ್ಕೆ ಹೋಗಿದ್ದ ದಾರಿ ಇದೇ ಆಗಿತ್ತು ಎನ್ನುವುದು ನಂಬಿಕೆ. ಈಗಲೂ ಜನರು ದೋಣಿಯ ಮೂಲಕ ಗೋಕುಲದಿಂದ ಮಥುರಾ ನಗರಕ್ಕೆ ನಿತ್ಯ ವಸ್ತುಗಳ ಖರೀದಿಗಾಗಿ ಮಥುರಾಗೆ ಈ ಭಾಗದಲ್ಲಿ ಪ್ರಯಾಣಿಸುತ್ತಾರೆ. ಮಥುರಾಗೆ ಬಂದು ಹೋಗಲು ದೋಣಿ ಪ್ರಯಾಣಕ್ಕೆ ಒಬ್ಬರಿಗೆ ಐದು ರೂಪಾಯಿ. ನಾವು ದೋಣಿಯಲ್ಲಿ ಸುಮಾರು ಒಂದು ಗಂಟೆ ಕಾಲ ವಿಹರಿಸಿದೆವು. ಕಂಸನ ಕೋಟೆಯವರೆಗೂ ನಮ್ಮ ವಿಹಾರ ಮುಂದುವರಿದು ದೋಣಿಯು ಒಂದು ಸುತ್ತು ಹೊಡೆದು ಮರಳುವಾಗ ಗೋಕುಲದ ದಡದ ಹತ್ತಿರ ಇದ್ದೆವು. ''ಕೃಷ್ಣ ಕಾಳಿಂಗಮರ್ದನ ಮಾಡಿದ ಯಮುನೆಯ 'ಮಡು' ತಿರುವಿನ ಆಚೆ ಗೋಕುಲದತ್ತ ಇದೆ'' ಎಂದ ದೋಣಿ ನಡೆಸುವಾತ. ಇಲ್ಲಿ ಯಮುನೆ ಕಂಸನ ಕೋಟೆಗೆ ರಭಸದಿಂದ ಅಪ್ಪಳಿಸಿ ತಿರುವು ಪಡೆದು ಮುಂದೆ ಸಾಗುತ್ತಾಳೆ. ಯಮುನೆಯ ನೆರೆಯಿಂದ ಮಥುರೆಯನ್ನು ರಕ್ಷಿಸಲು ಈ ಕೋಟೆಯನ್ನು ಕಂಸನೇ ಕಟ್ಟಿದ್ದನಂತೆ.

ಐತಿಹಾಸಿಕ ಮಾಹಿತಿಯಂತೆ ಜೈಪುರದ ಅರಸ ಮಾನಸಿಂಗ್ ಕಂಸ ಕೋಟೆಯನ್ನು ನಿರ್ಮಿಸುತ್ತಾನೆ. ಇದನ್ನು ಅಕ್ಬರ್ ಮರುನಿರ್ಮಿಸುತ್ತಾನೆ. ಬಹುಶ ಮಾನಸಿಂಗ್‌ನ ಕಾಲದಲ್ಲಿ ಕಂಸ ಕಟ್ಟಿರಬಹುದಾದ ಕೋಟೆಯ ಸ್ವರೂಪ ಉಳಿದಿಲ್ಲವೋ ಏನೋ ? ಯುಮುನಾ ನದಿಯ ನೆರೆಯಿಂದ ಮಥುರಾವನ್ನು ಈಗಲೂ ಈ ಕೋಟೆಯೇ ರಕ್ಷಿಸುತ್ತಿದೆ. ಈಗ ಸರಕಾರ ಈ ಕೋಟೆಯು ಸುಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳುತ್ತಿದೆ.

ದೋಣಿ ನಡೆಸುವವರೆಲ್ಲ ದ್ವಾರಕಾಧೀಶ ಮಂದಿರದ ಮುಂಭಾಗದ ಯಮುನೆಯ ಇನ್ನೊಂದು ದಡವಾದ ಗೋಕುಲದ ಭಾಗದಲ್ಲಿಯೇ ವಾಸಿಸುತ್ತಿದ್ದಾರೆ. ಇಲ್ಲಿ ಈಗಲೂ ಕೃಷ್ಣನ ಜಾತಿಯ ಗೋವಳರೇ ಅಧಿಕ. ಅವರ ಮಹಿಳೆಯರೇ ಗೋಪಿಕೆಯರು. ಇವರು ಈಗಲೂ ಸೌಂದರ್ಯಶಾಲಿಗಳು. ರಾಧಾ ತೊಟ್ಟಂತಹ ಸಾಂಪ್ರದಾಯಿಕ ಉಡುಗೆಯನ್ನು ರಾಜಸ್ಥಾನ, ಉತ್ತರಪ್ರದೇಶ ಹಾಗೂ ಗುಜರಾತ್‌ಗಳಲ್ಲಿ ಈಗಲೂ ಧರಿಸುತ್ತಿದ್ದಾರೆ. ಗೋವಳರಲ್ಲಿ ಈಗಲೂ ಕನ್ಯಾ ಶುಲ್ಕ ಇದೆ. ಒಂದು ಹೆಣ್ಣು ಮಗು ಹುಟ್ಟಿದರೆ ಇವರಿಗೆ ಈಗಲೂ ದೊಡ್ಡ ಆಸ್ತಿಯಂತೆ.

ಗೋಕುಲದ ಕಾಡಿನಲ್ಲಿ ದೂರ್ವಾಸ ಮುನಿಯ ಪುಟ್ಟ ಗುಡಿ ಈಗಲೂ ಇದ್ದು ಅದಕ್ಕೆ ಪೂಜೆ ನಡೆಯುತ್ತಿದೆ ಎಂದು ತಿಳಿಸಿದ ನಮ್ಮ ದೋಣಿ ಮಾಲೀಕ. ''ದೂರ್ವಾಸಮುನಿಗೂ ೧೧೦೮ ಗೋಪಿಕೆಯರಿದ್ದರು. ಆಚೆ ದಡದಲ್ಲಿ ತಪಸ್ಸು ಮಾಡುತ್ತಿದ್ದ ದೂರ್ವಾಸ ಮುನಿಗೆ, ೧೧೦೮ ಮಂದಿ ಗೋಪಿಕೆಯರು ದಿನಾ ಅಡುಗೆ ಮಾಡಿಕೊಂಡು ಹೋಗಿ ಉಣಿಸಿ ಬರುತ್ತಿದ್ದರು'' ಎಂದು ದೋಣಿ ನಡೆಸುವ ಹುಡುಗ ನಗುತ್ತಾ ಹೇಳಿದ. ಕೃಷ್ಣನಿಗೆ ೧೬೧೦೮ ಮಂದಿ ಗೋಪಿಕೆಯರು ಇದ್ದರು ಎಂದು ದ್ವಾರಕೆಯಲ್ಲೂ ಹೇಳುತ್ತಾರೆ, ಮಥುರಾ, ಗೋಕುಲ, ವೃಂದಾವನದಲ್ಲೂ ಹೇಳುತ್ತಾರೆ. ತನ್ನನ್ನು ಬಯಸಿದ ಯಾವ ಗೋಪಿಕೆಯರನ್ನೂ ಕೃಷ್ಣ ನಿರಾಶೆಗೊಳಿಸುತ್ತಿರಲಿಲ್ಲ (ರಾಧೆಯಂತೆ ಗೋಪಿಕೆಯರಿಗೂ ಮದುವೆಯಾಗಿರಬಹುದು. ಇಲ್ಲವಾದಲ್ಲಿ ಇತರ ಪುರುಷರಿಗೆ ಹೆಣ್ಣುಗಳು ಬೇಕಲ್ಲ!) ಎಂಬ ವಿವರಣೆಯನ್ನು ಇಲ್ಲಿಯ ಗೋವಳರು ಮತ್ತು ಕೃಷ್ಣ ಭಕ್ತರು ಭಕ್ತಿಯಿಂದ, ಹೆಮ್ಮೆಯಿಂದ ನೀಡುತ್ತಾರೆ. ಆಗ ಅವರಲ್ಲಿ ತುಂಟ ಪ್ರಶ್ನೆ ಕೇಳಿದರೆ ''ಅದೆಲ್ಲ ನಮಗೆ ತಿಳಿದಿಲ್ಲ'' ಎನ್ನುತ್ತಾರೆ. ಶ್ರೀ ಕೃಷ್ಣ ದ್ವಾರಕೆಗೆ ಹೋದಾಗ ೧೬೧೦೮ ಗೋಪಿಕೆಯರು ಹೋಗುತ್ತಾರೆ. ಕೃಷ್ಣನ ಅವಸಾನವಾದಾಗ ಗೋಪಿಕೆಯರೆಲ್ಲ ಕೆರೆಯಲ್ಲಿ ಮುಳುಗಿ ಸಾಯುತ್ತಾರೆ. ಅವರ ದೇಹಗಳು ಕೆರೆಯಲ್ಲಿ ಕರಗಿ ಗೋಪಿಚಂದನವಾಗುತ್ತವೆ. ದ್ವಾರಕೆಯ ಹಳ್ಳಿಯೊಂದರಲ್ಲಿ ಗೋಪಿಯರು ಮುಳುಗಿದ ದೊಡ್ಡ ಕೆರೆ 'ಗೋಪೀ ತಲಾಬ್' ಇದೆ. ಇಲ್ಲಿಂದಲೇ ಪರಿಶುದ್ಧ ಗೋಪಿ ಚಂದನ ಪೂರೈಕೆಯಾಗುತ್ತದೆ.

ತುಂಬಿದ ಯಮುನೆಯ ಮೇಲೆ ತೇಲುತ್ತಾ ಸೊಳ್ಳೆಗಳಿಂದ ಕಚ್ಚಿಸಿಕೊಳ್ಳುವ ಶಿಕ್ಷೆ ನಮಗೆ ಸಾಕಾಗಿ ಹೋಗಿತ್ತು. ಆದರೂ ವಿಶ್ರಾಮ್ ಘಾಟ್‌ನಲ್ಲಿ ನಿಂತು ಯಮುನೆಗೆ ಮಾಡುವ ಆರತಿಯನ್ನು ನೋಡಬೇಕಿತ್ತು. ಸಮಯಕ್ಕೆ ಸರಿಯಾಗಿ ನಮ್ಮ ದೋಣಿ ದ್ವಾರಕಾಧೀಶನ ಮುಂಭಾಗದ ನದಿ ಮಧ್ಯೆ ನಿಂತಿತು. ನೂರಾರು ಭಕ್ತರೊಂದಿಗೆ ಬಂದ ಅರ್ಚಕರು ಯಮುನೆಗೆ ಆರತಿ ಬೆಳಗಿದರು. ಆದರೆ ಗಂಗಾನದಿಗೆ ಆರತಿ ಬೆಳಗುವುದನ್ನು ಕಂಡಿದ್ದ ನಾನು ಆ ಸುಂದರ ನೋಟವನ್ನೇ ನೆನೆಸಿಕೊಂಡೆ. ಅದರ ನೆನಪಲ್ಲಿ ಇದು ತನ್ನ ಆಕರ್ಷಣೆ ಕಳೆದುಕೊಂಡಿತು.

ದೋಣಿ ನಡೆಸುತ್ತಿದ್ದ ಬಾಲಕನಿಗೆ ಹಣ ತೆತ್ತು ನಾವು ಸೈಕಲ್ ರಿಕ್ಷಾ ಏರಲು ಸ್ವಲ್ಪ ನಡೆಯಬೇಕಾಯಿತು. ಮಾರ್ಕೆಟ್ ಸುತ್ತಿ ಮತ್ತೊಮ್ಮೆ ಗಟ್ಟಿ ಲಸ್ಸಿ ಕುಡಿದು ಹೋಟೆಲ್ ಸೇರಿದೆವು. ಸೈಕಲ್ ರಿಕ್ಷಾದಲ್ಲಿ ಪಯಣಿಸಿದೆವು. ರಸ್ತೆಗುಂಡಿಗಳ ಮೇಲೆ ಕುದುರೆಯಂತೆ ಸೈಕಲ್ ನೆಗೆದು ನೆಗೆದು ಹಾರಿದಾಗ, ''ನಿಮ್ಮ ಮಾಯಾವತಿ ಸರಕಾರ ರಸ್ತೆಗಳನ್ನು ಯಾಕೆ ಹೀಗೆ ಬಿಟ್ಟಿದೆ'' ಎಂದು ಕೇಳಿದೆ. ಆ ದಿನಗಳಲ್ಲಿ ಮಾಯಾವತಿಯ ಕೊರಳಿನಲ್ಲಿ ನೋಟಿನ ಮಾಲೆ (ಪತ್ರಿಕೆಗಳಲ್ಲಿ) ರಾರಾಜಿಸುತ್ತಿತ್ತು. ಆದರೂ ಸೈಕಲ್ ತುಳಿಯುವ ಬಡವನೊಬ್ಬ ''ನಮ್ಮ ಮೇಡಮ್ ಒಳ್ಳೆಯವರಮ್ಮ. ಅವರೇನು ಮಾಡುತ್ತಾರೆ ಪಾಪ ? ಅವರು ರಸ್ತೆ ರಿಪೇರಿಗೂ ಹಣ ನೀಡುತ್ತಾರೆ. ಆದರೆ ಈ ಅಧಿಕಾರಿಗಳು ಅದನ್ನು ನುಂಗುತ್ತಾರೆ'' ಎಂದಾಗ ನಾನು ಹೆಗ್ಗಡೆಯವರ ಮುಖ ನೋಡಿದೆ.

* * *

ಮಥುರಾ ಪ್ರಯಾಣ ಮುಗಿಸಿ ನಾವು ಮರುದಿನ ೭ ಗಂಟೆಗೆ ದಿಲ್ಲಿಯ ರೈಲು ಹತ್ತಬೇಕಿತ್ತು. ಬೆಳಗ್ಗೆ ೬ ಗಂಟೆಗೆ ಹೋಟೆಲ್ ಮುಂದೆ ವಾಹನಕ್ಕಾಗಿ ಕಾದರೂ ಒಂದು ಆಟೋರಿಕ್ಷಾ ಸಿಗಲಿಲ್ಲ. ಸೈಕಲ್ ರಿಕ್ಷಾದಲ್ಲಿ ಸಾಮಾನು ಇಟ್ಟು ರಿಕ್ಷಾ ಹತ್ತಿ ಸ್ವಲ್ಪ ದೂರ ಸಾಗಿದ್ದೆವು. ಹಿಂದಿನಿಂದ ನನ್ನ ಮಡಿಲಿಗೆ ಚಕ್ಕಂತ ಕೈಹಾಕಿ ಮಡಿಲ ಮೇಲೆ ಇಟ್ಟಿದ್ದ ನನ್ನ ದೊಡ್ಡ ಕೈಪರ್ಸನ್ನು ಮಿಂಚಿನಂತೆ ಎಗರಿಸಲಾಯಿತು. ಎಗರಿಸಿದಾತ ಇಬ್ಬರು ಪಯಣಿಸುತ್ತಿದ್ದ ಸ್ಕೂಟರನ್ನು ಮೂರನೆಯವನಾಗಿ ಹತ್ತಿದ! ನಮ್ಮೊಂದಿಗೆ ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿದ್ದವರು ಕಳ್ಳ ಕೃಷ್ಣನ ನಗರಿಯ ಕೃಷ್ಣ ಸಂತಾನದವರ ಕೈಚಳಕವನ್ನು ಬೆಪ್ಪರಂತೆ ನಿಂತು ನೋಡಿದರು. ಅದರಲ್ಲಿದ್ದ ನಮ್ಮ ಡಿಜಿಟಲ್ ಕ್ಯಾಮೆರಾ ಹಾಗೂ ಇನ್ನಿತರ ವಸ್ತುಗಳನ್ನು ಕಳೆದುಕೊಂಡು ಪೆಚ್ಚು ಮೋರೆ ಹಾಕಿ ನಾವು ದೆಹಲಿ ತಲುಪಿ ಅಲ್ಲಿಂದ ಬೆಂಗಳೂರಿಗೆ ವಾಪಸಾದೆವು.

**ಡಾ|| ಇಂದಿರಾ ಹೆಗ್ಗಡೆ**
ನಂ ೬, ಕೃಷ್ಣಾ ರೆಸಿಡೆನ್ಸಿ, ೪ನೇ ಅಡ್ಡರಸ್ತೆ, ಅಮರಜ್ಯೋತಿನಗರ, ವಿಜಯನಗರ, ಬೆಂಗಳೂರು - ೪೦

# ಗಾಂಧೀಜಿ ಮತ್ತು ಬಟಕ್ ಮಿಯಾ

೧೯೧೭ನೇ ಇಸವಿ ಬಿಹಾರ್‌ನಲ್ಲಿ ರೈತರ ಚಳುವಳಿ ತೀವ್ರಗೊಂಡ ಸಂದರ್ಭ. ಬ್ರಿಟಿಷರು ರೈತರ ಮೇಲೆ ತೀವ್ರ ದೌರ್ಜನ್ಯ ನಡೆಸುತ್ತಿದ್ದರು. ರೈತರ ಆಂದೋಲನಕ್ಕೆ ಬೆಂಬಲ ಸೂಚಿಸಲು ಮಹಾತ್ಮ ಗಾಂಧಿ ಮೋತಿಹಾರ್ ತಲುಪಿದ್ದರು. ಮೋತಿಹಾರ್ ಆಗಿನ ಕಾಲದಲ್ಲಿ ಚಂಪಾರಣ್ ಜಿಲ್ಲೆಯ ಕೇಂದ್ರ ಸ್ಥಾನವಾಗಿತ್ತು. ಗಾಂಧೀಜಿಯವರು ಮೋತಿಹಾರ್ ತಲುಪಿದ ಸುದ್ದಿ ಸಿಗುತ್ತಿದ್ದಂತೆ ಮೋತಿಹಾರ್‌ನ ಇಂಡಿಗೋ ಪ್ಲಾಂಟೇಶನ್‌ನ ಮ್ಯಾನೇಜರ್ ಇರ್ವಿನ್ ಅವರನ್ನು ಹತ್ಯೆಮಾಡುವ ಸಂಚು ರೂಪಿಸಿದ. ಈ ಸಂಚಿನ ಅನುಸಾರ ಗಾಂಧೀಜಿಯವರು ಮೋತಿಹಾರ್ ತಲುಪುತ್ತಲೇ ಗಾಂಧೀಜಿಯವರನ್ನು ಕಂಡು ತನ್ನ ಮನೆಗೆ ಬಂದು ಭೋಜನ ಸ್ವೀಕರಿಸುವಂತೆ ಆಗ್ರಹಿಸಿದ. ಶುದ್ಧ ಹೃದಯ ಮತ್ತು ಪಾರದರ್ಶಕತೆಯಲ್ಲಿ ವಿಶ್ವಾಸವಿಟ್ಟಿದ್ದ ಗಾಂಧೀಜಿಯವರು ಇರ್ವಿನ್‌ನ ಆಮಂತ್ರಣ ಸ್ವೀಕರಿಸಿ ಆತನ ಮನೆಗೆ ಊಟಮಾಡಲು ತಲುಪಿದರು. ಈ ನಡುವೆ ಇರ್ವಿನ್ ತನ್ನ ಅಡುಗೆ ಭಟ್ಟ ಬಟಕ್ ಮಿಯಾಗೆ ಹಾಲಿನಲ್ಲಿ ವಿಷ ಬೆರೆಸಿ ಗಾಂಧೀಜಿಯವರ ಮುಂದಿಡಲು ಆದೇಶಿಸಿದ. ಇರ್ವಿನ್‌ನ ಹೆದರಿಕೆಯಿಂದ ಬಟಕ್ ಮಿಯಾರ ಹಾಲಿನಲ್ಲಿ ವಿಷ ಬೆರೆಸಿ ಗಾಂಧೀಜಿಯವರಿಗೆ ಕೊಡಲು ಮುನ್ನಡೆದರು, ಆದರೆ ಅವರು ವಿಷದ ಹಾಲಿನ ಲೋಟವನ್ನು ಕೊಡುತ್ತಿರುವಂತೆಯೇ ಮುಸಿಮುಸಿ ಅಳುತ್ತಾ ಹಾಲಿನಲ್ಲಿ ವಿಷ ಬೆರೆಸಿರುವುದನ್ನು ಗಾಂಧೀಜಿಗೆ ತಿಳಿಸಿದರು. ಇದಿಷ್ಟು ಗೊತ್ತಾಗುತ್ತಲೇ ಗಾಂಧೀಜಿ ಹಾಲು ಕುಡಿಯಲು ನಿರಾಕರಿಸಿದುದರಿಂದ ಗಾಂಧೀಜಿಯವರನ್ನು ಹತ್ಯೆಗೈಯ್ಯುವ ಇರ್ವಿನ್‌ನ ಸಂಚು ವಿಫಲವಾಯಿತು. ಬಟಕ್ ಮಿಯಾರ ಈ ಕೃತ್ಯದಿಂದ ಗಾಂಧೀಜಿಯವರ ಪ್ರಾಣವೇನೋ ಉಳಿಯಿತು, ಆದರೆ ಬಟಕ್ ಮಿಯಾ ತಮ್ಮ ನೌಕರಿಯನ್ನು ಕಳೆದುಕೊಳ್ಳಬೇಕಾಯಿತು. ನೌಕರಿ ಕಳೆದುಕೊಂಡ ನಂತರ ಬಟಕ್ ಮಿಯಾರ ಬದುಕು ಅತೀವ ಸಂಕಷ್ಟ ಹಾಗೂ ಅಸ್ತವ್ಯಸ್ತತೆಗೆ ಗುರಿಯಾಯಿತು. ಭಾರತದ ಪ್ರಥಮ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದ್ ಈ ಎಲ್ಲಾ ಘಟನೆಗಳ ಪ್ರತ್ಯಕ್ಷ ಸಾಕ್ಷಿಯಾಗಿದ್ದರು.

ದೇಶಕ್ಕೆ ಸ್ವಾತಂತ್ರ್ಯ ಲಭಿಸಿ ೧೯೫೦ರಲ್ಲಿ ಪ್ರಥಮ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದರು ಚಂಪಾರಣ್‌ಗೆ ಭೇಟಿ ಕೊಟ್ಟಾಗ ೩೦ ವರ್ಷಗಳ ನಂತರವೂ ಅವರಿಗೆ ಬಟಕ್ ಮಿಯಾ ಅವರು ಮಹಾತ್ಮ ಗಾಂಧಿಯವರ ಪ್ರಾಣ ರಕ್ಷಣೆ ಮಾಡಿದ್ದು ನೆನಪಿನಲ್ಲಿತ್ತು. ರಾಜೇಂದ್ರ ಪ್ರಸಾದರು ಒಂದು ಬಹಿರಂಗ ಸಭೆಯನ್ನು ಏರ್ಪಡಿಸಿ ಸಾರ್ವಜನಿಕವಾಗಿ ಬಟಕ್ ಮಿಯಾರನ್ನು ಸನ್ಮಾನಿಸಿ, ಅವರ ಬಡತನವನ್ನು ಗಮನಿಸಿ ಬಟಕ್ ಮಿಯಾರಿಗೆ ೩೬ ಗುಂಟೆ ಜಮೀನು ನೀಡುವಂತೆ ಚಂಪಾರಣ್ ಜಿಲ್ಲೆಯ ಜಿಲ್ಲಾಧಿಕಾರಿಗೆ ಆದೇಶ ನೀಡಿದರು. ಆದೇಶ ಜಾರಿಯಾಗುವ ಬದಲು ದೇಶದ ರಾಷ್ಟ್ರಪತಿಯವರ ಆದೇಶ ಸರ್ಕಾರಿ ಕಡತಗಳಲ್ಲಿ ಧೂಳು ತಿನ್ನತೊಡಗಿತು. ಬಟಕ್ ಮಿಯಾರ ಅಸಂಖ್ಯ ಪ್ರಯತ್ನಗಳ ಹೊರತಾಗಿಯೂ ಅವರಿಗೆ ಜಮೀನು ಸಿಗಲಿಲ್ಲ. ಗಾಂಧೀಜಿಯವರ ಪ್ರಾಣರಕ್ಷಣೆ ಮಾಡಿದ ದೇಶದ ಸುಪುತ್ರ ಜಮೀನಿಗಾಗಿ ಸಂಘರ್ಷ ಮಾಡುತ್ತಲೇ ಇದ್ದರು. ಕೊನೆಗೆ ೭ ವರ್ಷಗಳ ನಂತರ ೧೯೫೭ರಲ್ಲಿ ಅವರು ಕೊನೆಯುಸಿರೆಳೆದರು. ಅವರ ಸಾವಿನ ೪ ವರ್ಷಗಳ ನಂತರ ಸರ್ಕಾರ ಕುಂಭಕರ್ಣ ನಿದ್ರೆಯಿಂದ ಎಚ್ಚರಗೊಂಡು ಬಟಕ್ ಮಿಯಾರ ಕುಟುಂಬಕ್ಕೆ ಪಶ್ಚಿಮ ಚಂಪಾರಣ್‌ನಲ್ಲಿ ಸುಮಾರು ೩ ಗುಂಟೆ ಜಮೀನು ಮತ್ತು ಪೂರ್ವ ಚಂಪಾರಣ್‌ನಲ್ಲಿ ೨ ಎಕರೆ ಜಮೀನು ನೀಡಿತು. ಸರಿಸುಮಾರು ೬೦ ವರ್ಷಗಳು ಕಳೆದ ನಂತರವೂ ಇದುವರೆಗೆ ದೇಶದ ಪ್ರಥಮ ರಾಷ್ಟ್ರಪತಿಯವರ ಆಜ್ಞೆ ಪೂರ್ತಿಯಾಗಿ ಜಾರಿ ಆಗಿಲ್ಲ. ಈ ವಿಷಯ ಬಿಹಾರ ವಿಧಾನಸಭೆಯಲ್ಲಿ ಪ್ರಸ್ತಾಪವಾಗಿದೆ. ಆದರೆ ಈ ಹೊರತಾಗಿಯೂ ಬಟಕ್ ಮಿಯಾರ ಕುಟುಂಬಕ್ಕೆ ಬಾಕಿ ಜಮೀನು ಇದುವರೆಗೂ ದೊರಕಿಲ್ಲ.

ಬಟಕ್ ಮಿಯಾರ ಕುಟುಂಬ ಇಂದಿಗೂ ರಾಜೇಂದ್ರ ಪ್ರಸಾದರ ಅಡಿಶನಲ್ ಸೆಕ್ರೆಟರಿ ವಿಶ್ವನಾಥ ವರ್ಮರ ಪತ್ರದ ಆಧಾರದ ಮೇಲೆ ಭರವಸೆಯನ್ನು ಇಟ್ಟುಕೊಂಡು ಕುಳಿತಿದೆ. ಈ ಪತ್ರದಲ್ಲಿ ಮಹಾಮಹಿಮ ರಾಷ್ಟ್ರಪತಿಯವರು ಬಿಹಾರ ಸರ್ಕಾರಕ್ಕೆ ಬಟಕ್ ಮಿಯಾರ ಪುತ್ರ ಜನ್ ಅನ್ಸಾರಿಗೆ ಭೂಮಿ ಕೊಡಲು ಆಜ್ಞೆ ಮಾಡಿರುವ ಉಲ್ಲೇಖವಿದೆ. ದುರಂತವೆಂದರೆ ಜನ್ ಅನ್ಸಾರಿಯವರಿಗೂ ಅವರ ಜೀವಿತ ಕಾಲದಲ್ಲಿ ಜಮೀನು ದೊರಕಲಿಲ್ಲ. ಈಗ ಬಟಕ್ ಮಿಯಾರ ಮೂರನೇ ಪೀಳಿಗೆ ಸಹ ಜಮೀನು ಸಿಗುವ ಭರವಸೆಯನ್ನು ಬಿಟ್ಟುಬಿಟ್ಟಿದೆ. ಬಿಹಾರದಲ್ಲಿ ಈ ೬೦ ವರ್ಷಗಳಲ್ಲಿ ಕಾಂಗ್ರೆಸ್, ಜನತಾ ಪಾರ್ಟಿ, ರಾಷ್ಟ್ರೀಯ ಜನತಾದಳ, ಸಂಯುಕ್ತ ಜನತಾದಳ ಸರ್ಕಾರಗಳಿಂದ ಹಿಡಿದು ಸಮ್ಮಿಶ್ರ ಸರ್ಕಾರಗಳೂ ರಚನೆಯಾಗಿವೆ. ಆದರೆ ಯಾರೂ ಸಹ ಇತ್ತ ಕಡೆಗೆ ಗಮನ ಕೊಡಲಿಲ್ಲ ಮತ್ತು ಎಲ್ಲ ಸರಕಾರಗಳು ರಾಜ್ಯದ ಸುಪುತ್ರ ರಾಜೇಂದ್ರ ಪ್ರಸಾದರ ಆದೇಶವನ್ನು ಅಪಮಾನಕ್ಕೀಡುಮಾಡಿವೆ. ಇಂದು ಪ್ರತಿ ವರ್ಷ ಅಕ್ಟೋಬರ್ ೨ಕ್ಕೆ ನಾವು ಗಾಂಧೀಜಿಯವರನ್ನು ನೆನಪಿಸಿಕೊಳ್ಳುತ್ತೇವೆ. ಆದರೆ ಅವರ ಪ್ರಾಣ ರಕ್ಷಣೆ ಮಾಡಿದವರನ್ನು ನೆನಪಿಸಿಕೊಳ್ಳುವುದಿಲ್ಲ, ಸರ್ಕಾರಗಳೂ ತಾವು ನೀಡಿದ ವಾಗ್ದಾನವನ್ನು ಪಾಲಿಸುವುದರಲ್ಲಿ ಆಸಕ್ತಿ ತೋರಿಸುತ್ತಿಲ್ಲ.

ಬಿಹಾರದ ನಿತೀಶ್ ಕುಮಾರ್ ಸರ್ಕಾರ ಈ ಹಿಂದಿನ ಸರ್ಕಾರಗಳು ಮಾಡಿದ ತಪ್ಪನ್ನು ಸರಿಪಡಿಸುವುದೋ ಅಥವಾ ಒಬ್ಬ ಸ್ವತಂತ್ರ ಸೇನಾನಿಯ ಪರಿವಾರ ಹೀಗೆಯೇ ಬಾಗಿಲಿಂದ ಬಾಗಿಲಿಗೆ ಅಲೆಯುತ್ತದೆಯೋ ಕಾದು ನೋಡಬೇಕು.

(೭-೩-೨೦೧೦ರ 'ಚೌತಿ ದುನಿಯಾ' ಹಿಂದಿ ವಾರಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನ)

ಮೂಲ ಹಿಂದಿ : **ಅನಂತ್ ವಿಜಯ್**
ಕನ್ನಡಕ್ಕೆ : **ಕೆ. ಪ್ರಕಾಶ್**
ಹಿಂದಿ ಉಪನ್ಯಾಸಕ, ಕೇರಾಫ್ : ಆಸಿಡ್ ಶಾಪ್
ಭೂತನಗುಡಿ, ಭದ್ರಾವತಿ - ೫೭೭ ೩೦೧



**ದೇಶಕ್ಕೆ ಸ್ವಾತಂತ್ರ್ಯ ಲಭಿಸಿ ೧೯೫೦ರಲ್ಲಿ ಪ್ರಥಮ ರಾಷ್ಟ್ರಪತಿ ಡಾ॥ ರಾಜೇಂದ್ರ ಪ್ರಸಾದ್‌ರು ಚಂಪಾರಣ್‌ಗೆ ಭೇಟಿ ಕೊಟ್ಟಾಗ ೩೦ ವರ್ಷಗಳ ನಂತರವೂ ಅವರಿಗೆ ಬಟಕ್ ಮಿಯಾ ಅವರು ಮಹಾತ್ಮ ಗಾಂಧಿಯವರ ಪ್ರಾಣ ರಕ್ಷಣೆ ಮಾಡಿದ್ದು ನೆನಪಿನಲ್ಲಿತ್ತು. ರಾಜೇಂದ್ರ ಪ್ರಸಾದರು ಒಂದು ಬಹಿರಂಗ ಸಭೆಯನ್ನು ಏರ್ಪಡಿಸಿ ಸಾರ್ವಜನಿಕವಾಗಿ ಬಟಕ್ ಮಿಯಾರನ್ನು ಸನ್ಮಾನಿಸಿ, ಅವರ ಬಡತನವನ್ನು ಗಮನಿಸಿ ಬಟಕ್ ಮಿಯಾರಿಗೆ ೩೬ ಗುಂಟೆ ಜಮೀನು ನೀಡುವಂತೆ ಚಂಪಾರಣ್ ಜಿಲ್ಲೆಯ ಜಿಲ್ಲಾಧಿಕಾರಿಗೆ ಆದೇಶ ನೀಡಿದರು. ಆದೇಶ ಜಾರಿಯಾಗುವ ಬದಲು ದೇಶದ ರಾಷ್ಟ್ರಪತಿಯವರ ಆದೇಶ ಸರ್ಕಾರಿ ಕಡತಗಳಲ್ಲಿ ಧೂಳು ತಿನ್ನತೊಡಗಿತು. ಬಟಕ್ ಮಿಯಾರ ಅಸಂಖ್ಯ ಪ್ರಯತ್ನಗಳ ಹೊರತಾಗಿಯೂ ಅವರಿಗೆ ಜಮೀನು ಸಿಗಲಿಲ್ಲ, ಗಾಂಧೀಜಿಯವರ ಪ್ರಾಣರಕ್ಷಣೆ ಮಾಡಿದ ದೇಶದ ಸುಪುತ್ರ ಜಮೀನಿಗಾಗಿ ಸಂಘರ್ಷ ಮಾಡುತ್ತಲೇ ಇದ್ದರು.**

# ಸುವರ್ಣ ಎಂಬ ಅನ್ವರ್ಥ ಹೆಸರಿನ ಶಿಷ್ಯೆ




'ಉಪಾಧ್ಯಾಯಾಶ್ಚ ವೈದ್ಯಾಶ್ಚ ಕಾರ್ಯಾಂತೇ ಅಪ್ರಯೋಜಕಾಃ' ಎನ್ನುವ ಸಂಸ್ಕೃತದ ಉಕ್ತಿಯನ್ನು ಎಲ್ಲಿಯೋ ಓದಿದ ನೆನಪು. ನನಗೆ ಸಂಸ್ಕೃತ ಬಾರದು. ಸಂಸ್ಕೃತ ಬಲ್ಲವರ ಪ್ರಕಾರ, ಉಪಾಧ್ಯಾಯರು ಮತ್ತು ವೈದ್ಯರು ತಮ್ಮ ಕೆಲಸ ನಿರ್ವಹಿಸಿದ ನಂತರದಲ್ಲಿ ನಿಷ್ಪ್ರಯೋಜಕರು ಎಂದು ಪರಿಗಣಿಸಲ್ಪಡುತ್ತಾರೆ ಎನ್ನುವುದು ಈ ಮಾತಿನ ಅರ್ಥವಂತೆ. ಹಣ ಕೊಟ್ಟು ಅಂಗಡಿಯಿಂದ ಸಾಮಾನು ಕೊಂಡು ತಂದಮೇಲೆ ನಮಗೆ ಅಂಗಡಿಯವನ ಹಂಗೇನು? ಇದೂ ಅಷ್ಟೆ. ಉಪಾಧ್ಯಾಯರು ತಮ್ಮ ಸೇವೆಗೆ ಸಂಬಳ ಪಡೆದುಕೊಳ್ಳುತ್ತಾರೆ, ವೈದ್ಯರು ತಮ್ಮ ಚಿಕಿತ್ಸೆಗೆ ನಿಗದಿತ ಶುಲ್ಕವನ್ನು ವಸೂಲಿ ಮಾಡಿಕೊಳ್ಳುತ್ತಾರೆ. ಅಲ್ಲಿಗೆ ಮುಗಿಯಿತು. ಈ ನಿಲುವು ನನಗೆ ತಪ್ಪು ಎನ್ನಿಸುವುದಿಲ್ಲ.

ಹಾಗಾದರೂ ಒಮ್ಮೊಮ್ಮೆ, ಅಪವಾದ ಎನ್ನುವಂತೆ, ಗುರು ಶಿಷ್ಯರ ನಡುವೆ ಒಂದೆ ಬಗೆಯ ಮಧುರ ಬಾಂಧವ್ಯ, ಪರಸ್ಪರ ಗೌರವ ಬೆಳೆದುಕೊಂಡು ಬರುತ್ತದೆ. ಆ ಬಗೆಯ ಸಂಬಂಧ ವ್ಯಾವಹಾರಿಕವಾದುದಲ್ಲ; ಅದು ಕೇವಲ ಪ್ರೀತಿಗೆ ಸಂಬಂಧಿಸಿದ್ದು. ನನ್ನ ಬದುಕಿನ ಈ ಶರತ್ಕಾಲದಲ್ಲೂ ನನ್ನ ಕೆಲವು ಅಧ್ಯಾಪಕರುಗಳನ್ನು ನೆನಪಿಸಿ ಕೊಳ್ಳುತ್ತೇನೆ. ಅವರ ಬಗೆಗಿನ ನನ್ನ ಆದರಪೂರ್ವಕ ಗೌರವ ಅವರು ಕಲಿಸಿಕೊಟ್ಟ ಪಾಠಗಳಿಂದ ಮಾತ್ರವೇ ಬೆಳೆದು ಬಂದದ್ದಲ್ಲ. ಅದಕ್ಕಿಂತ ಹೆಚ್ಚಾಗಿ ಅವರ ನಡೆನುಡಿಗಳು, ಅವರು ನಡೆದುಕೊಂಡ ಮಾರ್ಗ, ಅವರು ನನ್ನನ್ನು ನಡೆಸಿಕೊಂಡ ರೀತಿ, ಅವರು ಪ್ರತಿನಿಧಿಸುತ್ತಿದ್ದ ಮೌಲ್ಯಗಳು ಈ ಮುಂತಾದ ಅಂಶಗಳಿಂದ ರೂಪುಗೊಂಡದ್ದು ನನ್ನ ಭಾಗ್ಯ. ನನ್ನ ಕೆಲವು ವಿದ್ಯಾರ್ಥಿಗಳೂ ಸಹ – ಆ ಸಂಖ್ಯೆ ಅಷ್ಟೇನೂ ದೊಡ್ಡದಿರಲಾರದು – ನನ್ನ ಬಗ್ಗೆ ಆದರ, ವಿಶ್ವಾಸಗಳನ್ನಿಟ್ಟುಕೊಂಡಿದ್ದಾರೆ; ಗೌರವದಿಂದ ನಡೆಸಿಕೊಳ್ಳುತ್ತಿದ್ದಾರೆ. ಅದು ನನ್ನಲ್ಲಿ ಸಂತೋಷ ಮತ್ತು ಹೆಮ್ಮೆ ಎರಡನ್ನೂ ಉಂಟುಮಾಡಿದೆ. ಇಂತಹ ವಿದ್ಯಾರ್ಥಿಗಳನ್ನು ನೆನಪಿಸಿಕೊಳ್ಳುವುದೇ ಒಂದು ಬಗೆಯ ಆನಂದ.

ನಾನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮನಃಶಾಸ್ತ್ರ ಅಧ್ಯಾಪಕನಾಗಿದ್ದ ಕಾಲಕ್ಕೆ ಸುವರ್ಣ ಎಂಬ ಹುಡುಗಿ ನನ್ನ ಶಿಷ್ಯೆಯಾಗಿದ್ದಳು. ಅವಳೊಬ್ಬ ಚೈತನ್ಯದ ಚಿಲುಮೆ. ಕೇವಲ ಪಾಠಗಳಲ್ಲಷ್ಟೇ ಅಲ್ಲದೆ ಪಠ್ಯೇತರ ಚಟುವಟಿಕೆಗಳಲ್ಲೂ ಆಸಕ್ತಿ ಹೊಂದಿದ್ದು, ಅವಳೊಬ್ಬ ಉತ್ಸಾಹದ ಬುಗ್ಗೆಯಾಗಿದ್ದಳು. ಓದು ಮುಗಿದ ನಂತರ ಬೆಂಗಳೂರಿನ ಖಾಸಗಿ ಕಾಲೇಜೊಂದರಲ್ಲಿ ಮನಃಶಾಸ್ತ್ರದ ಅಧ್ಯಾಪಕಿಯಾಗಿ, ಮುಖ್ಯಸ್ಥಳಾಗಿ ಆ ಇಲಾಖೆಯನ್ನು ಕಟ್ಟಿ ಬೆಳೆಸಿದಳು. ಒಳ್ಳೆಯ ಅಧ್ಯಾಪಕಿ ಎಂದು ಹೆಸರು ಮಾಡಿದಳು. ಸಾಹಿತ್ಯ, ಕಲೆ, ರಂಗ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದ ಆಕೆ ತೀವ್ರ ಸಾಮಾಜಿಕ ಕಳಕಳಿಯನ್ನೂ ಹೊಂದಿದ್ದಳು. ಆದರೆ ಚಿಕ್ಕ ವಯಸ್ಸಿನಲ್ಲೇ ಕೀಲುರೋಗದಿಂದ ನರಳುತ್ತಿದ್ದ ಸುವರ್ಣಳ ಕಾರ್ಯಚಟುವಟಿಕೆಗಳು ಕುಂಟಿತವಾಗಿದ್ದವು. ಆಕೆ ಎಷ್ಟು ಎತ್ತರಕ್ಕೆ ಬೆಳೆಯಬಹುದಾಗಿತ್ತೋ ಆ ಎತ್ತರಕ್ಕೆ ಬೆಳೆಯುವುದು ಸಾಧ್ಯವಾಗಲಿಲ್ಲವೇನೋ ಎನ್ನುವ ಕೊರಗು ನನ್ನನ್ನು ಇಂದಿಗೂ ಕಾಡುತ್ತದೆ. ಅದು ಎಂತೂ ಇರಲಿ, ಸುವರ್ಣ ಛಲ ಬಿಡದೆ ತನ್ನ ಕೆಲಸಕಾರ್ಯಗಳನ್ನು ಸಮರ್ಥವಾಗಿ ನಿಭಾಯಿಸಿಕೊಂಡು ಹೋದಳು ಎಂಬುದು ಯಾರೂ ಮೆಚ್ಚಬಹುದಾದ ವಿಚಾರ.

ನಾನು ಮನಃಶಾಸ್ತ್ರ ಇಲಾಖೆಯಿಂದ ದೂರವಾಗಿ ಮಾಧ್ಯಮ ಶಿಕ್ಷಣದತ್ತ ತೊಡಗಿಸಿಕೊಂಡಾಗ ಸುವರ್ಣಳ ಜೊತೆ ನನ್ನ ಸಂಪರ್ಕ ಕಡಿಮೆಯಾಯಿತು. ಒಂದೆರಡು ಬಾರಿ ಅವಳ ಕಾಲೇಜಿನ ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಅವಳನ್ನು ಭೇಟ್ಟಿಯಾದ ನೆನಪು.

ಕಾಲಚಕ್ರ ಉರುಳಿ ನಾನು ನನ್ನ ವೃತ್ತಿಜೀವನದಿಂದ ನಿವೃತ್ತನಾಗಿ ಕೆಲವು ವರ್ಷಗಳ ನಂತರ ಒಂದು ದಿನ ಆಟೋಚಾಲಕನೊಬ್ಬ ಬಂದು ನನ್ನ ಮನೆಯ ಬಾಗಿಲು ತಟ್ಟಿದ. ಆಟೋದಲ್ಲಿ ಒಬ್ಬ ಮಹಿಳೆ ಇದ್ದಾರೆಂದೂ, ಅವರಿಗೆ ಇಳಿದುಬರುವುದು ಕಷ್ಟವಾಗುವ ಕಾರಣ, ನಾನೇ ಆಟೋ ಬಳಿಗೆ ಬಂದು ಅವರನ್ನು ಕಾಣಲು ಸಾಧ್ಯವೇ, ಎಂದು ವಿಚಾರಿಸಿದ. ಯಾರಿರಬಹುದು ಎಂಬ ಕುತೂಹಲದಿಂದ ನಾನು ಆಟೋ ಬಳಿಗೆ ಹೋಗಿ ನೋಡಿದರೆ ಅದರಲ್ಲಿ ಸುವರ್ಣ ಕುಳಿತಿದ್ದಳು. ಅವಳು ಬಂದ ವ್ಯವಹಾರವನ್ನು ಅಲ್ಲಿಯೇ ಮುಗಿಸಿ ಹೊರಡುವ ಇಚ್ಛೆ ಅವಳದ್ದಾಗಿತ್ತು. ಹಾಗಾದರೂ ನಾನು ಒತ್ತಾಯ ಮಾಡಿ, ಆಟೋಚಾಲಕನ ಸಹಾಯದಿಂದ ಅವಳನ್ನು ಒಂದು ಕುರ್ಚಿಯಲ್ಲಿ ಕೂಡಿಸಿಕೊಂಡು ಮನೆಯೊಳಗೆ ಕರೆದುಕೊಂಡು ಬಂದೆ. ''ನಿಮಗೆ ವೃಥಾ ತೊಂದರೆ'' ಎಂದು ಸುವರ್ಣ ಮುಜುಗರಪಟ್ಟುಕೊಂಡಳು.

''ನೀವೇಕೆ ಇಲ್ಲಿಗೆ ಬರುವ ತೊಂದರೆ ತೆಗೆದುಕೊಂಡಿರಿ? ನನ್ನೊಡನೆ ಏನಾದರೂ ಮಾತಾಡುವುದಿದ್ದಿದ್ದರೆ, ನನಗೆ ಫೋನ್ ಮಾಡಿದ್ದರೆ ನಾನೇ ನಿಮ್ಮ ಕಾಲೇಜಿನ ಹತ್ತಿರ ಬರುತ್ತಿದ್ದೆ'' ಎಂದೆ. ''ಹಾಗೆಲ್ಲಾದರೂ ಉಂಟೇ, ಸಾರ್?'' ಎಂದು ಆಕೆ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿದಳು. ಸುವರ್ಣ ಅಂದು ನನ್ನನ್ನು ನೋಡಲು ಬಂದ ಉದ್ದೇಶ ನನಗೆ ಆಶ್ಚರ್ಯ ಮತ್ತು ಮೆಚ್ಚುಗೆ ಎರಡನ್ನೂ ತರುವಂತಹುದಾಗಿದ್ದಿತು. ಆಕೆ ಅದೇ ತಾನೆ ಅವಳ ಪಿಎಚ್.ಡಿ. ಮುಗಿಸಿದ್ದಳು; ಪರೀಕ್ಷೆಯ ಫಲಿತಾಂಶ ಹೊರಬಿದ್ದಿತ್ತು. ಆಕೆ ಹೇಳಿದಳು: ''ಸಾರ್, ನನ್ನ ಪಿಎಚ್.ಡಿ. ಪ್ರಬಂಧವನ್ನು ತೋರಿಸುವ ಸಲುವಾಗಿ ನಾನು ನಿಮ್ಮಲ್ಲಿಗೆ ಬಂದಿದ್ದೇನೆ. ನೀವೇ ಅಲ್ಲವೇ ನಮಗೆ ಸಂಶೋಧನೆಯ ಪಾಠವನ್ನು ಹೇಳಿದವರು? ನಿಮ್ಮಿಂದಲೇ ನಾನು ಸಂಶೋಧನೆಯ ಬಗ್ಗೆ ಕಲಿತದ್ದು.''

ಸುವರ್ಣಳ ಮೇಲಿನ ಮಾತುಗಳಿಗಿಂತ ಮಿಗಿಲಾದ ಸನ್ಮಾನ ನನಗೆ ದೊರಕಲಾರದು; ದೊರಕಲೂ ಬೇಕಿಲ್ಲ. ಇಂತಹ ಕೃತಜ್ಞತಾಭಾವವನ್ನು ವ್ಯಕ್ತಪಡಿಸುವ ಒಂದು ಪ್ರೀತಿಯ ಮಾತಿಗಿಂತ ಒಬ್ಬ ಅಧ್ಯಾಪಕನಾದವನು ಹೆಚ್ಚಿನದೇನನ್ನೂ ನಿರೀಕ್ಷಿಸಬಾರದು. ಸುವರ್ಣಳಂತಹ ವಿದ್ಯಾರ್ಥಿಯನ್ನು ಪಡೆದ ಧನ್ಯತಾ ಭಾವನೆ ನನ್ನಲ್ಲಿದೆ. ಸುವರ್ಣ ಎನ್ನುವುದು ಅವಳಿಗೆ ಅನ್ವರ್ಥ ಹೆಸರು.

**ಎ. ಎಚ್. ಈಶ್ವರ**

ಎಚ್.ಐ.ಜಿ. ೧೧, ಕೆ. ಹೆಚ್. ಬಿ. ಕಾಲೋನಿ, ಬಸವೇಶ್ವರನಗರ ಮೊದಲನೆ ಹಂತ
ಬೆಂಗಳೂರು - ೫೬೦ ೦೭೯



ಎರಡೇ ಜಾತಿ
ಜಗದಲ್ಲಿ
ನರ – ನಾರಿ
ಉಳಿದ ಎಲ್ಲ
ವ್ಯವಹಾರ
ನಾವು ಮಾಡಿದ್ದು
ಹೌ ಹಾರಿ



ಇನ್ನೂಜಾರಿಗೆ
ಬಂದಿಲ್ಲ
ಸಮಾನತೆಯ
ಕಾಯದೆ
ಹೆಣ್ಣಿನ ಹಣೆಬರಹ
ಬರಿ ಕಾಯೊದೆ

## ಲೋಕಸಾಹಿತ್ಯೋದ್ಯಾನದ ಸವಿಜೇನು ಸಂಗ್ರಹ

# ವಿಶ್ವಕಥಾಕೋಶ

**96 ದೇಶ-ಪ್ರದೇಶಗಳ, 320 ಲೇಖಕರ 324 ಶ್ರೇಷ್ಠ ಕಥೆಗಳ ಕಣಜ**

ಪ್ರಧಾನ ಸಂಪಾದಕರು

**ನಿರಂಜನ**

ಡಿಮ್ಮೈ ಅಷ್ಟದಳಾಕಾರದಲ್ಲಿ (14 x 21.5 ಸೆಂ. ಮೀ.)
ಸುಮಾರು 4000 ಪುಟಗಳು. 25 ಸಂಪುಟಗಳಲ್ಲಿ

**ಕನ್ನಡ ಜನಕೋಟಿಗೆ ನವಕರ್ನಾಟಕ ಪ್ರಕಾಶನದ ಕೊಡುಗೆ**

***30 ವರ್ಷಗಳ ನಂತರ ಇದೀಗ ಮರುಮುದ್ರಣವಾಗುತ್ತಿದೆ.***

ಇಂದಿನ ಮಾರುಕಟ್ಟೆಯ ದರದಲ್ಲಿ ಪ್ರತಿಸಂಪುಟಕ್ಕೆ ₹100ರಂತೆ 25 ಸಂಪುಟಗಳಿಗೆ ₹2500
ಇನ್‌ಫೋಸಿಸ್ ಫೌಂಡೇಷನ್ ನೆರವಿನೊಂದಿಗೆ ಪ್ರತಿ ಸಂಪುಟಕ್ಕೆ ₹65ರಂತೆ ಸುಲಭದರದಲ್ಲಿ ಲಭ್ಯ

**ಒಟ್ಟು 25 ಸಂಪುಟಗಳ ಮುದ್ರಿತ ಬೆಲೆ ₹1625**

| ಮಾರ್ಚ್ 2011ರಲ್ಲಿ ಲೋಕಾರ್ಪಣೆ | ಪ್ರಕಟಣಾಪೂರ್ವ ಬೆಲೆ **₹1100** | ಭಾರಿ ಉಳಿತಾಯ ₹525 |
|---|---|---|

₹1100ನ್ನು ಒಂದೇ ಕಂತಿನಲ್ಲಿ ಅಥವಾ ₹550ರಂತೆ 2 ಕಂತುಗಳಲ್ಲಿ ಪಾವತಿಸಬಹುದು. ರಿಯಾಯಿತಿ ಪಡೆಯಲು ಮುಂಗಡ ₹550ನ್ನು (ಅಥವಾ ಪೂರ್ತಿ ₹ 1100ನ್ನು) ಇಂದೇ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ವಿಳಾಸಕ್ಕೆ ಕಳಿಸಿ ನಿಮ್ಮ ಹೆಸರನ್ನು ನೋಂದಣಿ ಮಾಡಿಕೊಳ್ಳಿ. ಹಣವನ್ನು ಚೆಕ್, ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಿ. ಇಲ್ಲವೇ ನಮ್ಮ ಬ್ಯಾಂಕ್ ಅಕೌಂಟ್‌ಗೆ ಜಮಾ ಮಾಡಿ. (Current A/c No. 0788201010612; IFSC Code CNRB0000788; Canara Bank, Madhavnagar Branch. ಹೀಗೆ ಜಮಾ ಮಾಡುವವರು ಬ್ಯಾಂಕ್ ಚಲನ್‌ನ ಜೆರಾಕ್ಸ್ ಪ್ರತಿ ಹಾಗೂ ತಮ್ಮ ಹೆಸರು, ವಿಳಾಸವನ್ನು ಕೆಳಕಂಡ ನಮ್ಮ ಪ್ರಧಾನ ಕಛೇರಿಗೆ ಕಳಿಸಬೇಕು).

**ಧರಣಿಮಂಡಲ ಮಧ್ಯದೊಳಗೆ**
22 ಕನ್ನಡ ಕಥೆಗಳು

**ಆಫ್ರಿಕದ ಹಾಡು**
ಆಫ್ರಿಕ ಖಂಡದ ಕಥೆಗಳು
ಅನು : ಸಿ. ಸೀತಾರಾಮ್

**ಕಾಡಿನಲ್ಲಿ ಬೆಳದಿಂಗಳು**
ವಿಯೆಟ್ನಾಮ್ ಕಥೆಗಳು
ಅನು : ಸಿ.ಪಿ. ರವಿಕುಮಾರ್

**ಚೆಲುವು**
ಮಂಗೋಲಿಯ, ಚೀನ, ಜಪಾನ್, ಕೊರಿಯ ಕಥೆಗಳು
ಅನು : ಜಿ.ಎಸ್. ಸದಾಶಿವ

**ಸುಭಾಷಿಣಿ**
ಭಾರತ, ನೆರೆಹೊರೆಯ 23 ಕಥೆಗಳು
ಅನು : 23 ಅನುವಾದಕರು

**ವಿಚಿತ್ರ ಕಕ್ಷಿದಾರ**
ಇಂಗ್ಲೆಂಡ್ ಕಥೆಗಳು
ಅನು : ಎನ್.ಎಸ್. ರಾಮಚಂದ್ರಯ್ಯ
ಎಸ್.ಆರ್. ಭಟ್

**ಮಂಜುಹೂವಿನ ಮದುವಣಗ**
ಹಂಗೆರಿ, ರುಮಾನಿಯ ಕಥೆಗಳು
ಅನು : ಕೆ.ಎಸ್. ನಾರಾಯಣಸ್ವಾಮಿ

**ಬೂದುಬಣ್ಣದ ಕಾಂಗರೂ**
ಆಸ್ಟ್ರೇಲಿಯ, ನ್ಯೂಝಿಲೆಂಡ್ ಕಥೆಗಳು
ಅನು : ಪಾ. ಸಂಜೀವ ಬೋಳಾರ

**ಹೆಜ್ಜೆಗುರುತು**
ರಷ್ಯ - ನೆರೆಹೊರೆ ಕಥೆಗಳು
ಅನು : ಕೆ.ಎಸ್. ನಿಸಾರ್ ಅಹಮದ್

**ಅರಬಿ**
ಐರ್‌ಲೆಂಡ್, ವೇಲ್ಸ್, ಸ್ಕಾಟ್‌ಲೆಂಡ್ ಕಥೆಗಳು
ಅನು : ಶಾ. ಬಾಲು ರಾವ್

**ನೆತ್ತರು ದೆವ್ವ**
ಚೆಕೊಸ್ಲೊವಾಕಿಯ, ಪೋಲೆಂಡ್ ಕಥೆಗಳು
ಅನು : ಎಚ್.ಕೆ. ರಾಮಚಂದ್ರಮೂರ್ತಿ

**ಬಾವಿಕಟ್ಟೆಯ ಬಳಿ**
ಯುಗೊಸ್ಲಾವಿಯ, ಅಲ್ಬೇನಿಯ, ಬಲ್ಗೇರಿಯ ಕಥೆಗಳು
ಅನು : ಚಿ. ಶ್ರೀನಿವಾಸರಾಜು

**ಅದೃಷ್ಟ**
ಅಮೆರಿಕ, ಕೆನಡ, ಮೆಕ್ಸಿಕೊ ಕಥೆಗಳು
ಅನು : ವೀಣಾ ಶಾಂತೇಶ್ವರ

**ಸಜ್ಜನನ ಸಾವು**
ಐಸ್‌ಲೆಂಡ್, ಡೆನ್‌ಮಾರ್ಕ್, ನಾರ್ವೆ, ಸ್ವೀಡನ್, ಫಿನ್‌ಲೆಂಡ್ ಕಥೆಗಳು
ಅನು : ಕ.ನಂ. ನಾಗರಾಜು

**ಡೇಗೆ ಹಕ್ಕಿ**
ಇಟಲಿ, ಆಸ್ಟ್ರಿಯ ಕಥೆಗಳು
ಅನು : ಎಸ್. ಅನಂತನಾರಾಯಣ

**ಅವಸಾನ**
ಗ್ರೀಸ್, ಸೈಪ್ರಸ್, ಟರ್ಕಿ ಕಥೆಗಳು
ಅನು : ಈಶ್ವರಯ್ಯ

**ತಾತನ ಹುಟ್ಟುಹಬ್ಬ**
ಹಾಲೆಂಡ್, ಬೆಲ್ಜಿಯಮ್, ಸ್ವಿಟ್ಜರ್‌ಲೆಂಡ್ ಕಥೆಗಳು
ಅನು : ಸಿ.ಎಚ್. ಪ್ರಹ್ಲಾದರಾವ್

**ಬಾಲ ಮೇಧಾವಿ**
ಜರ್ಮನಿ ಕಥೆಗಳು
ಅನು : ಎಚ್.ಎಸ್. ರಾಘವೇಂದ್ರರಾವ್

**ಇಬ್ಬರು ಗೆಳೆಯರು**
ಸ್ಪೇನ್, ಪೋರ್ಚುಗಲ್ ಕಥೆಗಳು
ಅನು : ಕೆ.ವಿ. ನಾರಾಯಣ

**ಅಬಿಂದಾ - ಸಯಿದ್**
ಇಂಡೊನೇಷ್ಯ, ಫಿಲಿಪ್ಪೀನ್ಸ್, ಮಲಯ, ಸಿಂಗಾಪುರ, ಥಾಯ್‌ಲೆಂಡ್ ಕಥೆಗಳು
ಅನು : ಎಸ್ಸಾರ್ಕೆ

**ನಿಗೂಢ ಸೌಧ**
ಫ್ರಾನ್ಸ್ ಕಥೆಗಳು
ಅನು : ಬಸವರಾಜ ನಾಯ್ಕರ

**ಬೆಳಗಾಗುವ ಮುನ್ನ**
ಕ್ಯೂಬಾ, ಜಮೇಯಿಕ ಕಥೆಗಳು
ಅನು : ಶ್ರೀಕಾಂತ

**ಮರಳುಗಾಡಿನ ಮದುವೆ**
ಪಶ್ಚಿಮ ಏಷ್ಯ ಕಥೆಗಳು
ಅನು : ವಾಸುದೇವ

**ಕಿವುಡು ವನದೇವತೆ**
ದಕ್ಷಿಣ ಅಮೆರಿಕ ಕಥೆಗಳು
ಅನು : ಈಶ್ವರಚಂದ್ರ

**ಸಾವಿಲ್ಲದವರು**
ಪಂಚ ಮಹಾಕಾವ್ಯಗಳಿಂದ ಆಯ್ದ ಕಥೆಗಳು
ನಿರೂಪಣೆ : ಸಿ. ಕೆ. ನಾಗರಾಜ ರಾವ್

*ಹಣವನ್ನು ನವಕರ್ನಾಟಕದ ಶಾಖೆಗಳಲ್ಲಿ, ಮಳಿಗೆಗಳಲ್ಲಿ ಅಥವಾ ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಪಾವತಿಸಬಹುದು. ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / NOVEMBER 2010 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)